# ಸೂರ್ಯ-ಗ್ರಹಣ.

(ಐತಿಹಾಸಿಕ ಕಾದಂಬರಿ.)



—:ಲೇಖಕರು:—

ತ. ನಾ. ಅಮೀನಭಾವಿ,

ಟೀಚರ, ಫಿಮೇಲ ಟ್ರೇನಿಂಗ ಕಾಲೇಜ, ಧಾರವಾಡ;

ಮತ್ತು

ರಾ. ತ್ರ್ಯ. ಕರ್ಪೂರ.



—:ಪ್ರಕಾಶಕ:—

ಯ. ಗು. ಕುಲಕರ್ಣಿ,

ಎಡಿಟರ, ಸ. ಚ. ಆನಂದವನ.



[ಎರಡನೆಯ ಆವೃತ್ತಿ.]



---

೧೯೩೪.

ಬೆಲೆ ೧ ರೂ.

# ಪ್ರಸ್ತಾವನೆ.



ಈ ಮನೋಹರ ಐತಿಹಾಸಿಕ ಕಾದಂಬರಿಯು ೮|೧೦ ವರುಷಗಳ ಹಿಂದೆ ಸದ್ಬೋಧ ಚಂದ್ರಿಕೆಯಲ್ಲಿ ಪ್ರಸಿದ್ಧವಾಗಿ ಬಹು ಜನರ ಮನಸ್ಸನ್ನಾಕರ್ಷಿಸಿದ್ದರಿಂದ ಪ್ರಸ್ತುತದಲ್ಲಿ ಇದರ ಎರಡನೇ ಆವೃತ್ತಿಯನ್ನು ಹೊರಡಿಸುವದು ಅವಶ್ಯವಾಯಿತು. ಮಹಾರಾಷ್ಟ್ರರೂಪೀ ಗಗನಾಂಗಣಕ್ಕೆ ಸೂರ್ಯಸ್ವರೂಪನಾದ ಶಿವಛತ್ರಪತಿಯು ಔರಂಗಜೇಬನ ಮೋಸಕ್ಕೆ ಒಳಗಾಗಿ ಕೆಲ ದಿನ ಕಾರಾಗೃಹವಾಸ ಮಾಡಿದ ಪ್ರಸಂಗದ ವರ್ಣನೆಯು ಇದರಲ್ಲಿದ್ದದರಿಂದ ಈ ಕಾದಂಬರಿಯು 'ಸೂರ್ಯಗ್ರಹಣ' ಎಂಬ ಹೆಸರಿಗೆ ಯೋಗ್ಯವಾಗಿದೆ. ಈ ಕಾದಂಬರಿಯ ಬೀಜಭೂತ ವಿಷಯುಗಳು ಸುಪ್ರಸಿದ್ಧ ಮಹಾರಾಷ್ಟ್ರ ಕಾದಂಬರಿಕಾರರಾದ ಕೈ. ವಾ. ಹರಿ ನಾರಾಯಣ ಆಪಟೆಯವರ ಸೂರ್ಯಗ್ರಹಣ ಕಾದಂಬರಿಯಿಂದ ಶೇಖರಿಸಲ್ಪಟ್ಟಿದ್ದರಿಂದ ಮೂಲ ಕಾದಂಬರಿಕಾರರ ಕೌಶಲ್ಯವು ಇದರಲ್ಲಿ ಚನ್ನಾಗಿ ವ್ಯಕ್ತವಾಗಿರುತ್ತದೆ.

ಸ್ವರಾಜ್ಯ ಸಂಸ್ಥಾಪನೆಯ ಕೆಲಸವು ಕಠಿಣವಾಗಿದ್ದರೂ, ಈಶ್ವರೀ ಕೃಪೆಯಿಂದ ಸಹಜವಾಗಿ ಸಾಧ್ಯವಾಗುವದೆಂಬ ಮಾತು ಶಿವಛತ್ರಪತಿಯ ಉದಾಹರಣೆಯಿಂದ ಚನ್ನಾಗಿ ತಿಳಿದುಬರುವಂತಿದೆ ಆ ಕಾಲದಲ್ಲಿ ಏಕನಿಷ್ಠ ಸ್ವಾಮಿಭಕ್ತರು ಸ್ವರಾಜ್ಯ ಸಂಸ್ಥಾಪನೆಗೆ ಹ್ಯಾಗೆ ಹೆಣಗಿದರೆಂಬದೂ, ಅವರು ಹ್ಯಾಗೆ ಸ್ವಾರ್ಥತ್ಯಾಗ ಮಾಡಿದರೆಂಬದೂ ಈ ಕಾದಂಬರಿಯಿಂದ ಬಹು ವಿಶದವಾಗಿ ಬೋಧವಾಗುತ್ತದೆ ಕಾರ್ಯಸಾಧಕರಾದವರು ಪ್ರಸಂಗಕ್ಕೆ ತಕ್ಕಹಾಗೆ ನಡೆದು ಹೇಗೆ ಕಾರ್ಯಸಾಧಿಸಬೇಕೆಂಬ ಅಂಶವಾದರೂ ಇದರಲ್ಲಿ ಸಮೀಚೀನವಾಗಿ ವರ್ಣಿಸಲ್ಪಟ್ಟಿದೆ. ಒಟ್ಟಿನ ಮೇಲೆ ಈ ಕಾದಂಬರಿಯು ಮನುಷ್ಯರಲ್ಲಿ ನವಚೈತನ್ಯವನ್ನುಂಟುಮಾಡಿ ಸ್ವಾಮಿನಿಷ್ಠೆಯನ್ನು ಹುಟ್ಟಿಸುತ್ತದೆ ಇದರೊಳಗಿನ ಪಾತ್ರಗಳು ಶ್ರೇಷ್ಠತರಗತಿಯವಾಗಿರುವವು. ದೇಶವು ನಿಕೃಷ್ಟಾವಸ್ಥೆಯನ್ನು ಹೊಂದಿದಾಗ ಉಚ್ಚಮನೋಭಾವನೆಯ ವ್ಯಕ್ತಿಗಳು ಉದಯಿಸಿ, ಹ್ಯಾಗೆ ದೇಶೋದ್ಧಾರ ಮಾಡುವರೆಂಬದು ತಿಳಿದುಬರುತ್ತದೆ. ಇಂಥ ಸುಂದರ ಕಾದಂಬರಿಯ ದ್ವಿತೀಯ ಮುದ್ರಣ ಮಾಡಿಸುವ ಪ್ರಸಂಗ ಬಂದದ್ದಕ್ಕಾಗಿ ನಮಗೆ ತುಂಬಾ ಸಂತೋಷವಾಗಿದೆ ನಮ್ಮ ಪ್ರಿಯ ಕನ್ನಡಿಗರು ಈ ಸಂತೋಷಕ್ಕೆ ಭಾಗಿಗಳಾಗಬೇಕೆಂದು ಸೂಚಿಸುವೆವು.

ಶ್ರೀ ಕ್ಷೇತ್ರ ಆನಂದವನ,
ತಾ|| ೨೫-೭-೧೯೨೮

ವಿಧೇಯ,
ರಾ. ತ್ರ್ಯ. ಕರ್ಪೂರ.

# ಅನುಕ್ರಮಣಿಕೆ.

—[8o8]—





# ಸೂರ್ಯಗ್ರಹಣ.



## ೧ ಪುರಶ್ಚರಣದ ಪವಿತ್ರಸ್ಥಾನ.



ಸಹ್ಯಾದ್ರಿಯ ಬೆಟ್ಟದಡಿಯಲ್ಲಿಯ ಪರಳಿಯ ರಮ್ಯವಾದ ವನಪ್ರದೇಶವು ದಟ್ಟವಾದ ಕಿರಿಗಂಟಿಗಳಿಂದಲೂ, ದೊಡ್ಡ ದೊಡ್ಡ ವೃಕ್ಷಗಳಿಂದಲೂ ಅತ್ಯುಗ್ರವಾಗಿ ತೋರುತ್ತಲಿದೆ. ಒಂದು ಕಡೆಗೆ ಗಗನಚುಂಬಿತವಾದ ಪರ್ವತಶಿಖರಗಳು ಒಪ್ಪುತ್ತಿದ್ದರೆ, ಮತ್ತೊಂದುಕಡೆಗೆ ಆಕಾಶವನ್ನು ಭೇದಿಸುವಂಥ ಸುಂದರ ವೃಕ್ಷ ಸಮೂಹಗಳು ಕಂಗೊಳಿಸುತ್ತಲಿವೆ. ಮನುಷ್ಯ ವಸತಿಗೆ ಸ್ವಲ್ಪಾದರೂ ಆಸ್ಪದ ವಿರದ್ದರಿಂದ, ಕೃತ್ರಿಮ ಸೌಂದರ್ಯವಲ್ಲದ ನೈಸರ್ಗಿಕ ಸೌಂದರ್ಯವು ಆ ವನ ಪ್ರದೇಶವನ್ನು ಅತ್ಯುತ್ತಮವಾಗಿ ಅಲಂಕರಿಸಿರುತ್ತದೆ. ಶಾರ್ದೂಲಾದಿ ಕ್ರೂರ ಪಶುಗಳು ಆ ವನಪ್ರದೇಶದ ರೌದ್ರತೆಯನ್ನು ಹೆಚ್ಚಿಸುತ್ತಿದ್ದರೂ, ಯಾವದೋ ಒಂದು ಪ್ರಶಾಂತವಾದ ಮಹಾತೇಜವು ಆ ರೌದ್ರತೆಯ ಕೂಡ ಪ್ರತಿಸ್ಪರ್ಧೆ ಯನ್ನು ತಾಳಿ, ಆ ಪ್ರದೇಶಕ್ಕೆ ಗಾಂಭೀರ್ಯವನ್ನುಂಟು ಮಾಡುತ್ತಲಿದೆ. ನೋಡಿ ದತ್ತೆಲ್ಲ ಗಿರಿ-ಗಹ್ವರ, ದರಿ-ಕಂದರ, ಗಿಡ-ಗಂಟಿ ಇವೇ ಮೊದಲಾದವುಗಳು ಕಣ್ಣಿಗೆ ಬೀಳುತ್ತವಲ್ಲದೆ. ದುರ್ಬಲರ ದೌರ್ಬಲ್ಯತನಕ್ಕೆ ಅನುಕೂಲವಾಗಿ ಪರಿ ಣಮಿಸುವ ಸಾಧನಗಳು ಅಲ್ಲಿ ಒಂದೂ ಕಂಡುಬರುತ್ತಿರಲಿಲ್ಲ.

ಈ ಮೇರೆಗೆ ಅಳ್ಳೆದೆಯ ಜನರನ್ನು ಅಂಜಿಸುವ ಆ ವನಪ್ರದೇಶದಲ್ಲಿ ಪರಮ ಪವಿತ್ರವಾದದ್ದೊಂದು ಗುಪ್ತ ಸ್ಥಳವಿರುವದು. ಆ ಸ್ಥಳದ ಪವಿತ್ರತೆಯು ಬಹುಜನರ ಮನಸ್ಸನ್ನು ಹರಣ ಮಾಡುತ್ತಿತ್ತು; ಆದರೆ, ಆ ಏಕಾಂತಸ್ಥಾನದ ದರ್ಶನದ ಸಲುವಾಗಿ ಹಲವು ಜನರು ಹಲವು ಬಗೆಯಿಂದ ಸಾಹಸಮಾಡಿಯೂ ನೆಲೆಮುಟ್ಟದಾದರು. ಅವರಲ್ಲೊಬ್ಬರಿಗೂ ಆ ಅನುಪಮ ಮಹಿಮೆಯ ಸ್ಥಾನದ ದರ್ಶನಲಾಭವು ಒದಗಿ ಬರಲಿಲ್ಲ. ಆ ಸ್ಥಾನಕ್ಕೆ ಹೋದರೆ, ನಾವು ಸಮರ್ಥರ ಅವಕೃಪೆಗೆ ಪಾತ್ರರಾದೇವೆಂಬ ಅಂಜಿಕೆಯಿಂದ ಎಷ್ಟೋಜನರು ಆ ಉಸಾಬರಿ

ಯನ್ನೇ ಬಿಟ್ಟುಬಿಟ್ಟಿದ್ದರೂ, ಬೇರೆ ಹಲವರು ಸಮರ್ಥರ ದರ್ಶನವನ್ನು ತಕ್ಕೊಂಡೇ ತೀರುವೆವೆಂಬ ನಿಶ್ಚಯದಿಂದ ಪ್ರಯತ್ನಮಾಡಿ ಭಗ್ನಮನೋರಥ ರಾಗುತ್ತಿದ್ದರು. ಸಮರ್ಥರ ದರ್ಶನಕ್ಕೆಂದು ಆ ಪವಿತ್ರ ಸ್ಥಳದೆಡೆಗೆ ಹೋಗಲು ಯತ್ನಿಸುವ ಪ್ರತಿಯೊಬ್ಬ ಮನುಷ್ಯನಿಗೆ ದಾರಿಯಲ್ಲಿ ಅನೇಕ ಭಯಪ್ರದ ಪ್ರಸಂಗ ಗಳು ಸಂಭವಿಸಿಯೇ ಸಂಭವಿಸುತ್ತಿದ್ದವು. ಆ ವಿಘ್ನರೂಪವಾದ ಪ್ರಸಂಗಗಳಿಗೆ ಸೊಪ್ಪುಹಾಕದೆ ಮುಂದಕ್ಕೆ ಹೋಗುವ ಧೈರ್ಯವು ಒಬ್ಬರಿಗೂ ಆಗುತ್ತಿರಲಿಲ್ಲ.

ಹೀಗಿರಲು ಜಾವಳೀ ಚಂದ್ರರಾಯನು ಮರಣಹೊಂದಿದ ಸುದ್ದಿಯನ್ನು ಸಮರ್ಥರಿಗೆ ತಿಳಿಸಬೇಕೆಂದು ಆತನ ತಮ್ಮನು ವಿಲಕ್ಷಣ ಧೈರ್ಯದಿಂದ ಸಮರ್ಥ ರಿದ್ದೆಡೆಗೆ ನಡೆದನು. ಸಮರ್ಥರ ಮಾಯೆಯಿಂದ ಅವನಿಗೆ ಹಾದಿಯಲ್ಲಿ ಮುಳ್ಳಿನ ಬೇಲಿಗಳು ಅಲ್ಲಲ್ಲಿ ಹತ್ತಹತ್ತಿದವು. ಆ ಬಲಿಷ್ಠನು ತನ್ನ ಸಾಮರ್ಥ್ಯದಿಂದ ಆ ಬೇಲಿಗಳನ್ನು ಓರೆ ಮಾಡುತ್ತ ನಿರ್ಧಾರದಿಂದ ಮುಂದೆ ಮುಂದೆ ಸಾಗಲಾರಂಭಿ ಸಿದನು. ಅವನು ಕೆಲವು ಅಂತರವನ್ನು ಕ್ರಮಿಸಿದ ಬಳಿಕ, ಒಂದು ಚಮತ್ಕಾ ರವು ವರ್ತಿಸಿತು. ಆ ನಿರ್ಜನ ಪ್ರದೇಶದಲ್ಲಿ ಆ ಜಾವಳೀಕರನ ಹಿಂದಿನಿಂದ:— "ಅಪ್ಪಾ, ನೀನು ವ್ಯರ್ಥವಾಗಿ ಯಾಕೆ ಶ್ರಮಪಡುತ್ತೀ? ಅಕಸ್ಮಾತ್ತಾಗಿ ಆಗು ವದು ಆಗಿಹೋಗುತ್ತದೆ ನೀನು ಹೇಳತಕ್ಕದ್ದೇನಿರುವದು? ನಿನ್ನ ಮನಸ್ಸಿನ ಎಲ್ಲ ಸಂಗತಿಗಳನ್ನು ನಾನು ಈ ಮೊದಲೇ ತಿಳಿದಿದ್ದೇನೆ. ನೀನು ಇನ್ನು ಮೇಲೆ ಮುಂದಕ್ಕೆ ಹೆಜ್ಜೆಯನ್ನಿಡುವ ಕಾರಣವಿಲ್ಲ. ಇದರಲ್ಲಿ ಶಿವಾಜಿ ರಾಜನದು ಏನೂ ಅಕಲ್ಯಾಣವಾಗಲಿಕ್ಕಿಲ್ಲೆಂದು ತಿಳಿ. ತಿಳಿದವನಾಗಿದ್ದರೆ ನೀನು ಶಿವಾಜಿಯ ಕೂಡ ದ್ವೇಷಮಾಡದೆ, ಅವನಿಗೆ ಸಹಾಯಮಾಡು; ಹಾಗೆ ನಿನ್ನಿಂದ ಆಗುವದಿಲ್ಲೆಂಬ ದನ್ನು ನಾನು ಬಲ್ಲೆನು. ನೀಚತನದಿಂದ ನೀನು ಶಿವಬಾನ ಶತ್ರುಗಳಿಗೆ ಸಹಾಯ ಮಾಡ ಹೋಗುತ್ತೀ; ನಿನ್ನಂಥ ಅಧಮನ ಮುಖದರ್ಶನವು ನನಗೆ ಬೇಡ" ಎಂದು ಯಾರೋ ಗಂಭೀರವಾದ ವಾಣಿಯಿಂದ ನುಡಿದರು.

ಸಮೀಪದಲ್ಲಿ ಯಾರೂ ಕಾಣದೆ, ಇಂಥ ವಾಣಿಯು ಕಿವಿಗೆ ಬಿದ್ದದ್ದನ್ನು ಕೇಳಿ ಚಂದ್ರರಾಯನ ತಮ್ಮನು ಬಹು ವಿಸ್ಮಯಪಟ್ಟನು. ಈ ದಿವ್ಯವಾದ ವಾಣಿಯು ಸಮರ್ಥರದೇ ಎಂದು ಅವನ ಮನವರಿಕೆಯಾಯಿತು. ನಾನು ನಿಶ್ಚ ಯದಿಂದ ಸಮರ್ಥರ ದರ್ಶನಕ್ಕೆ ಹೊರಟದ್ದರಿಂದ ಅವರು ಹೀಗೆ ನುಡಿದಿರ ಬಹುದು; ಆದರೆ ನಾನು ಈಗ ಹಿಂದಕ್ಕೆ ತಿರುಗಲೋ ಹ್ಯಾಗೆಮಾಡಲಿ? ಎಂದು ಅವನು ಆಲೋಚಿಸಿದನು. ಇಂಥ ಅಂತರಂಗಜ್ಞಾನಿಗಳಾದ ಸಮರ್ಥರನ್ನು

ಕಾಣದಿದ್ದರೆ ನನ್ನ ಜನ್ಮವು ವ್ಯರ್ಥವು ಎಂದು ತಿಳಿದು, ಅವನು ತನ್ನ ಸಾಮರ್ಥ್ಯದ ಬಲದಿಂದ ವಿಘ್ನಗಳನ್ನು ನಿವಾರಿಸುತ್ತ ಹಾಗೇ ಮುಂದಕ್ಕೆ ನಡೆದನು. ಅವನು ಸುಮಾರು ೫೦-೬೦ ಹೆಜ್ಜೆಗಳಷ್ಟು ದೂರ ಹೋಗಿದ್ದನೋ ಇಲ್ಲವೋ ಅಷ್ಟರಲ್ಲಿ ಪುನಃ ಮೊದಲಿನಂತೆ ವಾಣಿಯು ಕೇಳಬಂದಿತು. ಹೀಗೆ ಎರಡು ಸಾರೆ ಸಮರ್ಥರು ಆಜ್ಞಾಪಿಸಿದರೂ, ಆ ಪುರುಷನು ತನ್ನ ಹಟವನ್ನು ಬಿಡಲಿಲ್ಲ. ಆಗ ಭಗವನ್ಮಾಯೆಯಿಂದ ಅಲ್ಲಿದ್ದ ಒಣಗಿದ ಕಾಷ್ಠಾದಿಗಳಿಗೆ ಒಮ್ಮಿಂದೊಮ್ಮೆ ಬೆಂಕಿ ಹತ್ತಿ ಉರಿಯತೊಡಗಿದವು. ತನ್ನ ಸುತ್ತುಮುತ್ತು ದುಸ್ಸಹವಾದ ಅಗ್ನಿಯು ಪ್ರಜ್ವಲಿಸಲು ಚಂದ್ರರಾಯನ ತಮ್ಮನು ಬೆದರಿದನು. ಇದರಲ್ಲಿ ತಾನು ನಿಶ್ಚಯವಾಗಿ ಸುಟ್ಟು ಬೂದಿಯಾಗುತ್ತೇನೆಂದು ತಿಳಿದು ಪ್ರಾಣಭಯದಿಂದ ಅವನು ನಡುಗಹತ್ತಿದನು. ಹೀಗೆ ಅವನು ಗದಗುಟ್ಟಿ ನಡುಗುತ್ತಿರಲು ಅವನಿಗೆ ಮೂರ್ಛೆಯು ಬಂದಿತು. ಮುಂದೆ ಕೆಲವು ಹೊತ್ತಿನಮೇಲೆ ಅವನು ಎಚ್ಚತ್ತು ಕಣ್ಣು ತೆರೆದು ನೋಡುತ್ತಾನೆ: ಸುತ್ತಲೂ ಅಗ್ನಿಯಿರದೆ ರಮಣೀಯವಾದ ಅರಣ್ಯವಿರುತ್ತದೆಂಬದು ಅವನಿಗೆ ಕಂಡುಬಂತು. ಅವನಿಗೆ ಆ ಅರಣ್ಯದ ಪರಿಚಯವು ಚೆನ್ನಾಗಿ ಹತ್ತಿದ್ದರಿಂದ, ಅವನು—ಓಹೋ! ನಾನು ಪರಳಿಯ ಅಡವಿಯನ್ನು ಬಿಟ್ಟು ನಮ್ಮ ಜಾವಳೀ ಪ್ರದೇಶದ ಅರಣ್ಯಕ್ಕೆ ಬಂದಿದ್ದೇನೆ, ಎಂದು ಸಖೇದಾಶ್ಚರ್ಯದಿಂದ ನುಡಿದನು

ಈ ಮೇರೆಗೆ ಜಾವಳೀ ಚಂದ್ರರಾಜನ ತಮ್ಮನು ಸಮರ್ಥರ ದರ್ಶನ ಲಾಭವು ಕೈಗೂಡದೆ ತಿರುಗಿ ತನ್ನ ಊರಿಗೆ ಬಂದಬಳಿಕ, ತನಗಾದ ಈ ಅನುಭವವನ್ನು ಅವನು ಎಲ್ಲರ ಮುಂದೆಯೂ ಹೇಳಿದನು. ಈ ಸಂಗತಿಯು ಹಾ, ಹಾ ಅನ್ನುವಷ್ಟರಲ್ಲಿ ಎಲ್ಲ ಕಡೆಗೂ ಹಬ್ಬಿತು. ಈ ಅದ್ಭುತಸುದ್ದಿಯನ್ನು ಕೇಳಿ ಜನರು:—ಶ್ರೀ ಸಮರ್ಥರು ಪುರಶ್ಚರಣದ ಪವಿತ್ರಸ್ಥಾನದಲ್ಲಿರುವವರೆಗೆ ತಾವು ಅವರ ದರ್ಶನದ ಹವ್ಯಾಸವನ್ನು ಹಿಡಿಯದೆ, ಇಲ್ಲಿಯೇ ಅವರ ಪಾದುಕೆಯ ದರ್ಶನಮಾತ್ರದಿಂದ ಸಂತುಷ್ಟರಾಗಬೇಕೆಂದು ನಿಶ್ಚಯಿಸಿಕೊಂಡರು.

ಪ್ರಿಯವಾಚಕರೇ, ಈ ಮೇಲೆ ವರ್ಣಿಸಿದ ಸಂಗತಿಗಳಿಂದ ಆ ಪವಿತ್ರಸ್ಥಾನವು ಸಮರ್ಥರ ಪುರಶ್ಚರಣದ ಪುಣ್ಯಭೂಮಿಯೆಂದು ನಿಮಗೆ ವಿದಿತವಾಗಿರಬಹುದಷ್ಟೇ? ಈ ಪುಣ್ಯಸ್ಥಳದಲ್ಲಿ ಆ ಮಹಾತ್ಮರು ವರ್ಷದಲ್ಲಿ ಒಮ್ಮೊಮ್ಮೆ ೧೧ ದಿವಸ, ಇಲ್ಲವೆ ೨೧ ದಿವಸ, ಇಲ್ಲವೆ ನಾಲ್ನಾಲ್ಕು ತಿಂಗಳುಗಳವರೆಗೆ ಪ್ರಾಚೀನ ಋಷಿಗಳಂತೆ ತಪಶ್ಚರ್ಯಕ್ಕೆ ಕೂಡ್ರುತ್ತಿದ್ದರು. ಸಮರ್ಥರು ತಪಶ್ಚರ್ಯಕ್ಕೆ

ಕೂತರೆಂದರೆ ಯಾರಿಗೂ ಅಲ್ಲಿ ಪ್ರವೇಶಮಾಡಲು ಅವಕಾಶವಿರುತ್ತಿರಲಿಲ್ಲ; ವಿಶೇಷ ಕೆಲಸವಿದ್ದ ಹೊರತು ಯಾರೂ ಇಲ್ಲಿಗೆ ಬಂದು ತಮ್ಮ ತಪೋಭಂಗಮಾಡ ಕೂಡದೆಂದು ಸಮರ್ಥರು ತಮ್ಮ ಮುಖ್ಯಶಿಷ್ಯರಿಗೆ ಸಹ ಅಪ್ಪಣೆಮಾಡಿದ್ದರು. ಆದ್ದರಿಂದ ಕಲ್ಯಾಣಸ್ವಾಮಿ, ಶ್ರೀಧರಸ್ವಾಮಿ, ವೇಣೂಬಾಯಿ ಇವರೇ ಮೊದಲಾದ ಸಮರ್ಥರ ಪ್ರಮುಖ ಶಿಷ್ಯರು ಕ್ವಚಿತ್ತಾಗಿ ಅಲ್ಲಿಗೆ ಹೋಗಿಬರುತ್ತಿದ್ದರು ಪುರಶ್ಚರಣಕ್ಕೆ ಕೂತಬಳಿಕ ಸಮರ್ಥರಿಗೆ ಅನ್ನ ನೀರುಗಳು ಬೇಕಾಗುತ್ತಿರಲಿಲ್ಲ. ಆದ್ದರಿಂದ ಆ ಶಿಷ್ಯರಿಗೆ ಸಮರ್ಥರ ಕಡೆಗೆ ಹೋಗುವ ಪ್ರಸಂಗಗಳು ಬಹುತರವಾಗಿ ಬರುತ್ತಿದ್ದಿಲ್ಲ; ಪುರಶ್ಚರಣ ಮುಗಿಯುವ ದಿವಸ ಮಾತ್ರ ಆ ತ್ರಿವರ್ಗ ಶಿಷ್ಯೋತ್ತಮರು ಸಮರ್ಥರ ಬಳಿಗೆ ಹೋಗುತ್ತಿದ್ದರು.

ಈ ಮೇರೆಗೆ ಕ್ರಮವಿರುತ್ತಿರಲು, ನಮ್ಮ ಈ ಹೊಸ ಕಥಾನಕವು ಪ್ರಾರಂಭವಾಗುವ ದಿವಸವೇ ಸಮರ್ಥರ ಪುರಶ್ಚರಣವು ಸಮಾಪ್ತವಾಗುತ್ತಿತ್ತು. ಆ ದಿವಸ ಮೇಲೆ ಹೇಳಿದ ಸಮರ್ಥರ ಶಿಷ್ಯೋತ್ತಮರಾದ ಆ ತ್ರಿವರ್ಗರು, ಸಮರ್ಥರಿಗಾಗಿ ಕೆಲವು ಆಹಾರದ ಸಾಮಗ್ರಿಗಳನ್ನು ತಕ್ಕೊಂಡು, ಆ ಪವಿತ್ರ ಸ್ಥಾನಕ್ಕೆ ನಡೆದರು. ಅವರಿಗೆ ಹಾದಿಯಲ್ಲಿ ಚೇಳಾಗಲಿ, ಹಾವಾಗಲಿ ಇಲ್ಲವೆ ಹುಲಿಗಳಾಗಲಿ ಉಪದ್ರವ ಕೊಡಲಿಲ್ಲ ಅವರು ನಿಶ್ಶಂಕೆಯಿಂದ ಪುರಶ್ಚರಣ ಸ್ಥಾನದ ಸೀಮಾಸಮೀಪದ ವರೆಗೆ ಬಂದರು. ಆ ಪವಿತ್ರಸ್ಥಾನದ ಸುತ್ತುಮುತ್ತು ಸುಮಾರು ೨೦೦ ಅಡಿಗಳ ಪ್ರಮಾಣವುಳ್ಳ ಪರಿಘದೊಳಗೆ ಒಂದಾದರೂ ಗಿಡಗಂಟೆಗಳಿದ್ದಿಲ್ಲ; ವೃಕ್ಷಗಳಿದ್ದಿಲ್ಲ. ಪ್ರಶಸ್ತವಾದ ಬೈಲುಪ್ರದೇಶವು ಮನೋಹರವಾಗಿ ಒಪ್ಪುತ್ತಿತ್ತು ಆ ವಿಶಾಲವಾದ ಬಟ್ಟಬೈಲಪ್ರದೇಶದಲ್ಲಿ ಹಚ್ಚಗೆ ಹಸರು ಮುರಿಯುತ್ತಿರುವ, ದಟ್ಟಿಲೆಗಳಿಂದ ಆಚ್ಛಾದಿತವಾದ ಒಂದು ಪೆಳೆಯು ಇತ್ತು. ಆ ಪೆಳೆಯಲ್ಲಿ ಸೇರಿ, ಸೂಕ್ಷ್ಮವಾಗಿ ಪರೀಕ್ಷಿಸಿದರೆ, ಒಂದು ಸುಂದರವಾದ ಗುಹೆಯು ದೃಷ್ಟಿಗೆ ಬೀಳುತ್ತಿತ್ತು. ಈ ಗುಹೆಯ ದ್ವಾರದಲ್ಲಿ ಗಾಢಾಂಧಃಕಾರವು ವ್ಯಾಪಿಸಿದ್ದರೂ, ಒಳಗೆ ದೇದೀಪ್ಯವಾದ ಪ್ರಕಾಶವು ಇರುವದೆಂಬದು ಅಲ್ಲಿಗೆ ಹೋದವರ ಅನುಭವಕ್ಕೆ ಬಾರದೆ ಇರುತ್ತಿದ್ದಿಲ್ಲ.

ಇಂಥ ತಪೋಭೂಮಿಯ ಸಂದರ್ಶನವು ಸಾಮಾನ್ಯರಿಗೆ ಅಸಾಧ್ಯವೆಂಬದು ನಮ್ಮ ವಾಚಕರ ಮನಸ್ಸಿನಲ್ಲಿ ಬಂದಿರಬಹುದು; ಪುಣ್ಯಪುರುಷರ ಹಾಗೂ ಪುಣ್ಯಸ್ಥಳಗಳ ದರ್ಶನಕ್ಕೆ ಹೋಗಬೇಕಾದರೆ, ನಮ್ಮಲ್ಲಿ ಪವಿತ್ರತೆಯು ಇರಬೇಕಾಗುತ್ತದೆ. ಮನಸ್ಸಿನ ಪರಿಶುದ್ಧತೆಯನ್ನು ಹೊಂದದ ನಾವು, ಅಂಥವರ ದರ್ಶನಕ್ಕೆ

ಅಯೋಗ್ಯರಾದದ್ದರಲ್ಲಿ ಆಶ್ಚರ್ಯವೇನು? ಮೇಲೆ ಹೇಳಿದಂತೆ ಸಮರ್ಥರ ಶಿಷ್ಯರು ಅಲ್ಲಿಗೆ ಬಂದ ಬಳಿಕ ಅವರು ಸಮರ್ಥರ ಪುರಶ್ಚರಣವು ಮುಗಿದದೆಯೋ, ಇಲ್ಲವೋ ಎಂಬದನ್ನು ನೋಡಬೇಕೆಂದು ಮೇಲೆ ವರ್ಣಿಸಿದ ಗುಹೆಯಲ್ಲಿ ಹಣಿಕಿ ಹಾಕಿದರು. ಆಗ ಅವರಿಗೆ ಸಮರ್ಥರ ದಿವ್ಯದರ್ಶನವಾಗಿ ಇನ್ನೂ ಪುರಶ್ಚರಣವು ಮುಗಿದಿಲ್ಲೆಂಬದು ಕಂಡು ಬಂತು. ಅಂದು ಕಡೆಯ ದಿವಸವಿದ್ದದರಿಂದ ಸಮರ್ಥರ ಪುರಶ್ಚರಣ ಮುಗಿಯುವವರೆಗೆ ತಾವು ಕೂತುಕೊಳ್ಳುವದು ಯುಕ್ತವೆಂದು ಯೋಚಿಸಿ ಆ ಮೂವರು ಗುಹೆಯ ಹೊರಭಾಗದಲ್ಲಿ ಸ್ವಲ್ಪ ಅಂತರದ ಮೇಲೆ ಕುಳಿತುಕೊಂಡರು.

ಇಬ್ಬರು ಮೂವರು ಒಂದೆಡೆಯಲ್ಲಿ ಕೂಡಿದರೆಂದರೆ ಅಲ್ಲಿ ಬಹಳ ಹೊತ್ತು ಮೌನವು ಉಳಿಯಲಾರದೆಂಬದು ಸ್ವಾಭಾವಿಕವು; ಏನಾದರೂ ಮಾತಾಡಬೇಕೆಂಬ ಇಚ್ಛೆಯು ಅವರಲ್ಲುಂಟಾಗುವದು ಸಹಜವು; ಈ ನಮ್ಮ ಸಮರ್ಥರ ಶಿಷ್ಯತ್ರಯರಲ್ಲಿಯೂ ಈ ನಿಯಮವು ಪ್ರಕಟವಾಯಿತು. ಕ್ಷಣದಲ್ಲಿ ಅಲ್ಲಿಯ ಶಾಂತತೆಯನ್ನು ಭಂಗಪಡಿಸಿ, ಶ್ರೀಧರಸ್ವಾಮಿಗಳು ಮಾತಾಡತೊಡಗಿದರು:—

ಶ್ರೀಧರಸ್ವಾಮಿ:—ಬಹುದಿವಸಗಳಿಂದ ಮಹಾರಾಜರು ಯಾಕೋ ಇತ್ತ ಕಡೆಗೆ ಸುಳಿದಿರುವದಿಲ್ಲ. ಕಾರ್ಯಬಾಹುಲ್ಯದ ಮೂಲಕ ನನಗೂ ಅವರ ಕಡೆಗೆ ಹೋಗಲಿಕ್ಕೆ ಕೂಡಿಲ್ಲ. ಹೀಗಾಗಿ ಮಹಾರಾಜರ ಕಡೆಯ ಸುದ್ದಿಯೇ ಇಲ್ಲದಾಗಿದೆ; ಸಮರ್ಥರಿಗೆ ಪತ್ರಪೀಳಿಗೆಗಳೇನಾದರೂ ಬರಬೇಕಾಗಿತ್ತು; ಸದ್ಯಕ್ಕೆ ಅವೂ ಇಲ್ಲ. ಇದರ ಮೇಲಿಂದ ನೋಡಲು, ಮಹಾರಾಜರು ಯಾವದೋ ಒಂದು ಬಹು ದೊಡ್ಡ ಕಾರ್ಯದಲ್ಲಿ ತೊಡಗಿದಂತೆ ತೋರುತ್ತದೆ.

ಕಲ್ಯಾಣಸ್ವಾಮಿ:—ಓವಾ! ಶಿವಾಜಿಮಹಾರಾಜರು ವಿಲಕ್ಷಣ ಪುರುಷರಾಗಿದ್ದಾರೆ. ರಾಜಕರಣದ ಮಹಾಕಾರ್ಯದಲ್ಲಿ ಸಮರ್ಥರಿಗೆ ಎಂಥ ಶಿಷ್ಯರ ಅವಶ್ಯಕತೆಯಿತ್ತೋ ಅಂಥ ಶಿಷ್ಯರೇ ಶಿವಾಜಿರಾಜರಿರುತ್ತಾರೆಂಬದರಲ್ಲಿ ಏನೂ ಸಂದೇಹವಿಲ್ಲ. ಜನರು ಶಿವಾಜಿರಾಜನ ಈ ಬಹು ದೊಡ್ಡ ಯೋಗ್ಯತೆಯನ್ನರಿಯದೆ, ನನಗೆ ಸಮರ್ಥರ ಪಟ್ಟಶಿಷ್ಯನೆಂದು ಅನ್ನುತ್ತಾರೆ. ನಿಜವಾಗಿ ನೋಡಿದರೆ ಶಿವಾಜಿಯೇ ಸಮರ್ಥರ ಪಟ್ಟಶಿಷ್ಯನು. ಶಿವಾಜಿರಾಜನು ರಾಷ್ಟ್ರೀಯ ಕಾರ್ಯದಲ್ಲಿ ಸಮರ್ಥರಿಗೆ ಅತ್ಯಂತ ಪ್ರಿಯನಾಗಿ ಕೇವಲ ರಾಜರ್ಷಿಯಂತೆ ಒಪ್ಪುತ್ತಿರುವನು. ಸಮರ್ಥರಲ್ಲಿ ಶಿವಾಜಿಯ ವಿಷಯಕ್ಕಿದ್ದ ಪ್ರೇಮವನ್ನು ನೋಡಿದರೆ, ಅದು ಕಲ್ಪನೆಗೆ ಮೀರಿದ್ದೆಂದು ವ್ಯಕ್ತವಾಗುತ್ತದೆ. ಇಂಥ ಯೋಗ್ಯತೆಯ

ಶಿವಾಜಿರಾಜನನ್ನು ಸಂಗಟ್ಟುವದು ಯಾರಿಂದಲೂ ಆಗದು! ಅವರು ಅಂಥ ದೊಡ್ಡ ಕೆಲಸವಿದ್ದ ಹೊರತು ಸಮರ್ಥರ ದರ್ಶನಕ್ಕೆ ವಿಲಂಬಮಾಡುವದಿಲ್ಲ.

ವೇಣುಬಾಯಿ:—ಅಪ್ಪಗಳಿರಾ, ಇದಕ್ಕೆ ಕಾರಣವಾದರೂ ಬಲವಾದದ್ದಿರುವದು; ನರನಾರಾಯಣರಿಗಿದ್ದ ಸಂಬಂಧವು ಶಿವಾಜಿಗೂ, ಸಮರ್ಥರಿಗೂ ಇರುತ್ತದೆ. ಮಹಾರಾಜರ ನಡತೆಯ ಮೇಲೆ ಯಾವಾಗಲೂ ಸಮರ್ಥರ ಸೂಕ್ಷ್ಮದೃಷ್ಟಿಯು ಇದ್ದೇ ಇರುತ್ತದೆ. ಅವರು ಮಹಾರಾಜರಂಥ ಜಗದ್ವಿಖ್ಯಾತ ವಿಭೂತಿಯ ಕೈಯಿಂದ ಲೋಕಕಲ್ಯಾಣದ ಅನೇಕ ಮಹಾಕಾರ್ಯಗಳನ್ನು ಮಾಡಿಸುವ ಸಂಕಲ್ಪವನ್ನೇ ಮಾಡಿರುತ್ತಾರೆ. ಅಂದಬಳಿಕ, ಶಿವಾಜಿಯ ಯೋಗ್ಯತೆಯನ್ನೂ, ಅವನ ಕಾರ್ಯದ ಮಹತ್ವವನ್ನೂ ಯಾರು ವರ್ಣಿಸುವರು? ಅವನು ಪ್ರತ್ಯಕ್ಷ ದರ್ಶನಕ್ಕೆ ಬರದಿದ್ದರೂ, ಅವನ ಮನಸ್ಸೆಲ್ಲ ಸಮರ್ಥರಲ್ಲಿಯೇ ಇರುತ್ತದೆ.

ಶ್ರೀಧರಸ್ವಾಮಿ:—ಮಹಾರಾಜರು, ನಿಶ್ಚಯವಾಗಿ ದೊಡ್ಡ ವಿಭೂತಿಯಾಗಿರುವರು. ಆ ವಿಭೂತಿಯ ಮೇಲೆ ಸಮರ್ಥರ ಕೃಪೆಯು ಅಖಂಡವಾಗಿರುತ್ತದೆ. ಆ ಪುಣ್ಯವಂತನ ಈ ದೀರ್ಘಪ್ರಯತ್ನದಿಂದ ಗೋಬ್ರಾಹ್ಮಣರ ಗೋಳು ಪರಿಹಾರವಾಗಬೇಕಾಗಿದೆ.

ಕಲ್ಯಾಣಸ್ವಾಮಿ:—ಇರಲಿ; ಸ್ವಾಮಿಗಳೇ, ದಿಲ್ಲಿಯ ಬಾದಶಹನ ಮಗನಾದ ಶಾಹಾಜಾದನು ಯಾವ ಕಾರಣದಿಂದಲೋ ಏನೋ ಮಹಾರಾಜರ ಸಹಾಯವನ್ನು ಕೇಳುತ್ತಿರುವನಂತೆ; ಮಹಾರಾಜರು ಅವನಿಗೆ ಸಹಾಯ ಮಾಡುವದನ್ನು ತಪ್ಪಿಸಿಕೊಳ್ಳುವ ಹವಣಿಕೆಯಲ್ಲಿರುವರಂತೆ. ಇದರಲ್ಲಿ ಅವರಿಬ್ಬರ ಉದ್ದೇಶಗಳೇನಿರುವವು?

ಶ್ರೀಧರಸ್ವಾಮಿ:—ಶಾಹಾಜಾದನು ಔರಂಗಜೇಬನ ಮಗನೆಂಬದು ಪ್ರಸಿದ್ಧವಷ್ಟೆ? ಆ ತಂದೆಮಕ್ಕಳು, ತೋರಿಕೆಗಾಗಿ ತಮ್ಮತಮ್ಮೊಳಗೆ ವೈಮನಸ್ಸಿದ್ದಂತೆ ನಟಿಸುತ್ತಿರುವರೋ ಹ್ಯಾಗೆಂಬದು ಯಾರಿಗೆ ಗೊತ್ತು! ಕಾರ್ಯಸಾಧಕರಾದ ಆ ನೀಚರು ಏನು ಮಾಡಿಯಾರು-ಏನು ಮಾಡಲಿಕ್ಕಿಲ್ಲವೆಂಬ ನಿಯಮವಿಲ್ಲ. ಅವರು ಕೃತಘ್ನರೆಂಬದು ಮಹಾರಾಜರಿಗೆ ಸಂಪೂರ್ಣವಾಗಿ ಗೊತ್ತಿದ್ದದ್ದರಿಂದ ಅವನಿಗೆ ಒಮ್ಮೆಲೆ ಸಹಾಯ ಮಾಡಲಿಕ್ಕೆ ಒಪ್ಪಲೊಲ್ಲರು. ನಮ್ಮ ಮಹಾರಾಜರು ಒಳ್ಳೇ ಧೂರ್ತರಿರುವರು. ಅವರು ಹದಿನಾರು ವರ್ಷದವರಿದ್ದಾಗಿನಿಂದಲೇ ನಾನು ಅವರ ಚಾತುರ್ಯವನ್ನು ಪರಿಕ್ಷಿಸುತ್ತ ಬಂದಿದ್ದೇನೆ. ಶಾಹಾ

ಜಾದನೂ, ಔರಂಗಜೇಬನೂ ಯಾವಾಗ ಒಂದಾದಾರೆಂಬ ನಿಯಮವಿಲ್ಲದ್ದರಿಂದ ಮಹಾರಾಜರಿಗೆ ಅವನ ಸಂಗತಿಯು ಬೇಡಾಗಿದೆ.

ಕಲ್ಯಾಣಸ್ವಾಮಿ:—ನೀವನ್ನುವದು ನಿಜವು; ಆದರೆ ಶಾಹಾಜಾದನು ಸಜ್ಜನನೂ, ನಿಷ್ಕಪಟಿಯೂ ಇರುವನೆಂದು ನಾನು ಕೇಳಿರುವೆನಲ್ಲ; ಇದಕ್ಕೆ ನಿಮ್ಮ ಅಂಬೋಣವೇನು?

ಶ್ರೀಧರಸ್ವಾಮಿ:—ಶಾಹಾಜಾದನು ಸದ್ಯಕ್ಕೆ ಉತ್ತಮನೆಂದು ಜನರಲ್ಲಿ ಪ್ರಸಿದ್ಧಿಯು ಇದ್ದರೂ ಅವನು ಮಹಾಕಪಟಿಯಾದ ಔರಂಗಜೇಬನಿಂದ ಹುಟ್ಟಿದವನಾದ್ದರಿಂದ ಅವನ ನಂಬಿಕೆಯನ್ನು ಹಿಡಿಯಕೂಡದು. ತಂದೆಯ ಸುಪ್ರಸನ್ನತೆಗಾಗಿ ಅವನು ಇಂಥ ವೇಷಹಾಕಿದ್ದರೂ ಹಾಕಿರಬಹುದು.

ಕಲ್ಯಾಣಸ್ವಾಮಿ:—ಸ್ವಾಮಿಗಳೇ, ನಿಮ್ಮ ವಿಚಾರಗಳು ಇಂಥ ರಾಜಕರಣದಲ್ಲಿ ಬಹಳ ಚನ್ನಾಗಿರುವವು. ನೀವೂ ಸಹ ಮೋರೋಪಂತ ಪಿಂಗಳೆ ಮೊದಲಾದವರಂತೆ ಈ ರಾಜಕರಣಗಳಲ್ಲಿ ಸೇರತಕ್ಕವರು, ಇಲ್ಲಿ ಯಾಕೆ ಈ ಅಧ್ಯಾತ್ಮಿಕಕ್ಕೆ ಬಂದಿರುವಿರೋ, ಏನೋ?

ಶ್ರೀಧರಸ್ವಾಮಿ:—ಕಲ್ಯಾಣಾ! ಅದು ನನಗೆ ಬೇಡಾಗಿದೆ. ಮಹಾರಾಜರು ನನಗೆ ಬಹಳ ರೀತಿಯಿಂದ ಹೇಳಿದರು. ಆದರೆ, ಸಮರ್ಥರ ಸೇವೆಯಲ್ಲಿ ಕಾಲಕಳೆಯಬೇಕೆಂದು ನನ್ನ ಮನೋದೇವತೆಯು ಹೇಳಹತ್ತಿದ್ದರಿಂದ ನಾನು ಆ ಗೊಂದಲದಲ್ಲಿ ಬೀಳಲಿಲ್ಲ. ಮೊದಮೊದಲು ನಾನು ಅನೇಕ ಗೊಂದಲಗಳಲ್ಲಿ ಸೇರಿ, ಬೇಕಾದಂಥ ಮಹತ್ಕಾರ್ಯಮಾಡಿರುವೆನು. ಈಗ ಯಾಕೋ ಸಮರ್ಥರ ಚರಣಬಿಟ್ಟು ಮನಸ್ಸು ಹೋಗದಂತಾಗಿದೆ. ಆದರೆ,..................

ಈ ಮೇರೆಗೆ ಆ ತ್ರಿವರ್ಗರಲ್ಲಿ ಸಂಭಾಷಣಗಳು ನಡೆದಿರಲು, ಶ್ರೀಧರಸ್ವಾಮಿಗಳ ಕಡೆಯ ಮಾತು ಮುಗಿಯುವದರೊಳಗೆ ಗವಿಯಲ್ಲಿ ಬುಭುಃಕಾರವಾಯಿತು. ಕೂಡಲೆ ಆ ಶಿಷ್ಯತ್ರಯರು ಸಮರ್ಥರ ಪುರಶ್ಚರಣವು ಮುಗಿಯಿತೆಂದು ಆ ಗುಹೆಯನ್ನು ಪ್ರವೇಶಿಸಿದರು. ಆಗ ಸಮರ್ಥರು ಪದ್ಮಾಸನದ ಮೇಲೆ ಶ್ರೀ ರಘುವೀರನ ಜಯಘೋಷವನ್ನು ಮಾಡುತ್ತ ಕಣ್ಣುಮುಚ್ಚಿಕೊಂಡು ಕುಳಿತಿದ್ದರು. ಆ ದಿವ್ಯ ಮೂರ್ತಿಯನ್ನು ನೋಡುತ್ತ ಕಲ್ಯಾಣಸ್ವಾಮಿಯು ಸಮರ್ಥರ ಬಲಕ್ಕೆ ನಿಂತನು; ಶ್ರೀಧರಸ್ವಾಮಿಗಳು ಎಡಭಾಗದಲ್ಲಿ ನಿಂತರು; ವೇಣೂಬಾಯಿಯು ಸಮರ್ಥರ ಬೆನ್ನಹಿಂದೆ ನಿಂತುಕೊಂಡಳು. ಈ ಬಗೆಯಾಗಿ ಆ ಶಿಷ್ಯತ್ರಯರು ನಿಲ್ಲಲು, ಸಮರ್ಥರು ಸಮಾಧಿಯನ್ನು ಮೆಲ್ಲ

ಮೆಲ್ಲನೆ ಇಳಿಸತೊಡಗಿದರು. ಸಮಾಧಿಯು ಇಳಿದ ಬಳಿಕ ಸಮರ್ಥರು ಶ್ರೀ ರಘುವಿನ ಹಾಗು ಬಲಭೀಮನ ನಾಮಘೋಷವನ್ನು ಬಲು ಒತ್ತರದಿಂದ ಉಚ್ಚ ರಿಸಹತ್ತಿದರು. ಹೀಗೆ ಕೆಲವು ಕಾಲ ಕ್ರಮಿಸಲು, ಸಮರ್ಥರು ಕಣ್ಣುತೆರೆದು ಮೊಟ್ಟಮೊದಲು ಶ್ರೀಧರಸ್ವಾಮಿಗಳನ್ನು ನೋಡಿದರು. ಶ್ರೀಧರಸ್ವಾಮಿಗಳು ಕಣ್ಣಿಗೆ ಬಿದ್ದಕೂಡಲೆ ಸಮರ್ಥರು:—ಏನು, ಶ್ರೀಧರಸ್ವಾಮಿಗಳೇ, ಸೂರ್ಯ ಗ್ರಹಣದ ಯೋಗವಿರುತ್ತದೆಂಬದು ನಿಮಗೆ ತಿಳಿದದೆಯೇನು? ಕೆಲವು ಕಾಲದವರೆಗೆ ಖಗ್ರಾಸ ಸೂರ್ಯಗ್ರಹಣದ ಯೋಗವಿರುವದು! ಎಂದು ನುಡಿದು, ಸುಮ್ಮ ನಾದರು. ಸಮಾಧಿಯನ್ನಿಳಿಸಿದ ಬಳಿಕ ಬಳಿಯಲ್ಲಿದ್ದ ಝುರಿಗೆ ಹೋಗಿ ಮುಖ ಪ್ರಕ್ಷಾಲನ ಆಚಮನಾದಿಗಳನ್ನು ಮಾಡಿದ ಹೊರತು ಯಾರ ಸಂಗಡಲೂ ಮಾತಾಡುತ್ತಿದ್ದಿಲ್ಲ. ಹೀಗಿದ್ದು ಈ ದಿನ ಮಾತಾಡಿದ್ದನ್ನು ಕೇಳಿ, ಶ್ರೀಧರಸ್ವಾಮಿ ಗಳಿಗೆ ಆಶ್ಚರ್ಯವಾಗಿ ಸಮರ್ಥರ ವಾಣಿಯ ಅರ್ಥವಿವೇಚನ ಮಾಡತೊಡಗಿ ದರು; ಆದರೆ ಪರಮ ಗೂಢವಾದ ಸಮರ್ಥರ ವಾಣಿಯ ನಿಜವಾದ ಭಾವವು ಶ್ರೀಧರಸ್ವಾಮಿಗಳಿಗೆ ಹೊಳೆಯಲೊಲ್ಲದು. ಹೀಗೆ ಅವರು ವಿಚಾರಮಗ್ನರಾಗಿ ರಲು, ಸಮರ್ಥರು ಪುನಃ ಪುನಃ—ಒಟ್ಟಿಗೆ ಖಗ್ರಾಸ ಸೂರ್ಯಗ್ರಹಣದ ಯೋಗ ವಿರುತ್ತದೆ; ರಾಹುಗ್ರಹವು ಸೂರ್ಯನನ್ನು ನುಂಗದೆ ಬಿಡುವದಿಲ್ಲ. ಆದರೂ, ಆದರೂ ಏನೂ ಭಯವಿಲ್ಲ. ರಾಹುಗ್ರಸ್ತ ಸೂರ್ಯನು ಬೇಗನೆ ಮುಕ್ತನಾಗು ವನು. ಹೀಗೆ ಮುಕ್ತನಾದ ಬಳಿಕ ಅವನು ವಿಶೇಷವಾಗಿ ತೇಜಃಪುಂಜನಾಗು ವನು! ಚಿಂತೆಗೆ ಕಾರಣವಿಲ್ಲ; ಎಂದು ಅನ್ನಹತ್ತಿದರು.

ಸಮರ್ಥರ ಈ ಮಾತುಗಳು ಯಾರನ್ನೂ ಉದ್ದೇಶಿಸಿರದೆ, ಅವನ್ನು ಅವರು ತಮ್ಮಷ್ಟಕ್ಕೆ ತಾವೇ ಅಂದುಕೊಳ್ಳುತ್ತಿದ್ದಾರೆಂದು ಅಲ್ಲಿ ನಿಂತ ಶಿಷ್ಯತ್ರಯ ರಿಗೆ ಸ್ಪಷ್ಟವಾಗಿ ತಿಳಿಯಿತು. ಅವರು ಸಮರ್ಥರ ಈ ಅಚಿಂತ್ಯವಾಣಿಯ ವಿವೇ ಚನೆಯನ್ನು ತಮ್ಮೊಳಗೆ ಮಾಡಿಕೊಳ್ಳುತ್ತ ಪುರಶ್ಚರಣದ ಪವಿತ್ರಸ್ಥಾನದಲ್ಲಿಯೇ ನಿಂತುಕೊಂಡರು.

---

## ೨ ಮೂವರು ದಾರಿಕಾರರು.

ಸಮರ್ಥರು ಪುರಶ್ಚರಣಕ್ಕೆ ಕುಳಿತ ಗವಿಯಹತ್ತರ ಹಿಂದಿನ ಪ್ರಕರಣದಲ್ಲಿ ಹೇಳಿದ ಸಂಗತಿಯು ನಡೆದಿರಲು, ಅದೇ ದಿವಸ ಅದೇ ಕಾಲಕ್ಕೆ ಅಲ್ಲಿಂದ

ಸುಮಾರು ನಾಲ್ಕು ಹರದಾರಿಯ ಮೇಲೆ ಮೂವರು ದಾರಿಕಾರರು ತಮ್ಮ ಸುತ್ತ ಮುತ್ತಲಿನ ಸೃಷ್ಟಿಸೌಂದರ್ಯವನ್ನು ನೋಡುತ್ತ ಸ್ವಾಮಿಗಳ ಸ್ಥಾನದ ಹಾದಿಯನ್ನು ಹಿಡಿದು ಬರುತ್ತಿದ್ದರು. ಅವರಲ್ಲಿ ಒಬ್ಬನು ಒಂದು ದೊಡ್ಡ ಕರಿಯ ಕುದುರೆಯ ಮೇಲೆ ಕುಳಿತಿದ್ದನು. ಅವನು ಗಿಡ್ಡನೂ, ಉದ್ದಮೋರೆಯುಳ್ಳವನೂ ಆಗಿದ್ದನು. ಅವನ ಮೂಗು ದೊಡ್ಡದೂ, ಉದ್ದವಾದದ್ದೂ ಇದ್ದು, ಗಿಳಿಯ ಮೂಗಿನಂತೆ ಕಾಣುತ್ತಿತ್ತು. ಅವನ ಕಣ್ಣುಗಳಲ್ಲಿ ವಿಲಕ್ಷಣವಾದ ಕಾಂತಿಯು ಇತ್ತು. ಇವುಗಳಿಂದ ಅವನು ಅಸಾಮಾನ್ಯ ಪುರುಷನಾಗಿರುವನೆಂಬದು ನೋಡುವವರಿಗೆ ಕೂಡಲೆ ಗೊತ್ತಾಗುತ್ತಿತ್ತು. ಅದೇ ಪ್ರಕಾರ ಆತನ ದೃಷ್ಟಿಯು ಬಲು ತೀಕ್ಷ್ಣವಾದದ್ದಿತ್ತು. ಆತನು ಯಾರನ್ನಾದರೂ ನೋಡ ಹತ್ತಿದರೆ ಅವರ ಅಂತಃಕರಣವು ಒಂದು ಹದನಾದ ಮೊನೆಯುಳ್ಳ ಬಾಣದಿಂದ ಚುಚ್ಚಲ್ಪಟ್ಟಂತೆ ಅಸ್ವಸ್ಥವಾಗುತ್ತಿತ್ತು. ಯಾವನೊಬ್ಬನ ಮನಸ್ಸಿನಲ್ಲಿ ಗುಪ್ತ ಸಂಗತಿಯು ಇದ್ದರೆ ಅವನು ಈ ಗೃಹಸ್ಥನ ಕಣ್ಣುಮರೆಯಾಗಲಿಕ್ಕೆ ಹವಣಿಸುವನು; ಮತ್ತು ಚಮತ್ಕಾರದ ಸಂಗತಿಯು ಯಾವದೆಂದರೆ, ಈ ಗೃಹಸ್ಥನು ಯಾರಮೇಲೆ ಕೃಪಾದೃಷ್ಟಿಯನ್ನು ಚಲ್ಲುವನೋ, ಅವರಿಗೆ ತಮ್ಮ ಮೇಲೆ ಕೃಪಾಛತ್ರವಿದ್ದಂತೆ ಭಾಸವಾಗುತ್ತಿತ್ತು! ಅವನ ಮುಖಮುದ್ರೆಯು ಗಂಭೀರವೂ, ಉದಾತ್ತವೂ ಆಗಿದ್ದು, ಮನಸ್ಸು ಸರ್ವದಾ ವಿಚಾರಮಗ್ನವಾಗಿರುವದೆಂಬದನ್ನು ವ್ಯಕ್ತಪಡಿಸುತ್ತಿತ್ತು. ಅವನು ಶಸ್ತ್ರಾಸ್ತ್ರಗಳನ್ನು ಧರಿಸಿ ಕುದುರೆಯ ಮೇಲೆ ಕೂತದ್ದನ್ನು ನೋಡಿದರೆ, ಈ ಮಹಾಪುರಷನು ಈ ಪ್ರಕಾರ ಕುದುರೆಯ ಮೇಲೆ ಕೂಡ್ರುವದಕ್ಕಾಗಿಯೂ, ಶಸ್ತ್ರಾಸ್ತ್ರಗಳನ್ನು ಧರಿಸಿ ಅನಾಥರ ಸಂರಕ್ಷಣೆಯನ್ನು ಮಾಡುವದಕ್ಕಾಗಿಯೂ ಜನ್ಮತಾಳಿದಂತೆ ಕಾಣುತ್ತಿತ್ತು.

ಇನ್ನೊಬ್ಬ ಗೃಹಸ್ಥನು ಅಂದರೆ ಮೇಲೆ ಹೇಳಿದ ಗೃಹಸ್ಥನ ಸಂಗಡಿಗನು ಅವನಿಗಿಂತ ಸ್ವಲ್ಪ ಎತ್ತರವಾಗಿದ್ದನು. ಆತನ ಮುಖಮುದ್ರೆಯು ಆನಂದ ವಿನೋದಗಳುಳ್ಳದ್ದಾಗಿತ್ತು. ಸಂಕಟಸಮಯವು ಒದಗಿದಾಗ ಸಹ ಕೆಲವು ಜನರ ಸಂತೋಷವೂ ವಿನೋದವೂ ಉಕ್ಕೇರುವವು. ಅಂಥ ಪುರುಷರಲ್ಲಿಯೇ ಇವನೊಬ್ಬನೆಂಬದು ಇವನ ಮುಖಮುದ್ರೆಯನ್ನು ನೋಡಿದ ಕೂಡಲೆ ಗೊತ್ತಾಗುತ್ತಿತ್ತು. ಇನ್ನೊಬ್ಬ ಮೂರನೇ ಗೃಹಸ್ಥನು ಇವರಿಬ್ಬರ ಸೇವಕನಿರಬಹುದು. ಯಾಕಂದರೆ ಅವನು ಇವರಿಬ್ಬರ ಹಿಂದೆ ಸುಮಾರು ಇಪ್ಪತ್ತೈಗು ಹೆಜ್ಜೆ ಅಂತರ ಬಿಟ್ಟು ಬರುತ್ತಿದ್ದನು.

ಮೇಲೆ ಹೇಳಿದ ಇಬ್ಬರು ಗೃಹಸ್ಥರು ಮಾರ್ಗಕ್ರಮಣಮಾಡುತ್ತ ಬರುತ್ತಿರಲು, ಆ ವಿನೋದಿಯಾದ ಗೃಹಸ್ಥನು ನಡುವೇ:—"ಓಹೋ, ಜಸವಂತಸಿಂಗನು ಶಹಾಜಾದನಾದನೆ? ಇನ್ನೇನು, ನಮ್ಮ ಮೇಲೆ ಜಯಸಿಂಗನೂ ದಿಲೇರಖಾನನೂ ಕೂಡಿ ಬಂದರೇ? ಒಳ್ಳೆಯದು ಬರಲಿ, ಶಾಹಿಸ್ತೇಖಾನನಿಗೂ ಅಫಝುಲಖಾನನಿಗೂ ಆದ ಗತಿಯೇ ಇವರಿಗೂ ಆಗುವದು, ಇದರಲ್ಲಿ ಸಂದೇಹವಿಲ್ಲ. ನಾವು ಅದಕ್ಕಾಗಿಯೇ ಕೂತಿರುವೆವು. ಈ ರಜಪೂತ ಸರದಾರರನ್ನು ಕಂಡು ನನಗೆ ಬಹಳ ಆಶ್ಚರ್ಯವಾಗುತ್ತದೆ. ಇವರ ಮನಸ್ಸು ಆ ಧರ್ಮದ್ವೇಷಿಯಾದ ಔರಂಗಜೇಬನ ಸೇವೆಯನ್ನು—ಅದರಲ್ಲಿ ನಮ್ಮಂಥವರನ್ನು ನಾಶಮಾಡುವಂಥ ಸೇವೆಯನ್ನು--ಮಾಡಲಿಕ್ಕೆ ಹ್ಯಾಗೆ ಒಪ್ಪುತ್ತಿದ್ದೀತು?" ಎಂದು ಪ್ರಶ್ನೆಮಾಡಿದನು.

ಅದಕ್ಕೆ ಆ ಗೃಹಸ್ಥನು—"ಒಪ್ಪದೆ ಏನು ಮಾಡೀತು? ನಮ್ಮ ಹಿರಿಯರ ಮನಸ್ಸು ಹ್ಯಾಗೆ ಒಡಂಬಡುತ್ತಿತ್ತು? ಅದರಲ್ಲಿ ಇವರಂತೂ ಮುಸಲ್ಮಾನರ ಸೇವೆಯನ್ನು ವಂಶಪರಂಪರೆಯಾಗಿ ಮಾಡುತ್ತಿರುವರು. ಒಮ್ಮೆ ಒಂದು ಸಂಗತಿಯು ಮನುಷ್ಯನ ಮೈಯ್ಯುಂಡಿತೆಂದರೆ ವಿಶೇಷ ಕಾರಣದ ಹೊರತು ಅವನ ಮನಸ್ಸಿಗೆ ಅದರಿಂದ ಕೆಡಕು ಅನಿಸುವದಿಲ್ಲ" ಅಂದನು.

"ಅಕಬರನ ಕಾಲಕ್ಕೆ ಇವರಿಗೆ ಒಂದು ಯೋಗ್ಯ ಕಾರಣವಿತ್ತು. ಅವನು ಎಲ್ಲರನ್ನೂ ಸರಿಯಾಗಿ ನೋಡುತ್ತಿದ್ದನು. ಧರ್ಮದ ಸಲುವಾಗಿ ಯಾರಮೇಲೆಯೂ ಜುಲುಮೆಯನ್ನು ಮಾಡುತ್ತಿರಲಿಲ್ಲ; ಆದರೆ ಈ ಔರಂಗಜೇಬನು ಮಹಾಧೂರ್ತನೂ, ದುರಭಿಮಾನಿಯೂ, ಗರ್ವಿಷ್ಠನೂ, ಸಂಶಯಗ್ರಸ್ತನೂ, ಹಟಮಾರಿಯೂ ಆಗಿರುವನು ಇಂಥ ನೀಚಮನುಷ್ಯನ ಸೇವೆಯನ್ನು ಮಾಡುವವರಿಗೂ ಆತನ ರಾಜ್ಯವನ್ನು ಬೆಳಿಸುವ ಪ್ರಯತ್ನಮಾಡುವವರಿಗೂ ಏನೆನ್ನಬೇಕು? ಈ ಕಾಲಕ್ಕೆ ಜಯಸಿಂಗನು ದಕ್ಷಿಣಕ್ಕೆ ದಂಡೆತ್ತಿ ಹೋಗುವದಿಲ್ಲೆಂದು ಅಂದಿದ್ದರೆ ಏನಾಗುತ್ತಿತ್ತು?"

"ಆದರೇನಾಯಿತು? ಅವನು ಬಂದದ್ದರಿಂದ ನಮಗೇನು ಹಾನಿಯಾಗುವ ಸಂಭವವಿದೆ? ಜಸವಂತಸಿಂಗನು ಹ್ಯಾಗೆ ನಮಗೆ ಅನುಕೂಲನಾದನೋ ಅದೇ ಪ್ರಕಾರ ಇವನಾದರೂ ನಮಗೆ ಅನುಕೂಲನಾಗಿ ನಮ್ಮ ಕಾರ್ಯಭಾಗವು ಚೆನ್ನಾಗಿಯೇ ನೆರವೇರಲಿಕ್ಕಿಲ್ಲೆಂದು ಯಾರು ಹೇಳುವರು?"

"ಆದರಲ್ಲಿಯೂ ಆ ಔರಂಗಜೇಬನು ಎಷ್ಟು ನೀಚಸಿರುವನೆಂಬದನ್ನು ನೀನು ನೋಡಿದಿಯಾ? ರಜಪೂತ ಸರದಾರನನ್ನೊಬ್ಬನನ್ನೇ ಅವನು ಎಂದೂ

ಕಳಿಸುವದಿಲ್ಲ ಅವನಿಗೆ ಮತ್ತೊಬ್ಬ ತನ್ನ ಜಾತಿಬಾಂಧವನನ್ನು ಗಂಟುಹಾಕಿಯೇ ಕಳಿಸಿರುವನು. ರಜಪೂತನೊಬ್ಬನೇ ಒಂದರೆ ಒಂದುವೇಳೆ ಚತೂರವಾಡ ಲ್ಪಡಬಹುದು. ಅಹಹ! ಎಂಥ ದುಷ್ಟತನವಿದು!! ಈ ನೀಚನ ಸೊಕ್ಕನ್ನು ಆ ರಾಜಸಿಂಹನು ಚೆನ್ನಾಗಿ ಮುರಿದನು. ಅವನಿಗೆ ಬೇರೆ ಯಾರದೂ ಸಹಾಯ ವಿದ್ದಿಲ್ಲ ಪಾಪ! ಅವನೇನು ಮಾಡಿಯಾನು? ಉಳಿದ ರಜಪೂತರೆಲ್ಲರೂ ಅವ ನಿಗೆ ಸಹಾಯ ಮಾಡಿದ್ದರೆ, ನಾವು ದಕ್ಷಿಣದಲ್ಲಿ ಮಾಡಿದಂತೆಯೇ ಅವನೂ ನಿಜ ವಾಗಿ ಮಾಡುತ್ತಿದ್ದನು.''

''ನಿಜವು! ನೀನನ್ನುವ ಮಾತು ಸಂಪೂರ್ಣವಾಗಿ ನಿಜವು! ನಿನ್ನ ಅಂಬೋಣ ದಂತೆ ಆ ಪ್ರಾಂತದಲ್ಲಿ ಹೀಗೇನಾದರೂ ಒಂದು ವ್ಯವಸ್ಥೆಯಾದರೆ, ಉಭಯತ ರಿಗೂ ಲಾಭವಾಗಬಹುದು. ಅಲ್ಲಿ ಔರಂಗಜೇಬನಿಗೆ ಒಂದು ವಿಘ್ನವು ಬೆನ್ನು ಹತ್ತಿ ದರೆ ಇಷ್ಟು ದೊಡ್ಡ ಸೈನ್ಯವನ್ನೂ ದೊಡ್ಡ ದೊಡ್ಡ ಸರದಾರರನ್ನೂ ಇತ್ತ ಕಳಿ ಸುವದು ಅವನಿಗೆ ಅಸಾಧ್ಯವಾಗಿ ಹೋಗುವದು. ಇಂಥವರಾರಾದರೂ ಅಲ್ಲಿ ಅವನ ಬೆನ್ನುಹತ್ತಲಿಕ್ಕೆ ಬೇಕು. ಈ ಕೆಲಸಕ್ಕೆ ರಾಜಸಿಂಹನೊಬ್ಬನು, ಜಸ ವಂತಸಿಂಗನು ಎರಡನೆಯವನು; ಜಯಸಿಂಗನು ಮೂರನೆಯವನು. ಇವರೇನು ಸಾಮಾನ್ಯರಿರುವರೆ? ಆದರೆ ಇವರಿಗೆ ಔರಂಗಜೇಬನ ಸೇವೆಯು ಹೊರತು ಮತ್ತೇನೂ ಕಾಣುವದಿಲ್ಲ. ತಮ್ಮ ಧರ್ಮಕ್ಕೆ ಎಷ್ಟು ತೊಂದರೆಯಾಗುತ್ತಿರುವ ದೆಂಬ ಬಗ್ಗೆ ಎಳ್ಳಷ್ಟು ವಿಚಾರವು ಸಹ ಇವರ ಮನಸ್ಸಿನಲ್ಲಿ ಬರುವದಿಲ್ಲೆಂಬಂತೆ ತೋರುತ್ತದೆ.''

''ಅವರಿಗೇನು? ಬಾದಶಹನ ಸೇವೆಯನ್ನು ಮಾಡಿ, ಅವನ ಕೃಪಾಛತ್ರದಲ್ಲಿ ಯಥೇಷ್ಟವಾಗಿ ಸುಖೋಪಭೋಗಗಳನ್ನು ಅನುಭವಿಸುತ್ತ ಕೂತುಕೊಳ್ಳುವದೇ ತಮ್ಮ ಇತಿ ಕರ್ತವ್ಯವೆಂದು ಅವರು ತಿಳಿದುಕೊಂಡಿರುತ್ತಾರೆ. ಇದೇ ಅವರಿಗೆ ಪರಮಪುರುಷಾರ್ಥವಾಗಿದೆ. ಅದು ಅವರಿಗೆ ಮೈಯ್ಯುಂಡು ಹೋಗಿರುವದು. ಮುಸಲ್ಮಾನರಂತೆ ನಾಲ್ಕಾಲ್ಕು ಐದೈದು ಜನ ಹೆಂಡಂದಿರನ್ನು ಮಾಡಿಕೊಳ್ಳು ವದು, ಅಂತಃಪುರದ ಹೆಂಗಸರ ಸಂಖ್ಯೆಯನ್ನು ಬೆಳಿಸುವದು, ಗುಡಗುಡಿ ಸೇದು ವದು ಇವೇ ಮೊದಲಾದ ಕೃತ್ಯಗಳಲ್ಲಿಯೇ ನಿಜವಾದ ಸೌಖ್ಯವುಂಟೆಂದು ಅವರ ಮನವರಿಕೆಯಾಗಿರುವದು. ನಾನು ಒಮ್ಮೆ ಬೈರಾಗಿಯ ವೇಷವನ್ನು ತಕ್ಕೊಂಡು ಹೋಗಿ ಆ ಪ್ರಾಂತದಲ್ಲಿ ತಿರುಗಾಡಿ, ಬಾದಶಹನ ದರಬಾರದೊಳಗಿನ ಈ ದೊಡ್ಡ ದೊಡ್ಡ ಸರದಾರರಲ್ಲಿ ಏನಾದರೂ ತೇಜಸ್ಸು ಉಳಿದದೆಯೋ, ಅಥವಾ ಆ ಸರದಾ

ರರೆಂದರೆ ಬಾದಶಹನಿಗೆ ಆಗಾಗ್ಗೆ ಮುಜುರೆ ಮಾಡುವ ಗೊಂಬೆಗಳೋ ಎಂಬ ದನ್ನು ತಿಳಿಯಬೇಕೆಂದು ನನ್ನ ಮನಸ್ಸಿನಲ್ಲಿ ಮೇಲಿಂದಮೇಲೆ ಬರುತ್ತಿರುವದು. ಬೈರಾಗಿಯ ವೇಷದಿಂದ ಹೋದರೆ ಬೇಕಾದಲ್ಲಿ ಪ್ರವೇಶ ಮಾಡಲಿಕ್ಕೆ ಏನೂ ತೊಂದರೆಯಾಗುವದಿಲ್ಲ; ಮತ್ತು ಅದರಿಂದ ನಿಜವಾದ ಸ್ಥಿತಿಯನ್ನು ತಿಳಕೊಳ್ಳ ುಕ್ಕೆ ಅನುಕೂಲವಾಗುತ್ತದೆ.''

''ಈ ನಿನ್ನ ಕಲ್ಪನೆಯು ಬಹಳ ಚೆನ್ನಾಗಿರುವದು. ವೇಷಾಂತರದಿಂದ ಜನರನ್ನು ಮೋಸಗೊಳಿಸುವದರಲ್ಲಿಯಂತೂ ನೀನು ಒಳ್ಳೇ ಬುದ್ಧಿವಂತನಾಗಿ ರುವೆ; ಆದರೆ, ಅದನ್ನೆಲ್ಲ ನೋಡಿ ಒಂದು ಮಾಡುವದೇನು? ಆ ಜನರು ಎಷ್ಟು ಯೋಗ್ಯತೆಯುವರಿರುವರೆಂಬದು ಜಸವಂತಸಿಂಗರಂಥ ಮನುಷ್ಯರಿಂದ ನಮಗೆ ಗೊತ್ತಾಗುವದಿಲ್ಲವೆ? ಅವರಿಗೆ ಸಿಟ್ಟು ಬರಲಿಕ್ಕೆಬೇಕು. ಸಿಟ್ಟು ಬಂದರೆ ಅವ ರಿಂದ ಏನಾದರೂ ಕಾರ್ಯವಾಗುವದು. ಉತ್ತರಪ್ರಾಂತದಲ್ಲಿಯೇ ಯಾರಾ ದರೂ ಬಾದಶಹನ ಬೆನ್ನುಹತ್ತಿದರೆ ನಮಗೆ ಪ್ರಯೋಜನವಾಗಬಹುದೆಂದು ನನ್ನ ಮನಸ್ಸಿನಲ್ಲಿ ಅನೇಕ ಸಾರೆ ಬಂತು. ಔರಂಗಜೇಬನಿಗೆ ಇತ್ತ ಲಕ್ಷ್ಯಕೊಡಲಿಕ್ಕೆ ಅವಕಾಶವೇ ಸಿಕ್ಕಿರಬಾರದು. ಹೀಗೆ ಮಾಡಲಿಕ್ಕೆ ಬೇಕು. ನಮ್ಮ ಸಮರ್ಥ ರಂಥ ಸತ್ಪುರುಷರು ಈಗ ಅಲ್ಲಿ ಯಾರೂ ಉಳಿದಿರುವದಿಲ್ಲ. ಮುಂಚೆ ಅಬೂ ಪಹಾಡದಲ್ಲಿ ವೈಕುಂಠಯೋಗಿಗಳು ಇದ್ದರು. ಅವರು ಈಗ ಅಂತರ್ಧಾನವನ್ನು ಹೊಂದಿರುವರು. ಅವರು ರಾಜಸಿಂಹನಿಗೆ ಚೆನ್ನಾಗಿ ಉಪದೇಶಮಾಡಿ ಅವನಿಗೆ ಒಳ್ಳೇ ಫಲಪ್ರಾಪ್ತಿಯನ್ನು ಮಾಡಿಕೊಟ್ಟರು. ಆ ಮಹನೀಯರು ಬಹು ದೊಡ್ಡ ಯೋಗ್ಯತೆಯುವರಿದ್ದರೆಂದು ಹೇಳುತ್ತಾರೆ ಸಮರ್ಥರು ಸಹ-ಅವರಷ್ಟು ಯೋ ಗ್ಯತೆಯುವರು ಅವರೇ, ಎಂದು ಅನೇಕಸಾರೆ ಉದ್ಗಾರಗಳನ್ನು ತೆಗೆದಿರುವರು. ಅವರು ವಸಿಷ್ಠ ವಿಶ್ವಾಮಿತ್ರಾದಿ ಋಷಿವರ್ಯರ ವರ್ಗದವರು; ಯಾವದೋ ಒಂದು ಮಹತ್ವದ ಕಾರ್ಯಕ್ಕಾಗಿ ಈ ಭೂಮಿಗೆ ಅವತರಿಸಿದ್ದರು.''

''ನಿಜವು; ಸಮರ್ಥರಾದರೂ ಎಂಥ ದೊಡ್ಡ ಮಹಾತ್ಮರು! ಅವರ ದರ್ಶನ ಮಾತ್ರದಿಂದಲೇ ಮನುಷ್ಯನ ವೃತ್ತಿಯಲ್ಲಿ ಒಂದು ಪ್ರಕಾರದ ವಿಲಕ್ಷಣವಾದ ಸ್ಫುರಣವಾಗುವದು. 'ಅವರು ನಮಗೆ ಯಾವಾಗಲೂ ಸೇವೆಯ ಕೆಲಸಗಳನ್ನು ಹೇಳುತ್ತಿರಬೇಕು; ನಾವು ಅವುಗಳನ್ನು ಮಾಡುತ್ತಿರಬೇಕು' ಎಂದು ನಮಗೆ ಅನಿ ಸುವದು; ಆದರೆ ಆ ಮಹಾತ್ಮರು ಸ್ವಂತದ ಸೇವೆಯ ಕೆಲಸಗಳನ್ನು ಅಪ್ಪಿ ತಪ್ಪಿ ಸಹ ಯಾರಿಗೂ ಹೇಳುವದಿಲ್ಲ. ಈಗ ಈ ಪ್ರಾಂತವನ್ನು ಬಳಸುಗ್ಗಿರಿ; ಇಂಥ

ದೊಂದು ಕೋಟಿಯನ್ನು ಕೈವಶಮಾಡಿಕೊಳ್ಳಿರಿ. ಇವೇ ಅವರ ಸೇವೆಯ ಹುಕುಮುಗಳು. ಅವರ ನಿಸ್ಪೃಹವೃತ್ತಿಯು ವಿಲಕ್ಷಣವಾದದ್ದು. ಯಾರಾದರೂ ತಾವಾಗಿಯೇ ಅವರಿಗೆ ದ್ರವ್ಯವನ್ನು ಕಳಿಸಿದರೆ ಅವರು ಅದನ್ನು ದಾನಮಾಡಿ ಬಿಡುವರು. ಅದರಲ್ಲಿ ಒಂದು ಕಾಸಿಗೆ ಸಹ ತಾವು ಕೈಹಚ್ಚುವದಿಲ್ಲ. ಶಿಷ್ಯರು ಭಿಕ್ಷೆಬೇಡಿ ತಂದದ್ದರ ಮೇಲೆಯೇ ತಮ್ಮ ಯೋಗಕ್ಷೇಮವನ್ನು ಸಾಗಿಸಿಕೊಳ್ಳುವರು. ಎಂಥ ಮಹಂತ ವೃತ್ತಿಯು ಇದು!"

"ಅವರ ಮಹಾತ್ಮ್ಯವನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ಸರಿ. ಆ ಮಹನೀಯರ ಕೃಪಾದೃಷ್ಟಿಯಾದ್ದರಿಂದಲೇ ನಮ್ಮ ಯಾವತ್ತೂ ಕಾರ್ಯಗಳು ಸುಸೂತ್ರವಾಗಿ ನಡೆದಿರುವವು. ತಮ್ಮಾ, ಏನು ಹೇಳಲಿ? ಇಂಥ ಮಹಾತ್ಮರು ಇರುವಲ್ಲಿಯೇ ತೇಜಸ್ಸು ದೃಷ್ಟಿಗೆ ಬೀಳುವದು. ಮೇಲಕ್ಕೆ ತಲೆಎತ್ತಿ ನಡೆಯುಲಿಕ್ಕಾಗುವದು. ಇಲ್ಲದಿದ್ದರೆ ಏನದೆ, ಯಾವತ್ತೂ ಅಂಧಃಕಾರವು."

ಈ ಪ್ರಕಾರ ಅವರಿಬ್ಬರ ಸಂಭಾಷಣವು ನಡೆದಿರಲು, ದೂರದಲ್ಲಿ ದಟ್ಟಾದ ಅಡವಿಯೊಳಗಿಂದ ಕೇಳಬರುವ ಆರ್ತಸ್ವರವು ಅವರ ಕಿವಿಗೆ ಬಿತ್ತು. ಕೂಡಲೆ ಅವರಿಬ್ಬರೂ ತಮ್ಮ ಭಾಷಣವನ್ನು ನಿಲ್ಲಿಸಿ, ಆ ಸ್ವರವು ಒಂದ ದಿಕ್ಕಿನ ಕಡೆಗೆ ನೋಡಹತ್ತಿದರು. ಆರ್ತಸ್ವರವನ್ನು ಕೇಳಿದ ಕೂಡಲೆ, ಅದರ ಕಾರಣವನ್ನು ಶೋಧಿಸಿ ಆರ್ತ ಮನುಷ್ಯನನ್ನು ತತ್ಕಾಲಕ್ಕೆ ದುಃಖಮುಕ್ತನನ್ನಾಗಿ ಮಾಡುವದೇ ತಮ್ಮ ಕರ್ತವ್ಯವೆಂದು ಕೆಲವು ವ್ಯಕ್ತಿಗಳು ಪ್ರತಿಜ್ಞೆಯನ್ನೇ ಮಾಡಿರುವರು; ಇಂಥ ಆರ್ತಸ್ವರವು ಅವರ ಕಿವಿಗೆ ಬಿದ್ದಕೂಡಲೆ ಅವರ ಬಾಹುಗಳಿಗೆ ಒಂದು ಪ್ರಕಾರದ ಸ್ಫುರಣವೇ ಆಗುವದು. ಅವರಿಬ್ಬರು ಇದೇ ತರದ ವ್ಯಕ್ತಿಗಳಿದ್ದರು. ಅವರ ಬಾಹುಗಳು ಒಂದೇಸವನೆ ಸ್ಫುರಣ ಹೊಂದಹತ್ತಿದವು. ಕೂಡಲೆ ಅವರು ತಮ್ಮ ಕುದುರೆಗಳ ಕಡಿವಾಣವನ್ನು ಅತ್ತಕಡೆಗೆ ತಿರುವಿ ಹಿಂಬಡಗಳನ್ನು ಒತ್ತಿ ಸೂಚಿಸಿದ ಕೂಡಲೆ ಕುದುರೆಗಳು ಒಳ್ಳೇ ಭರದಿಂದ ಓಡುತ್ತ ಆ ಅಡವಿಯನ್ನು ಹೊಕ್ಕವು. ಸ್ವಲ್ಪ ಮುಂದಕ್ಕೆ ಹೋಗಿ ನೋಡುವಷ್ಟರಲ್ಲಿ, ಒಂದು ವಿಲಕ್ಷಣವಾದ ನೋಟವು ಅವರ ಕಣ್ಣಿಗೆ ಬಿತ್ತು:—

ಒಬ್ಬ ತರುಣ ಮಹಾರಾಷ್ಟ್ರ ಸರದಾರನು ಮೂವರು ಮುಸಲ್ಮಾನರ ಸಂಗಡ ಹೋರಾಡುತ್ತಿರುವನು. ಅದರಾಜೆಗೆ ಒಂದೆರಡು ಮಾರುಗಳ ಅಂತರದ ಮೇಲೆ ಒಂದು ಮೇಣೆಯು ಬಿದ್ದಿರುವದು. ಅದರ ಹತ್ತರ ಇಬ್ಬರು ಮುಸಲ್ಮಾನರು ಭೋಯಿಗಳ ಸಂಗಡ ಕುಸ್ತೀಹಿಡಿದು ಗೊಂದಲವನ್ನು ಹಾಕುತ್ತಿರುವರು.

ಮತ್ತೊಬ್ಬ ಮುಸಲ್ಮಾನನು ಮೇಣೆಯ ಬಾಗಿಲವನ್ನು ತೆರೆದು ಅದರೊಳಗೆ ಕುಳಿತ ಒಬ್ಬ ತರುಣಸ್ತ್ರೀಯ ರಟ್ಟೆಯನ್ನು ಹಿಡಿದು ಹೊರಗೆ ಎಳೆಯುತ್ತಿರುವನು; ಆ ತರುಣಸ್ತ್ರೀಯು "ಅಯ್ಯೋ, ಈ ಯಮದೂತನ ಕಯ್ಯೊಳಗಿಂದ ನನ್ನನ್ನು ಬಿಡಿಸಿಕೊಳ್ಳಿರೋ" ಎಂದು ಬಹು ಆರ್ತಸ್ವರದಿಂದ ಒದರಹತ್ತಿರುವಳು.

ಈ ಭಯಂಕರವಾದ ನೋಟವು ನಮ್ಮ ಇಬ್ಬರು ಮಹಾರಾಷ್ಟ್ರ ಸರದಾರರ ಕಣ್ಣಿಗೆ ಬಿದ್ದಕೂಡಲೆ ಅವರ ಸಿಟ್ಟು ತಲೆಗೇರಿತು; ಕಣ್ಣು ಕೆಂಪಗೆ ಆದವು. ಅವರಲ್ಲಿ ಗಿಡ್ಡನಾದ ರಾಹುತನು ಒಳ್ಳೇ ಭರದಿಂದ ಹೋಗಿ ಎಲ್ಲಕ್ಕೂ ಮೊದಲು ಮೇಣೆಯೊಳಗಿನ ತರುಣಸ್ತ್ರೀಯನ್ನು ಎಳೆಯುವ ಗೃಹಸ್ಥನ ಕೈಮೇಲೆ ಕತ್ತಿಯಿಂದ ಒಂದು ಪೆಟ್ಟು ಹಾಕಿದನು. ಕೂಡಲೆ ಅವನು ಅವಳ ಕೈಬಿಟ್ಟು ಹಿಂದೆ ನೋಡಹತ್ತಿದನು. ಅವನು ಹಿಂದಿರುಗಿ ನೋಡ ನೋಡುವಷ್ಟರಲ್ಲಿ ಅವನ ಮೈಮೇಲೆ ಮತ್ತೊಂದು ಹೊಡತವು ಬಿತ್ತು; ಮೂರನೇದೊಂದು ಬಿತ್ತು. ಇಷ್ಟಾಗುವದರಲ್ಲಿಯೇ ಅವನು ಎಚ್ಚರದಪ್ಪಿ ನೆಲಕ್ಕೆ ಬಿದ್ದನು. ಆ ಸ್ತ್ರೀಯು ತನ್ನನ್ನು ಬಿಡಿಸಿದವನನ್ನು ಒಂದುಸಾರೆ ಕಡೆಗಣ್ಣಿನಿಂದ ನೋಡಿದಳು. ಆ ಕಟಾಕ್ಷದಲ್ಲಿ ಕೃತಜ್ಞತೆಯು ತುಂಬಿ ತುಳುಕುತ್ತಿತ್ತು! ಈ ಮೇರೆಗೆ ಅವಳು ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿ ತನ್ನ ಮೋರೆಯ ಮೇಲೆ ಸೆರಗು ಎಳೆದುಕೊಂಡು ಪುನಃ ಮೇಣೆಯೊಳಗೆ ಹೋಗಿ ಕುಳಿತುಕೊಂಡಳು. ಅವಳನ್ನು ಬಿಡಿಸಿದ ರಾಹುತನು ಈಗ ಆ ಭೋಯಿಗಳ ಸಹಾಯಕ್ಕೆ ಹೋದನು. ಆ ಭೋಯಿಗಳ ಕೂಡ ಹೋರಾಡುತ್ತಿದ್ದ ಇಬ್ಬರು ಮುಸಲ್ಮಾನರನ್ನು ಆತನು ಬೇಗನೆ ಯಮಲೋಕಕ್ಕೆ ಅಟ್ಟಿದನು. ಅವನ ಸಂಗಡಿಗನು ಈ ಮೊದಲೆ ಆ ತರುಣ ಮಹಾರಾಷ್ಟ್ರನ ಸಹಾಯಕ್ಕೆ ಹೋಗಿದ್ದನು. ಒಬ್ಬನೇ ತರುಣ ಮರಾಟನು ಮೂವರು ಮುಸಲ್ಮಾನ ಸಿಪಾಯಿಗಳ ಕೂಡ ಎಡೆಬಿಡದೆ ಹೋರಾಡುತ್ತಿದ್ದನು. ಆದರಿಂದ ಅವನು ಒಳ್ಳೇ ಪೇಚಿನಲ್ಲಿ ಬಿದ್ದಿದ್ದನೆಂಬ ಮಾತು ನಿಜವು; ಆದರೆ, ನಮ್ಮ ಇಬ್ಬರು ರಾಹುತರಲ್ಲಿ ಒಬ್ಬನು ಅವನ ಸಹಾಯಕ್ಕೆ ಹೋದಕೂಡಲೆ ಅವನ ಉತ್ಸಾಹವು ಇಮ್ಮಡಿಸಿತು. ಅವನು ಈ ಮೊದಲಿಗಿಂತ ಹೆಚ್ಚು ಭರದಿಂದ ಅವರ ಮೈಮೇಲೆ ಏರಿಹೋಗಹತ್ತಿದನು. ಉಭಯ ಪಕ್ಷಕ್ಕೂ ಒಳ್ಳೇ ನಿಕರದ ಯುದ್ಧವು ಪ್ರಾರಂಭವಾಯಿತು. ಅಷ್ಟರಲ್ಲಿ ನಮ್ಮ ಗಿಡ್ಡ ರಾಹುತನೂ ಇಲ್ಲಿಗೆ ಬಂದನು. ಆದರಿಂದ ಆ ಮುಸುಂಡಿಗಳ ಎದೆಯೊಡೆದು ನೀರಾಯಿತು. ಆಗ ಅವರು ಅಲ್ಲಿಂದ ಪಲಾಯನ ಸೂಕ್ತವನ್ನು ಜಪಿಸಬೇಕೆಂದು ಆಲೋಚನೆ

ಮಾಡುತ್ತಿದ್ದರು. ಆದರೆ ಅವರ ಪ್ರತಿಪಕ್ಷಿಗಳು ಅವರ ವಿಚಾರದಂತೆ ಅವರನ್ನು ನಡೆಯಗೊಡಲಿಲ್ಲ. ಕತ್ತಿಯಿಂದ ಅನೇಕ ಗಾಯಗಳನ್ನು ಮಾಡಿ, ಅವರನ್ನು ನೆಲದ ಮೇಲೆ ಕೆಡವಿದರು.

ಈ ಮೇರೆಗೆ ಶತ್ರುಗಳು ಪೂರ್ಣವಾಗಿ ಅಪಜಯಹೊಂದಿದ ಮೇಲೆ ಆ ತರುಣ ಮಹಾರಾಷ್ಟ್ರನು ಈ ಇಬ್ಬರು ರಾಹುತರ ಒಳಗೆ ಒಂದು ಕೈಮುಗಿದು ಒಳ್ಳೇ ವಿನಯದಿಂದ—ಸಂಕಟಕ್ಕೆ ಒಳಗಾದ ಜನರನ್ನು ಬಿಡಿಸಲಿಕ್ಕೆ ಓಡಿಬಂದ ಈ ಮಹಾತ್ಮರು ಯಾರೆಂಬದನ್ನು ನಾನು ಅರಿಯೆನು. ಬಹುಶಃ ತಾವು ಶಿವಾಜಿ ಮಹಾರಾಜರ ಸೈನ್ಯದೊಳಗಿನವರಿರಲಿಕ್ಕೆ ಬೇಕು. ಅದು ಹ್ಯಾಗೇ ಇರಲಿ, ನನ್ನನ್ನು ತಾವು ಋಣಿಯಾಗಿ ಮಾಡಿರುವಿರಿ. ನಾನು ತಮ್ಮ ಪಾದಸೇವಕನಿರುತ್ತೇನೆ. ತಾವೇ ನನ್ನ ಜೀವವನ್ನು ಉಳುಕಿಸಿದಿರಿ. ಈ ಶರೀರದ ಮೇಲೆ ನನ್ನ ಅಧಿಕಾರವೇನೂ ಇಲ್ಲ. ತಮ್ಮ ಮನಸ್ಸಿಗೆ ಬಂದ ಪ್ರಕಾರ ಇದರ ವ್ಯವಸ್ಥೆಯನ್ನು ಮಾಡಬೇಕು.

ಹೀಗೆ ಮಾತಾಡಿದ ತರುಣ ಮಹಾರಾಷ್ಟ್ರವೀರನು ನೋಟಕ್ಕೆ ಬಹು ಸುಂದರನೂ, ನಿಲುವಿಕೆಯಿಂದ ಎತ್ತರನೂ, ಮೈಕಟ್ಟಿನ ಪುಷ್ಟಕಟ್ಟಳ್ಳವನೂ ಆಗಿದ್ದನು. ಆತನ ಪ್ರಫುಲ್ಲಿತವಾದ ಮುಖಮುದ್ರೆಯೂ ಕಾಂತಿಯುಳ್ಳ ಕಣ್ಣುಗಳೂ ಆತನಿಗೆ ಬಹಳ ಶೋಭೆಯನ್ನುಂಟುಮಾಡುತ್ತಿದ್ದವು. ಆತನ ಎಲ್ಲ ತರದ ಇರುವಿಕೆಯು ಬಹು ಗಾಂಭೀರ್ಯದಿಂದಿತ್ತು. ಆತನಲ್ಲಿ ಯುದ್ಧದ ಕೌಶಲ್ಯವು ಬಹಳ ಚೆನ್ನಾಗಿರುವದೆಂಬದು ಈ ಮೊದಲೇ ಅವರಿಬ್ಬರ ಅನುಭವಕ್ಕೆ ಬಂದಿತ್ತು. ಅದರಿಂದ ಅವರು ಆತನ ನಮ್ರ ಭಾಷಣವನ್ನು ಕೇಳಿ ಆತನು ವಿಜಾಪುರದ ದರಬಾರದಲ್ಲಿ ಓಡಾಡಿದ ಮನುಷ್ಯನಿರಬಹುದೆಂದು ತರ್ಕಿಸಿದರು; ಮತ್ತು ಆತನನ್ನು ಕಂಡು ಅವರಿಬ್ಬರಿಗೂ ಸಮಾಧಾನವಾದಂತೆ ಅವರ ಮುಖಮುದ್ರೆಯಿಂದ ತೋರಹತ್ತಿತು. ಅವರಲ್ಲಿ ಎತ್ತರವಾದವನು ಆತನನ್ನು ಕುರಿತು:—"ಹೌದು, ನಿಮ್ಮ ತರ್ಕವು ನಿಜವಾಗಿರುವದು. ನಾವು ಶಿವಾಜಿಮಹಾರಾಜರ ಜನರೊಳಗಿನವರೇ ಇದ್ದೇವೆ. ನಾವು ಮಾರ್ಗಕ್ರಮಣ ಮಾಡುತ್ತಿರುವಾಗ ಅಳುವ ಸ್ವರವು ನಮ್ಮ ಕಿವಿಗೆ ಬಿತ್ತು. ಅದರಿಂದ ನಾವು ಇತ್ತ ಕಡೆಗೆ ತಿರುಗಿ ಬರಲು, ಇದೆಲ್ಲ ಸ್ಥಿತಿಯು ನಮ್ಮ ದೃಷ್ಟಿಗೆ ಬಿತ್ತು. ಅದರಿಂದ ನಾವು ಈ ಗದ್ದಲದಲ್ಲಿ ಸೇರಿದೆವು. ನಮ್ಮಿಂದ ನಿಮಗೆ ತುಸು ಉಪಯೋಗವಾದದ್ದನ್ನು ಕಂಡು ನಮಗೆ ಬಹಳ ಸಂತೋಷವಾಯಿತು. ನಿಮ್ಮ ಜನರು ಆ ಮೇಣೆಯಲ್ಲಿರುವರು. ಅವರ

ಯೋಗಕ್ಷೇಮವನ್ನು ತೆಗೆದುಕೊಳ್ಳಿರಿ. ಅವರಿಗೆ ಆಶ್ವಾಸನವನ್ನು ಕೊಡಿರಿ. ನೀವು ಎಲ್ಲಿಗೆ ಹೋಗತಕ್ಕವರೆಂಬದನ್ನು ತಿಳಿಸಿದರೆ, ನಾವು ಅಲ್ಲಿಯ ತನಕ ಬಂದು ನಿಮ್ಮನ್ನು ಕಳಿಸಿ ಹೋಗುವೆವು" ಅಂದನು.

ಅದಕ್ಕೆ ಆ ಮನುಷ್ಯನು:—"ಪರಳಿಯ ಹತ್ತರ ರಾಮದಾಸ ಸ್ವಾಮಿಗಳೆಂಬ ಸಾಧುಗಳು ಇರುವರು. ನಾವು ಅವರ ದರ್ಶನಕ್ಕಾಗಿ ಹೊರಟಿರುತ್ತೇವೆ. ಕೆಲವು ದಿವಸಗಳ ಪೂರ್ವದಲ್ಲಿ ನಾನು ಬೇನೆ ಬಿದ್ದಿದ್ದೆನು. ಆಗ ನಮ್ಮ ಮಾತೃಶ್ರೀಯವರು ಮಗನ ಬೇನೆಯು ನೆಟ್ಟಗಾದರೆ ಆತನನ್ನು ಕಾಲು ನಡಿಗೆಯಿಂದ ಸ್ವಾಮಿಗಳ ದರ್ಶನಕ್ಕೆ ಕಳಿಸುವೆನೆಂದು ಹರಕೆ ಹೊತ್ತಿದ್ದರು. ಆ ಹರಕೆಯನ್ನು ಮುಟ್ಟಿಸುವದಕ್ಕಾಗಿ ನಾನು ಹೊರಟಿದ್ದೇನೆ. ಮಾತೃಶ್ರೀಯವರು ನನ್ನ ಸಂಗಡ ಬರುತ್ತಿದ್ದರು; ಆದರೆ ಮುಪ್ಪಿನಿಂದ ಅವರಿಗೆ ಬರುವದಾಗಲಿಲ್ಲ ಹರಕೆಯನ್ನು ಬಹು ದಿವಸಗಳವರೆಗೆ ಬಿಡುವದು ಸರಿಯಲ್ಲೆಂದು ಅವರು ನನ್ನನ್ನು ಕಳಿಸಿದರು. ನಾವು ವಿಜಾಪುರದಿಂದ ಹೊರಟಂದಿನಿಂದ ಈ ದುಷ್ಟರು ನಮ್ಮ ಬೆನ್ನ ಹಿಂದಿಂದೇ ಬರುತ್ತಿದ್ದರು. ಆದರೆ ಅನೇಕ ಜನರು ನಮ್ಮ ಸಂಗಡಿಗರಿದ್ದ ಮೂಲಕ ಇವರಿಗೆ ನಮ್ಮನ್ನು ಮುತ್ತುವ ಧೈರ್ಯವಾಗಲಿಲ್ಲ. ಸ್ವಲ್ಪ ಹೊತ್ತಿನ ಪೂರ್ವದಲ್ಲಿ ಪರಳಿಗೆ ಹೋಗಲಿಕ್ಕೆ ಇದು ಸಮೀಪದ ದಾರಿಯಿರುವದೆಂದು ನಮಗೆ ತಿಳಿಯಿತು. ಕಾರಣ ನಾವು ಈ ದಾರಿಯನ್ನು ಹಿಡಿದೆವು. ನಮ್ಮ ಸಂಗಡಿಗರು ಪುಣೆಗೆ ಹೋಗತಕ್ಕವರಿದ್ದದರಿಂದ ಅವರು ಬೇರೆ ದಾರಿಯಿಂದ ಹೋದರು. ಈ ಸಂಧಿಯನ್ನು ಸಾಧಿಸಿ ಈ ನೀಚರು ಈ ಅಡವಿಯಲ್ಲಿ ನಮ್ಮನ್ನು ಮುತ್ತಿದರು. ನಾನಾದರೂ ಯಾವತ್ತೂ ಸಿದ್ಧತೆಯಿಂದಲೇ ಇದ್ದೆನು. ಕಾರಣ ಅಜಾಗ್ರತೆಯಿಂದಾಗುವ ಕೆಟ್ಟ ಪರಿಣಾಮಗಳುಂಟಾಗಲಿಲ್ಲ. ಆದರೂ ನಾನು ಒಬ್ಬೊಂಟಿಗನ . ಏನು ಮಾಡಲಿ? ಕಟ್ಟಕಡೆಯ ಪರಿಣಾಮವು ನನಗೆ ಗೊತ್ತಿತ್ತು. ಪ್ರಾಣ ಹೋಗುವ ತನಕ ಹೋರಾಡಬೇಕೆಂದು ನಿಶ್ಚಯಿಸಿದ್ದೆನು. ಅಷ್ಟರಲ್ಲಿ ಪರಮೇಶ್ವರನ ಕೃಪೆಯಿಂದಲೋ ಅಥವಾ ಆ ಸತ್ಪುರುಷರ ಮಹಿಮೆಯಿಂದಲೋ ನಮ್ಮ ಸಹಾಯಕ್ಕಾಗಿ ನೀವು ಇಲ್ಲಿಗೆ ಬಂದಿರಿ. ನಮಗೆ ಆ ಸತ್ಪುರುಷರ ದರ್ಶನದ ಉತ್ಕಂಠೆಯು ಹೆಚ್ಚಾದ್ದರಿಂದ, ಆದಷ್ಟು ಬೇಗ ಹೋಗಬೇಕೆಂದು ಈ ಅಡವಿಯೊಳಗಿನ ಒಳದಾರಿಯನ್ನು ನಾವು ಹಿಡಿದಿದ್ದೆವು. ಆ ಸತ್ಪುರುಷರೇ ನಮ್ಮನ್ನು ಸಂರಕ್ಷಣೆ ಮಾಡಿದರೆಂದು ನಾವು ತಿಳಿಯುತ್ತೇವೆ."

ಸಮರ್ಥರ ಹೆಸರು ತೆಕ್ಕೊಂಡ ಕೂಡಲೆ ಅವರಿಬ್ಬರಿಗೂ ಬಹಳ ಕೌತುಕ

ವಾಯಿತು. ಅವರೊಳಗಿನ ಎತ್ತರ ಗೃಹಸ್ಥನು ಆತನಿಗೆ:—“ನಾವು ಸಹ ಸ್ವಾಮಿಯವರ ದರ್ಶನಕ್ಕಾಗಿಯೇ ಹೊರಟಿದ್ದೇವೆ. ಇನ್ನು ಮೇಲೆ ನಾವೂ ನೀವೂ ಕೂಡಿಯೇ ಹೋಗೋಣ. ನಾವು ಆಗಾಗ್ಗೆ ಸ್ವಾಮಿಗಳ ದರ್ಶನಕ್ಕೆ ಹೋಗುತ್ತಿರುತ್ತೇವೆ. ನಿಮ್ಮನ್ನು ತಪ್ಪದೆ ಅದೇ ಸ್ಥಳಕ್ಕೆ ಕರಕೊಂಡು ಹೋಗುವೆವು. ಆದರೆ ವಿಜಾಪುರದಿಂದ ನಿಮ್ಮ ಬೆನ್ನು ಹತ್ತಿದವರು ಯಾರು? ಯಾಕೆ ಬೆನ್ನಟ್ಟಿ ಬರುತ್ತಿದ್ದರು? ಮುಂತಾದ ಸಂಗತಿಗಳನ್ನು ತಿಳಕೊಳ್ಳುವದು ಯೋಗ್ಯವಾಗಿದೆ”

ಈ ಮಾತಿಗೆ ಆ ತರುಣ ಮಹಾರಾಷ್ಟ್ರ ಸರದಾರನು:—“ಈ ಮೊದಲೆ ಅವರು ಯಾರೆಂಬದನ್ನು ಸಾರಾಸಾರ ವಿಚಾರದಿಂದ ಗೊತ್ತುಪಡಿಸಿದ್ದೇನೆ. ಸದ್ಯಕ್ಕೆ ವಿಜಾಪುರವು ತೀರ ಕನಿಷ್ಟ ಸ್ಥಿತಿಯಲ್ಲಿರುತ್ತದೆ. ದೊಡ್ಡ ಮನೆತನದ ಸಂಭಾವಿತ ಗೃಹಸ್ಥರು ಇನ್ನು ಮೇಲೆ ವಿಜಾಪುರದಲ್ಲಿ ವಾಸಮಾಡಿಕೊಂಡಿರುವ ಸ್ಥಿತಿಯು ಉಳಿದಿರುವದಿಲ್ಲ. ಬಾದಶಹನು ಸ್ವತಃ ಯಾವ ಮಾತಿನ ಕಡೆಗೂ ಲಕ್ಷಕೊಡುವದಿಲ್ಲ. ಯಾವ ಸರದಾರನು ಬಾದಶಹನ ಬಳಿಯಲ್ಲಿದ್ದು ಆತನ ಮನರಂಜನೆಯನ್ನು ಮಾಡುವನೋ ಆ ಸರದಾರನ ಮೇಲೆ ಬಾದಶಹನ ಮನಸ್ಸು ಸುಪ್ರಸನ್ನವಾಗುವದು. ಬಳಿಕ ಆ ಸರದಾರನು ಏನು ಮಾಡಿದರೂ ಕೇಳುವವರೇ ಇಲ್ಲ; ಇಂಥ ಸ್ಥಿತಿ ಇರುತ್ತದೆ. ನಮ್ಮ ಬೆನ್ನುಹತ್ತಿದ ಜನರು ಬಾದಶಹನ ಪ್ರೀತಿಯ ಸರದಾರರಿಂದ ಕಳಿಸಲ್ಪಟ್ಟವರಾರಾದರೂ ಇರಬಹುದು. ಯಾವ ಉದ್ದೇಶದಿಂದ ಅವರು ನಮ್ಮ ಬೆನ್ನುಹತ್ತಿದ್ದರೋ ಆ ನೀಚ ಉದ್ದೇಶವನ್ನು ನಾನು ಆಡಿತೋರಿಸುವ ಕಾರಣವಿಲ್ಲ. ಅದನ್ನು ನೀವು ಸಹಜವಾಗಿ ಊಹಿಸಿ ತಿಳಕೊಳ್ಳಬಹುದು” ಅಂದನು.

ಈ ಪ್ರಕಾರ ಆ ತರುಣ ಮಹಾರಾಷ್ಟ್ರ ಸರದಾರನು ಮಾತಾಡುವ ಕಾಲಕ್ಕೆ ನಮ್ಮ ಆ ಗಿಡ್ಡ ಮನುಷ್ಯನು ತುಟಿಗಳನ್ನು ಕಚ್ಚುತ್ತ ಆತನನ್ನು ನೋಡುತ್ತಿದ್ದನು. ಆದರೆ ಆತನ ಮನಸು ಬೇರೆ ಯಾವದೋ ಒಂದು ವಿಚಾರದಲ್ಲಿ ತೊಡಗಿತ್ತೆಂಬದು ಆತನ ಮುಖಮುದ್ರೆಯ ಮೇಲಿಂದ ಸ್ಪಷ್ಟವಾಗಿ ಕಾಣುತ್ತಿತ್ತು. ನಡನಡುವೆ ಆತನು ಗೋಣು ಅಲ್ಲಾಡಿಸುತ್ತಿದ್ದನು. ಆಗ ಆತನನ್ನು ಯಾರಾದರೂ ನೋಡಿದ್ದರೆ, ಅವನು ಆ ತರುಣ ಗೃಹಸ್ಥನ ಮಾತು ಕೇಳಿ ಗೋಣು ಅಲ್ಲಾಡಿಸುತ್ತಿದ್ದಿಲ್ಲ; ಆದರೆ ತನ್ನ ಮನಸ್ಸಿನಲ್ಲಿ ಏನೇನೋ ವಿಚಾರಗಳು ಬಂದು ಅವುಗಳ ಮೂಲಕವಾಗಿ ಅವನು ಗೋಣು ಅಲ್ಲಾಡಿಸುತ್ತಿದ್ದನೆಂಬ ಮಾತು ಅವರ ಅನುಭವಕ್ಕೆ ಬರುತ್ತಿತ್ತು. ಆತನಿಗೆ ತನ್ನ ಸಂಗಡಿಗನು

ಆ ತರುಣನ ಸಂಗಡ ಏನು ಮಾತಾಡುತ್ತಾನೆಂಬ ಎಚ್ಚರಿಕೆಯು ಸಹ ಇದ್ದಂತೆ ಕಾಣಲಿಲ್ಲ. ಈ ರೀತಿಯಿಂದ ಬಹಳ ಹೊತ್ತಿನವರೆಗೆ ವಿಚಾರಮಾಡಿ ಆತನು ತನ್ನ ಸಂಗಡಿಗನನ್ನು ಕುರಿತು:—“ಮಿತ್ರಾ, ಈಗ ಎಷ್ಟೋ ವರ್ಷಗಳಿಂದ ನಾವು ಕೇಳುತ್ತಿರುವ ಸ್ಥಿತಿಯು ಇಂದಿಗೂ ಇರುವದಲ್ಲವೇ? ಏನು ಮಾಡ ಬೇಕು? ಇಂಥ ಮಾತುಗಳನ್ನು ಕೇಳಿ ನನ್ನ ಮನಸು ಬಹಳ ಸಂತಾಪಗೊಳ್ಳು ತ್ತದೆ. ಏನಾಗುವದು ಒಮ್ಮೆ ಆಗಿಹೋಗಲಿ! ಒಮ್ಮೆ ನಿಕರದ ನಿಶ್ಚಯ ಮಾಡ ಬೇಕೆಂದು ನನ್ನ ಮನಸಿನಲ್ಲಿ ಬರುವದು. ಆದರೆ ಗುಡ್ಡವನ್ನು ಕೆಡವಬೇಕೆನ್ನು ವವನು ಅದರ ಮೇಲೆ ಬಿದ್ದು ತಲೆಯನ್ನು ಒಡೆದುಕೊಳ್ಳುವದು ಬುದ್ಧಿವಂತಿಕೆಯ ಲಕ್ಷಣವಲ್ಲ. ಅದರ ತಳವನ್ನು ಕೆದರಿ ಪೊಳ್ಳುಮಾಡಿದರೆ ಒಂದಿಲ್ಲೊಂದು ದಿವಸ ಅದು ಕುಸಕೊಂಡು ಬೀಳುವದು. ಭವಾನೀದೇವಿಯ ಮನಸಿಗೆ ಬಂದರೆ ಅವಳೇ ನಮಗೆ ಕೀರ್ತಿಯನ್ನು ಕೊಡುವಳು. ಸಮರ್ಥರ ಆಶೀರ್ವಾದವನ್ನು ಪಡಕೊಂಡು ಉದ್ಯೋಗ ಮಾಡುವದಿಷ್ಟೇ ನಮ್ಮ ಕೆಲಸವು.”. ಬಳಿಕ ಆ ತರು ಣನ ಕಡೆಗೆ ಮೋರೆಮಾಡಿ:—“ನಡೆಯಿರಿ, ನಿಮಗೆ ಅಲ್ಲಿಗೆ ಹೋಗಲಿಕ್ಕೆ ತಡ ವಾಗುವದು ನಾವೂ ಅಲ್ಲಿಗೇ ಬರತಕ್ಕವರಿದ್ದೇವೆ ನಮ್ಮ ಸಂಗಡ ನಡೆಯಿರಿ. ಒಬ್ಬರಿಗೊಬ್ಬರು ಜೋಡಾಗಿ ಹೋಗೋಣ” ಎಂದು ನುಡಿದನು.

ತರುವಾಯ ವಿಜಾಪುರದ ಆ ತರುಣ ಗೃಹಸ್ಥನು ತನ್ನ ಮೇಣೆಯ ಕಡೆಗೆ ಹೋಗಿ ಭೋಯಿಗಳನ್ನೆಲ್ಲ ಒತ್ತಟ್ಟಿಗೆ ಕರೆದು ಯಾರಾರಿಗೆ ಎಲ್ಲೆಲ್ಲಿ ಗಾಯ ವಾಗಿದೆಯೆಂಬದನ್ನು ನೋಡಿ ವಿಚಾರಮಾಡಿ ನಿಮ್ಮಿಂದ ಮೇಣೆಯನ್ನು ಹೊರು ವದು ಆಗುವದೋ ಇಲ್ಲವೋ ಎಂದು ಪ್ರಶ್ನಮಾಡಿದನು. ಭೋಯಿಗಳು ತುಸುಹೊತ್ತು ವಿಶ್ರಾಂತಿಯನ್ನು ತಕ್ಕೊಂಡಿದ್ದರಿಂದ ಅವರು:—“ನಾವು ಹ್ಯಾಗಾದರೂ ಮಾಡಿ ಸಮೀಪದ ಗ್ರಾಮಕ್ಕೆ ಮೇಣೆಯನ್ನು ಹೊತ್ತುಕೊಂಡು ಬರುವೆವು” ಎಂದು ಆಶ್ವಾಸನಕೊಟ್ಟು, ಮೇಣೆಯನ್ನು ಎತ್ತಿದರು. ಆ ಮೇಣೆ ಯಲ್ಲಿ ತರುಣ ಮಹಾರಾಷ್ಟ್ರ ಸರದಾರನ ಮನೆಯ ಹೆಂಗಸರಿದ್ದರೆಂದು ಬೇರೆ ಹೇಳುವ ಕಾರಣವಿಲ್ಲ.

ಇತ್ತ ವಿಜಾಪುರದ ಆ ತರುಣ ಗೃಹಸ್ಥನ ಮೇಲೆ ಸ್ವಾರೀಮಾಡಿದ ಮುಸ ಲ್ಮಾನರು ಒದ್ದಾಡುತ್ತ ಬಿದ್ದುಕೊಂಡಿದ್ದರು. ಅವರನ್ನು ಕಣ್ಣೆತ್ತಿ ನೋಡುವ ಇಚ್ಛೆಯು ಯಾರಿಗೂ ಆಗಲಿಲ್ಲ. ಆದರೆ ನಮ್ಮ ಆ ಗಿಡ್ಡಮನುಷ್ಯನು ಮಾತ್ರ ಅವರಲ್ಲಿ ಯಾರಾದರೂ ಜೀವದಿಂದಿದ್ದರೆ ಅವರ ಯೋಗಕ್ಷೇಮವನ್ನು ತಕ್ಕೊಳ್ಳ

ಬೇಕೆಂದು ಹೋಗಿ ಪರೀಕ್ಷಿಸಲು, ಅವರೆಲ್ಲರೂ ಇಹಲೋಕವನ್ನು ಬಿಟ್ಟು ತೆರಳಿದ್ದರು. ಇನ್ನು ಮೇಲೆ ಅಲ್ಲಿ ನಿಲ್ಲುವ ಕಾರಣವಿಲ್ಲೆಂದು ತಿಳಿದು ಯಾವತ್ತು ಜನರು ಹೊರಟರು. ಮಾರ್ಗದಲ್ಲಿ ಒಂದು ಸಣ್ಣ ಹಳ್ಳಿಯು ಹತ್ತಿತು. ಆ ಗಿಸ್ತ ಮನುಷ್ಯನು ಆ ಹಳ್ಳಿಯಲ್ಲಿ ಮುಸಲ್ಮಾನರು ಯಾರಾದರೂ ಇರುವರೋ ಇಲ್ಲವೋ ಎಂಬದನ್ನು ವಿಚಾರಿಸಿದನು ಅಲ್ಲಿ ಇಬ್ಬರು ಮುಸಲ್ಮಾನರು ಮಾತ್ರ ಇರುವರೆಂದು ತಿಳಿದ ಕೂಡಲೆ ಅವನು ಅವರ ಹತ್ತರ ಹೋಗಿ—"ಎಲೈ, ಮುಸಲ್ಮಾನಬಂಧುಗಳೇ, ನಾವು ಬಂದ ದಾರಿಯು ಅಡ್ಡಮಗ್ಗಲು ಅಯ್ದಾರು ಜನ ಮುಸಲ್ಮಾನರು ತಮ್ಮ ಕರ್ಮದಿಂದ ಸತ್ತುಬಿದ್ದಿರುತ್ತಾರೆ. ಅವರಿಗೆ ಮಣ್ಣು ಕೊಡಿರಿ. ನೆರೆವೂರಲ್ಲಿ ಯಾರಾದರೂ ನಿಮ್ಮ ಜಾತಿಬಾಂಧವರಿದ್ದರೆ ಅವರನ್ನೂ ಕರೆಯಿರಿ. ಖರ್ಚಿಗೆ ಬೇಕಾದರೆ, ಇಕೋ, ತೆಗೆದುಕೊಳ್ಳಿರಿ." ಎಂದು ಹೇಳಿ ಅವರ ಮುಂದೆ ಒಂದು ಮೊಹರನ್ನು ಚಲ್ಲಿಬಿಟ್ಟನು. ಅದನ್ನು ಕಂಡು ಆ ತರುಣ ಮಹಾರಾಷ್ಟ್ರ ಸರದಾರನಿಗೆ ಬಹಳ ಆಶ್ಚರ್ಯವಾಯಿತು. ಆಗ ಆತನು ಮತ್ತೊಬ್ಬ ಗೃಹಸ್ಥನನ್ನು ಕುರಿತು ಸಾವಕಾಶವಾಗಿ—"ಏನಿರಿ, ಇದೇನು? ಇಂದು ನರಿನಾಯಿಗಳಿಗೆ ದೊಡ್ಡ ಮೇಜವಾನಿಯಾಗುತ್ತಿತ್ತು. ನೀವು ಹೀಗೆ ಮಾಡಿದರೆ ನಿಷ್ಕಾರಣವಾಗಿ ಅವುಗಳ ಅನ್ನವನ್ನು ಕಸಕೊಂಡು ಅವುಗಳ ಬಾಯಿಯಲ್ಲಿ ಮಣ್ಣು ಹಾಕಿದಂತಾಗುತ್ತದೆ. ಆ ಮುಸುಂಡಿಗಳಿಗೇಕೆ ಅಂತ್ಯವಿಧಿಯು? ಅವರಿಗೆ ಮಣ್ಣು ಕೊಡುವ ವ್ಯವಸ್ಥೆಯನ್ನು ನಾವೇಕೆ ಮಾಡಬೇಕು? ಎಂದು ಪ್ರಶ್ನ ಮಾಡಿದನು.

ಈ ಮಾತಿಗೆ ಆ ಗೃಹಸ್ಥನು—"ಛೀ ಛೀ ಛೀ, ತಮ್ಮಾ, ಈ ಮಾತನ್ನು ನೀನು ಮೆಲ್ಲಗೆ ಹೇಳಿದಿ, ಒಳ್ಳೇದಾಯಿತು. ನಮ್ಮ ಮಹಾರಾಜರು ತಮ್ಮ ಜನರಲ್ಲಿ ಒಳ್ಳೇ ಪದ್ಧತಿಗಳನ್ನು ನೆಲೆಗೊಳಿಸಿರುತ್ತಾರೆ. ರಣಭೂಮಿಯಲ್ಲಿ ಎಲ್ಲಿಯವರೆಗೆ ಉಭಯಪಕ್ಷದವರ ನಡುವೆ ಯುದ್ಧವು ನಡೆಯುವದೋ ಅಲ್ಲಿಯವರೆಗೆ ಶತ್ರುತ್ವವು; ಪ್ರತಿಪಕ್ಷದವರು ಸತ್ತುಬಿದ್ದರೆ ಅಥವಾ ಶರಣು ಬಂದರೆ ಅಲ್ಲಿಗೆ ಶತ್ರುತ್ವವು ಮುಗಿಯಿತು. ಆ ಬಳಿಕ ನಾವೇ ಅವರ ವಿಷಯವಾಗಿ ವಿಚಾರ ಮಾಡಲಿಕ್ಕೆ ಬೇಕು. ಪ್ರತಿಪಕ್ಷದ ಜನರನ್ನು ನಮ್ಮ ಜನರಂತೆ ತಿಳಕೊಂಡು ಅವರ ಅಂತ್ಯವಿಧಿಯ ವ್ಯವಸ್ಥೆಯನ್ನಾಗಲಿ, ಉಳಿದವರ ಸಂರಕ್ಷಣವನ್ನಾಗಲಿ ಮಾಡಲಿಕ್ಕೆ ಯತ್ನಿಸತಕ್ಕದ್ದು. ಮಹಾರಾಜರ ಇಚ್ಛೆಯಂತೆಯೇ ಇವನು ಎಲ್ಲ ಕೆಲಸಗಳನ್ನು ಮಾಡಿರುವನು. ಅದಕ್ಕೆ ಏನೂ ತಪ್ಪಿಲ್ಲ;" ಎಂದು ಉತ್ತರ ಕೊಟ್ಟನು.

ಅದನ್ನು ಕೇಳಿ ಆ ತರುಣ ಮಹಾರಾಷ್ಟ್ರ ಸರದಾರನಿಗೆ ಬಹಳ ಆಶ್ಚರ್ಯವಾಯಿತು. ಮುಂದೆ ಆತನು ತನ್ನ ಮೇಣೆಯನ್ನು ಹೊರುವದಕ್ಕಾಗಿ ಬೇರೆ ಭೋಯಿಗಳನ್ನು ಗೊತ್ತುಮಾಡಿಕೊಂಡು, ಗಾಯಪಟ್ಟ ಭೋಯಿಗಳ ಊಟ ಉಡಿಗೆಯ ವ್ಯವಸ್ಥೆಯನ್ನು ಮಾಡಿ, ಅಲ್ಲಿಂದ ಎಲ್ಲರ ಸಂಗಡ ಸಮರ್ಥರ ಮಠಕ್ಕೆ ಹೋಗುವದಕ್ಕಾಗಿ ಹೊರಟನು. ತುಸು ಹೊತ್ತಿನಲ್ಲಿಯೇ ಅವರೆಲ್ಲರು ಅಲ್ಲಿಗೆ ಹೋಗಿ ಮುಟ್ಟಿದರು.

---

## ೩—ವಿಚಾರ.

ಆ ಎಲ್ಲ ಜನರು ಬೇಗನೆ ಪರಳಿಗೆ ಬಂದು ಮುಟ್ಟಿದರು. ಆ ಪುಣ್ಯಭೂಮಿಯ ದರ್ಶನದಿಂದಲೇ ಎಲ್ಲರಿಗೂ ಅತ್ಯಾನಂದವಾಯಿತು. ಯಾವ ಪುಣ್ಯಪ್ರದೇಶವನ್ನು ಕಾಣಬೇಕೆಂತಲೂ ಯಾವ ಪುಣ್ಯಪುರುಷನ ದರ್ಶನವನ್ನು ತೆಗೆದುಕೊಳ್ಳಬೇಕೆಂತಲೂ ಆ ತರುಣ ದಂಪತಿಗಳು ಬಹುದಿವಸದಿಂದ ಉತ್ಸುಕರಾಗಿದ್ದರೋ, ಮತ್ತು ಯಾವ ಪುಣ್ಯಪ್ರದೇಶಕ್ಕೆ ಬರುವಾಗ ದಾರಿಯಲ್ಲಿ ನಾನಾತರದ ಕಷ್ಟಗಳನ್ನು ಅನುಭವಿಸಬೇಕಾಯಿತೋ ಆ ಪುಣ್ಯಪ್ರದೇಶಕ್ಕೆ ತಮ್ಮ ಪಾದಸ್ಪರ್ಶವಾದ ಕೂಡಲೆ ಅವರು ಅತ್ಯಾನಂದ ಪಟ್ಟದ್ದು ಆಶ್ಚರ್ಯವಲ್ಲ. ಆ ಪುಣ್ಯಭೂಮಿಯಲ್ಲಿ ಬೆಳೆದ ಗಿಡಬಳ್ಳಿಗಳಲ್ಲಿಯೂ ಮುಂದೆ ಕಾಣುವ ಗುಡ್ಡದಲ್ಲಿಯೂ ವಿಶೇಷವೇನೂ ಇದ್ದಿಲ್ಲ ಆದರೆ, ಅವುಗಳನ್ನು ನೋಡುವವರ ಮನಸ್ಸಿನಲ್ಲಿ ಅವುಗಳ ವಿಷಯವಾಗಿ ಸ್ವಾಭಾವಿಕವಾಗಿಯೇ ಪೂಜ್ಯಬುದ್ಧಿಯು ವಾಸಮಾಡುತ್ತಿತ್ತು. ಅದರಿಂದ ಅಲ್ಲಿಯ ಪ್ರತಿಯೊಂದು ಪದಾರ್ಥದೊಳಗೆ ಏನಾದರೂ ವಿಶೇಷವುಂಟೆಂದು ಅವರಿಗೆ ಭಾಸವಾಗುತ್ತಿತ್ತು. ಆ ತರುಣ ಮಹಾರಾಷ್ಟ್ರ ಸರದಾರನು ತನ್ನ ಮನಸ್ಸಿನಲ್ಲಿ—"ಇಲ್ಲಿಂದ ಹೋಗಲೇಬಾರದೆಂದು ಅನಿಸುತ್ತದೆ. ಇಂಥ ಪುಣ್ಯಪ್ರದೇಶಕ್ಕೆ ಬಂದು ಆ ಪುಣ್ಯಪುರುಷನ ದರ್ಶನವನ್ನು ತಕ್ಕೊಂಡು ಇಲ್ಲಿಂದ ಪುನಃ ಆ ಅವಿಂಧರ ಸೇವೆಗೆ ಹೋಗುವಂಥ ಮಹತ್ಪಾಪವು ಮತ್ತೊಂದಿಲ್ಲ. ಇಲ್ಲಿಯೇ ಇದ್ದು ಬಿಡುವದು ಒಳ್ಳೇದು ಜನರಿಗೆ ಪರಿಪರಿಯ ಪೀಡೆಯನ್ನು ಕೊಡುವವರ ಸೇವೆಯನ್ನು ಬಿಟ್ಟು ಇಂಥ ಪುಣ್ಯಪುರುಷರ ಸೇವೆಯಲ್ಲಿ ಆಯುಷ್ಯವನ್ನು ಕಳೆದರೆ ಏನು ಕೆಟ್ಟಾಗುವದು?" ಎಂದು ಆಲೋಚಿಸಿ ಆತನು ಅಲ್ಲಿಯೇ ಇದ್ದುಬಿಡಬೇಕೆಂದು ಮಾಡಿದನು. ಇದಲ್ಲದೆ ಆ ತರುಣನ ಮನಸ್ಸಿನಲ್ಲಿ ಮತ್ತೆ

ಕೆಲವು ವಿಚಾರಪರಂಪರೆಗಳು ನಡೆದಿದ್ದವು; ಅವೇನಂದರೆ—“ಅಡವಿಯಲ್ಲಿ ಸಂಕಟದೊಳಗೆ ಸಿಕ್ಕಾಗ ಸಹಾಯಮಾಡಿ ನನ್ನನ್ನು ಬಿಡಿಸಿದ ಈ ಜನರು ಶಿವಾಜಿಮಹಾರಾಜರ ಅತ್ಯಂತ ಪ್ರೇಮಕ್ಕೆ ಪಾತ್ರರಾಗಿರಬಹುದೆ”ಂಬದು ಸ್ಪಷ್ಟವಾಗಿ ತಿಳಿಯಿತು. ಮಹಾರಾಜರ ಎಲ್ಲ ಸೇವಕರೂ ಹೀಗೆ ಇದ್ದರೆ ಅವರು ಹಿಡಿದ ಕಾರ್ಯದಲ್ಲಿ ಸಹಜ ಯಶ ದೊರೆಯುವದು. ನಾನು ಯಃಕಶ್ಚಿತ ಮನುಷ್ಯನು—ಮೇಲಾಗಿ ವಿಜಾಪುರದವರ ಕಡೆಯವನು—ಹೀಗಿದ್ದಾಗ್ಯೂ, ಅವರು ನನ್ನ ಸಲುವಾಗಿ ತಮ್ಮ ದಾರಿಯನ್ನು ಬಿಟ್ಟು ಅಡ್ಡದಾರಿಯಿಂದ ಬಂದು ನನ್ನನ್ನು ಸಂಕಟದೊಳಗಿಂದ ಪಾರುಮಾಡಿದ್ದು ಸಾಮಾನ್ಯಸಂಗತಿಯಲ್ಲ. ದುಃಖಿತನಾದ ಮನುಷ್ಯನು ಕಣ್ಣಿಗೆ ಬಿದ್ದ ಕೂಡಲೆ ಅಥವಾ ಆತನ ಆರ್ತಸ್ವರವು ಕಿವಿಗೆ ಬಿದ್ದ ಕೂಡಲೆ ಅವನ ದುಃಖವನ್ನು ಇಲ್ಲದಂತೆ ಮಾಡುವ ವಿಷಯದಲ್ಲಿ ಶಿವಾಜಿಮಹಾರಾಜರ ಖ್ಯಾತಿಯನ್ನು ನಾನು ಮೇಲಿಂದ ಮೇಲೆ ಕೇಳುತ್ತಲಿದ್ದೆನು; ಇಂದು ಪ್ರತ್ಯಕ್ಷವಾಯಿತು. ಅವರ ಆಶ್ರಯದೊಳಗಿನ ಎಲ್ಲ ಜನರಲ್ಲಿ ಈ ಗುಣವು ಯಾವಾಗಲೂ ಜಾಗ್ರತವಾಗಿದ್ದಂತೆ ತೋರುತ್ತದೆ. ಆದಕಾರಣ ಇನ್ನು ಮೇಲೆ ನಾನು ಪುನಃ ವಿಜಾಪುರಕ್ಕೆ ಹೋಗಿ ಏನು ಮಾಡತಕ್ಕದ್ದಿದೆ? ಇಲ್ಲಿಯೇ ಈ ಸತ್ಪುರುಷರ ಸೇವೆ ಮಾಡುತ್ತ ಅಥವಾ ಮಹಾರಾಜರ ಸೇವೆಗಾಗಿ ಈ ನನ್ನ ಶೌರ್ಯವನ್ನು ಉಪಯೋಗಿಸುತ್ತ ಇರತಕ್ಕದ್ದು” ಇವೇ ಮೊದಲಾದ ವಿಚಾರಗಳಿಂದ ಆತನ ಮನಸ್ಸು ತುಂಬಿ ಹೋಯಿತು.

ಆ ಯಾವತ್ತೂ ಜನರು ಪರಳಿಗೆ ಹೋಗಿ ಮುಟ್ಟಿದ ಕೂಡಲೆ ಅವರೆಲ್ಲರ ಮನಸಿನಲ್ಲಿಯೂ ಸ್ವಾಮಿಮಹಾರಾಜರ ದರ್ಶನವಿಷಯದ ವಿಚಾರವು ನಡೆದಿತ್ತು. ಮಠದಲ್ಲಿ ಎಲ್ಲಕ್ಕೂ ಮೊದಲು ಭೆಟ್ಟಿಯಾದವರಿಗೆ ಆ ವಿಷಯವಾಗಿ ಪ್ರಶ್ನವನ್ನು ಮಾಡಿದರು. ಅದಕ್ಕೆ ದೊರೆತ ಉತ್ತರದಿಂದ ಅವರ ಮನಸು ಬಹಳ ಖಿನ್ನವಾಯಿತು. ಯಾಕಂದರೆ, ಅವರೆಲ್ಲರಿಗೆ ವಿಶೇಷವಾಗಿ ವಿಜಾಪುರದಿಂದ ಬಂದ ಆ ತರುಣ ಗೃಹಸ್ಥನಿಗೆ ಹೋದ ಕೂಡಲೆ ಸ್ವಾಮಿಯವರ ದರ್ಶನವಾಗುವದೆಂತಲೂ ಅದರಿಂದ ತಾನು ಜನ್ಮಸಾರ್ಥಕ್ಯವನ್ನು ಹೊಂದುವೆನೆಂತಲೂ ಪೂರ್ಣವಾದ ನಂಬಿಗೆಯಿತ್ತು; ಆದರೆ ಸ್ವಾಮಿಗಳು ಪುರಶ್ಚರಣಕ್ಕೆ ಕುಳಿತಿರುವರೆಂಬ ವೃತ್ತಾಂತವನ್ನು ಕೇಳಿದ ಕೂಡಲೆ ಅವನ ಮನಸು ಉದಾಸವಾಯಿತು. ಆ ತರುಣನು ಖಿನ್ನವಾದದ್ದನ್ನು ಆತನ ಸಂಗಡಿಗರು ಸ್ಪಷ್ಟವಾಗಿ ಕಂಡುಹಿಡಿದರು. ಅವರಲ್ಲಿಯ ಗಿಡ್ಡನು ಆ ತರುಣನ ಕಡೆಗೆ ನೋಡಿ—“ನೀವು ಇಷ್ಟೇನು ಮನಸಿಗೆ

ಹಚ್ಚಿಕೊಳ್ಳುವ ಕಾರಣವಿಲ್ಲ. ನಿಮ್ಮ ಮನಸಿನಲ್ಲಿದ್ದಂತೆ ಇದೇ ಈಗ ಸ್ವಾಮಿಗಳ ದರ್ಶನವಾದೀತು; ಆದರೆ, ಆ ದರ್ಶನವು ನಿರರ್ಥಕವಾಗದಂತೆ ತಕ್ಕ ಯೋಜನೆಯನ್ನು ಮಾತ್ರ ಮನಸಿನಲ್ಲಿ ಮಾಡಿಟ್ಟುಕೊಳ್ಳತಕ್ಕದ್ದು." ಎಂದಂದನು.

ವಿಜಾಪುರದ ಆ ತರುಣನು ಗಿಡ್ಡ ಮನುಷ್ಯನ ಕಡೆಯ ಮಾತನ್ನು ಕೇಳಿ ಆತನ ಮೋರೆಯ ಕಡೆಗೆ ನೋಡಿ, ಸ್ವಲ್ಪ ಮುಗುಳುನಗೆ ನಕ್ಕನು; ಮತ್ತು ಮನಸಿನಲ್ಲಿ ವಿಚಾರಮಾಡಿದ್ದೇನಂದರೆ:—ನನ್ನ ಮನಸಿನೊಳಗಿನ ವಿಚಾರವನ್ನು ತಿಳಿದವನಂತೆ ಈ ಗೃಹಸ್ಥನು ಮಾತಾಡಿದನು. ಒಳ್ಳೇದು; ನನ್ನ ಮನಸಿನೊಳಗಿನ ವಿಚಾರಗಳನ್ನು ಇವರ ಮುಂದೆ ಹೇಳಲಿಕ್ಕಾದರೂ ಏನು ಅಡ್ಡಿಯದೆ? ಸಮರ್ಥರ ಅಪ್ಪಣೆಯಾದರೆ ಈ ದೇಹವನ್ನು ಶಿವಾಜಿ ಮಹಾರಾಜರ ಊಳಿಗದಲ್ಲಿ ಸವೆಸಲಿಕ್ಕೆ ಹೋಗುವಾಗ್ಗೆ ಇವರ ಮುಖಾಂತರದಿಂದಲೇ ಹೋದರಾಯಿತು.

ಈ ಪ್ರಕಾರ ಆ ತರುಣನು ಮನಸ್ಸಿನಲ್ಲಿ ವಿಚಾರಮಾಡಿ ಆ ಗಿಡ್ಡ ಮನುಷ್ಯನಿಗೆ ಏನೋ ಉತ್ತರವನ್ನು ಕೊಡಬೇಕೆನ್ನುವಷ್ಟರಲ್ಲಿ ಮಠದೊಳಗಿಂದ ಒಬ್ಬ ಮನುಷ್ಯನು ಆ ಗಿಡ್ಡ ಮನುಷ್ಯನ ಒಳಿಗೆ ಬಂದು ಒಳ್ಳೇ ಆದರದಿಂದ ಮಾತಾಡಿದ್ದೇನಂದರೆ:—ಸಮರ್ಥರು ಪುರಶ್ಚರಣಕ್ಕಾಗಿ ಕುಳಿತು ಇಂದಿಗೆ ಇಪ್ಪತ್ತೊಂದು ದಿವಸಗಳು ಪೂರ್ಣವಾದವು. ಕಲ್ಯಾಣಸ್ವಾಮಿ, ಶ್ರೀಧರಸ್ವಾಮಿ, ವೇಣೂಬಾಯಿ ಇವರು ಎಂದಿನಂತೆ ಅತ್ತ ಕಡೆಗೆ ಹೋಗಿದ್ದಾರೆ. ಪುರಶ್ಚರಣವು ಬಹುಶಃ ಮುಗಿದಿರಬಹುದು. ಮಹಾರಾಜರು................

ಹೀಗೆ ಮಾತಾಡುತ್ತಿರುವಷ್ಟರಲ್ಲಿ ನಡುವೇ ಬಾಯಿಹಾಕಿ ಆ ಗಿಡ್ಡ ಮನುಷ್ಯನು ಮಠದೊಳಗಿನ ಮನುಷ್ಯನಿಗೆ ಏನೋ ಸನ್ನೆ ಮಾಡಿದನು. ಅದರಿಂದ ಅವನು ತನ್ನ ಮಾತನ್ನು ಅಷ್ಟಕ್ಕೇ ನಿಲ್ಲಿಸಿ ಸುಮ್ಮನಾದನು. ಬಳಿಕ ಆ ಗಿಡ್ಡ ಮನುಷ್ಯನು—"ಒಳ್ಳೇದು, ಏನೂ ಅಡ್ಡಿ ಇಲ್ಲ. ಇವರು ನಮ್ಮ ಮಿತ್ರರು; ವಿಜಾಪುರದಿಂದ ಬಂದಿರುವರು. ಇವರಿಗೆ ಇಳಕೊಳ್ಳಲಿಕ್ಕೆ ಸ್ಥಳ ಹಾಗೂ ಇತರ ಅನಕೂಲವನ್ನು ಮಾಡಿಕೊಡಿರಿ. ಇವರು ಸಮರ್ಥರ ದರ್ಶನಕ್ಕಾಗಿ ಬಂದಿರುವರು;" ಎಂದು ಆ ಮಠದ ಮನುಷ್ಯನಿಗೆ ಹೇಳಿದನು. ತರುವಾಯ ವಿಜಾಪುರದ ತರುಣ ಗೃಹಸ್ಥನ ಕಡೆಗೆ ತಿರುಗಿ—"ಇಲ್ಲಿ ನಿಮಗೆ ಬೇಕಾದ ಅನುಕೂಲತೆಯು ಮಾಡಿಕೊಡಲ್ಪಡುವದು, ಚಿಂತೆಮಾಡಬಾರದು. ಇಷ್ಟೊತ್ತಿಗೆ ಸಮರ್ಥರ ಪುರಶ್ಚರಣವು ಮುಗಿದಿದ್ದರೆ ಅವರೂ ಇತ್ತ ಕಡೆಗೇ ಬರುವರು. ನೀವು ನಿಮ್ಮ ವ್ಯವಸ್ಥೆಯನ್ನು ಮಾಡಿಕೊಳ್ಳುವಷ್ಟರಲ್ಲಿ ಸಮರ್ಥರ ಮೂರ್ತಿಯು

ನಿಮ್ಮ ದೃಷ್ಟಿಗೆ ಬೀಳುವದು. ಅವರ ಆ ಪುರಶ್ಚರಣ ಭೂಮಿಯಲ್ಲಿ ಅಂದರೆ ತಪಸ್ಸಿನ ಗುಹೆಯಲ್ಲಿ ಪರರು ಯಾರಾದರೂ ಬಂದರೆ ಅವರಿಗೆ ಸೇರುವದಿಲ್ಲ'' ಎಂದು ಹೇಳಿ ಅವನನ್ನು ಆ ಮಠದೊಳಗಿನ ಜನರ ಸ್ವಾಧೀನ ಮಾಡಿ, ಅವರಿಬ್ಬರೇ ಪುರಶ್ಚರಣ ಭೂಮಿಯ ಹಾದೀಹಿಡಿದು ಸ್ವಲ್ಪವೇಳೆಯಲ್ಲಿ ಆ ಪುಣ್ಯಭೂಮಿಗೆ ತಲ್ಪಿದರು. ಆಗ ಮೊದಲನೇ ಪ್ರಕರಣದಲ್ಲಿ ಹೇಳಿದಂತೆ ಸ್ವಾಮಿಗಳು ತಮ್ಮ ಪುರಶ್ಚರಣವನ್ನು ಅದೇ ಮುಗಿಸಿ ಕೆಲಕೆಲವು ಮಾತುಗಳನ್ನು ತಮ್ಮಷ್ಟಕ್ಕೆ ತಾವೇ ಮಾತಾಡಿದಂತೆಯೂ, ಕೆಲವು ಮಾತುಗಳನ್ನು ಶಿಷ್ಯರಕೂಡ ಮಾತಾಡಿದಂತೆಯೂ ಮಾತಾಡುತ್ತಿದ್ದರು. ಈ ಇಬ್ಬರು ಗೃಹಸ್ಥರು ಬಂದದ್ದನ್ನು ಕಂಡು ಶ್ರೀಧರ ಸ್ವಾಮಿಗೂ, ಕಲ್ಯಾಣಸ್ವಾಮಿಗೂ ವಿಲಕ್ಷಣ ಆನಂದವಾದಂತೆ ಕಂಡು ಬಂತು. ಆಗ ಶ್ರೀಧಸ್ವಾಮಿಗಳು—ನಮಗೆ ಇಂದು ನಿಮ್ಮ ನೆನಪು ಆಗಿ ಇನ್ನೂ ನಾಲ್ಕು ಗಳಿಗೆಗಳು ಸಹ ಪೂರ್ಣವಾಗಿಲ್ಲ. ಅಷ್ಟರಲ್ಲಿ ನೀವು ಇಲ್ಲಿಗೆ ಪ್ರತ್ಯಕ್ಷವಾಗಿ ಬಂದಿರಿ ಮನೋಮಯ ದೃಷ್ಟಾಂತವು ಹೀಗೆ ಇರುತ್ತದೆ ಕಂಡಿರಾ! ಸಮರ್ಥರ ಪುರಶ್ಚರಣವು ಮುಗಿದು, ಅವರು ತಮ್ಮ ಸಮಾಧಿಯನ್ನು ಇಳಿಸುತ್ತಿರುವಂತೆ ಕಾಣುತ್ತದೆ. ಅವರು ಮೊದಲು ಕೆಲವು ಶಬ್ದಗಳನ್ನು ಆಡಿದರು. ಅವುಗಳ ಅರ್ಥವು ನಮಗೇನೂ ಹೊಳೆಯಲಿಲ್ಲ ನಿಮಗೆ ಮಾತ್ರ ಕೂಡಲೆ ಹೊಳೆಯುವದು. ಸಮರ್ಥರು ಆಡಿದ ಆ ಗೂಢ ಶಬ್ದಗಳು ಬಹುಶಃ ನಿಮ್ಮನ್ನೇ ಸಂಬಂಧಿಸಿರುತ್ತವೆಂದು ನನ್ನ ತಿಳುವಳಿಕೆಯುಂಟು.

ನಮ್ಮ ಆ ಇಬ್ಬರು ದಾರಿಕಾರರು ಗವಿಯ ಸಮೀಪಕ್ಕೆ ಬಂದು ಮುಟ್ಟಿದಾಗ ಮೊದಲನೇ ಪ್ರಕರಣದ ಕಡೆಯಲ್ಲಿ ಹೇಳಿದಂತೆ ಸಮರ್ಥರ ಭಾಷಣವಾಗಿ ಅವರು ಪುನಃ ಸ್ತಬ್ಧರಾಗಿ ಕುಳಿತಿದ್ದರು. ಸಮಾಧಿಯನ್ನು ಮತ್ತೆ ಏರಿಸಿದ್ದರು. ಕಣ್ಣು ಮಾತ್ರ ಇನ್ನೂ ತೆರೆದಿದ್ದಿಲ್ಲ. ನಡನಡುವೆ ಅವರು ತಮ್ಮ ಜಟಾವಿಭೂಷಿತ ಶಿರಸ್ಸನ್ನು ಅಲ್ಲಾಡಿಸುತ್ತ ನಡುವೇ ಬುಭುಃಕಾರವನ್ನು ಮಾಡಿ "ಶ್ರೀರಘುವೀರಸಮರ್ಥ'' ಎಂದು ಅನ್ನುತ್ತಿದ್ದರು. ಇದೇ ಪ್ರಕಾರವು ಸುಮಾರು ಎರಡು ಮೂರು ಪ್ರಹರಗಳವರೆಗೆ ನಡೆಯಿತು. ಶ್ರೀಧರಸ್ವಾಮಿಗಳೂ ಕಲ್ಯಾಣಸ್ವಾಮಿಗಳೂ ವೇಣೂಬಾಯಿಯೂ ಮುಂಚೆ ಹ್ಯಾಗೆ ಯಾವ ಸ್ಥಿತಿಯಲ್ಲಿ ಅಂದರೆ, ಸಮರ್ಥರ ಎಡಬಲಗಳಲ್ಲಿಯೂ ಹಿಮ್ಮಗ್ಗಲೂ ನಿಂತುಕೊಂಡಿದ್ದರೋ ಹಾಗೇ ನಿಂತುಬಿಟ್ಟಿದ್ದರು. ಸ್ವಾಮಿಗಳು ಮತ್ತೆ ಕೆಲವು ದಿವಸ ಪುರಶ್ಚರಣಕ್ಕೆ ಕೂಡುವರೋ ಏನೋ ಎಂದು ಅವರ ಮನಸಿನಲ್ಲಿ ಬರಹತ್ತಿತು; ಮತ್ತು "ನಾವು

ಇಲ್ಲಿಯೇ ನಿಂತುಕೊಳ್ಳಬೇಕೋ ಅಥವಾ ಇಲ್ಲಿಂದ ಮಠಕ್ಕೆ ಹೋಗಬೇಕೋ" ಎಂಬ ಬಗ್ಗೆ ಅವರು ತಮ್ಮ ಮನಸಿನಲ್ಲಿ ಆಲೋಚನೆ ಮಾಡತೊಡಗಿದರು. ಅವರಿಗೆ ನಾಲ್ನಾಲ್ಕು ಅಯ್ದಯ್ದು ಪ್ರಹರಗಳವರೆಗೆ ಒಂದೇ ಸವನೆ ನಿಲ್ಲುವ ರೂಢಿಯು ಇದ್ದದರಿಂದ ಈ ಕಾಲಕ್ಕೆ ಅವರಿಗೆ ವಿಶೇಷತೊಂದರೆ ಎನಿಸಲಿಲ್ಲ. ಹೀಗೆ ನಿಲ್ಲುವದು ತಮ್ಮ ಕರ್ತವ್ಯವೆಂದು ಅವರು ತಿಳಕೊಂಡು ಸ್ಥಳಬಿಟ್ಟು ಕದಲದೆ ನಿಂತುಕೊಂಡಿದ್ದರು. ನಾಲ್ಕು ಪ್ರಹರ ಹೊತ್ತಾಗುತ್ತ ಬಂತು. ಮೊದಲು ಆಡಿದ ಮಾತೇ ಮಾತು, ಪುನಃ ನಡುನಡುವೆ "ಶ್ರೀರಘುವೀರ ಸಮರ್ಥ" ಎಂಬ ಅಷ್ಟಾಕ್ಷರಿ ಮಂತ್ರಗ ಹೊರತು ಎರಡನೇ ಒಂದು ಚಕಾರ ಶಬ್ದವೂ ಸಮರ್ಥರ ಬಾಯಿಂದ ಹೊರಡಲಿಲ್ಲ. ಆ ಅಷ್ಟಾಕ್ಷರಿ ಮಂತ್ರವನ್ನು ಮಾತ್ರ ಒಳ್ಳೇ ಗಟ್ಟಿಸಿ ಉಚ್ಚಾರ ಮಾಡುತ್ತಿದ್ದದರಿಂದ ಎಲ್ಲ ಶಿಷ್ಯರು, ಸಮರ್ಥರು ಇನ್ನೊಂದು ಸಪ್ತಕ ಅಥವಾ ಎರಡು ಸಪ್ತಕ ಪುರಶ್ಚರಣಕ್ಕೆ ಕೂಡುವದಿಲ್ಲೆಂದು ಅನುಮಾನಿಸಿದರು. ಹೀಗಿದ್ದ ಮೇಲೆ ನಾವು ಇಲ್ಲಿಂದ ತಿಲಮಾತ್ರವೂ ಕದಲಬಾರದು. ಈಗ ನಿಂತಂತೆಯೇ ನಿಲ್ಲಲಿಕ್ಕೆಬೇಕು, ಎಂದು ಶಿಷ್ಯವರ್ಗವು ವಿಚಾರ ಮಾಡುತ್ತಿರುವಾಗ ಮೇಲೆ ವರ್ಣಿಸಿದ ಪ್ರಕಾರವು ನಡೆಯುತ್ತಿರಲು, ನಮ್ಮ ಇಬ್ಬರು ಪ್ರವಾಸಿಗರು ಆ ಸ್ಥಳಕ್ಕೆ ಬಂದು ಮುಟ್ಟಿದರು; ಮತ್ತು ಮೇಲೆ ಹೇಳಿದಂತೆ ಅವರ ಕೂಡ ಶ್ರೀಧರಸ್ವಾಮಿಗಳ ಭಾಷಣವಾಯಿತು.

ಆಗ ಆ ಗಿಡ್ಡ ಮನುಷ್ಯನು ಒಳ್ಳೇ ಉತ್ಕಂಠೆಯಿಂದ—ಗೂಢಭಾಷಣವೆ? ಏನಾಯಿತು? ಎಂದು ಶ್ರೀಧರಸ್ವಾಮಿಯನ್ನು ಕೇಳಿದನು.

"ನಾವು ಈ ಹೊತ್ತು ಇಪ್ಪತ್ತೊಂದನೇ ದಿವಸವೆಂದು, ಎಂದಿನಂತೆ ಈ ಸ್ಥಳಕ್ಕೆ ಬಂದು ಹೊರಗೆ ಕೂತುಕೊಂಡೆವು. ಕೆಲಹೊತ್ತಿನ ಮೇಲೆ ಯಥಾ ಪ್ರಕಾರವಾಗಿ ಬುಭುಃಕಾರವಾಯಿತು. ಕೂಡಲೆ ನಾವು ಸಮರ್ಥರ ಸಮೀಪಕ್ಕೆ ಹೋಗಿ ನಿಂತೆವು. ಸ್ವಲ್ಪ ಹೊತ್ತಿನ ಮೇಲೆ ಸಮರ್ಥರು ನನ್ನನ್ನು ಕುರಿತು— "ಏನು ಸ್ವಾಮಿಗಳೇ, ಸೂರ್ಯಗ್ರಹಣದ ಯೋಗವಿದ್ದದ್ದು ನಿಮಗೆ ಗೊತ್ತಾಗಿದೆ ಏನು? ಕೆಲಹೊತ್ತಿನವರೆಗೆ ಖಗ್ರಾಸ ಸೂರ್ಯಗ್ರಹಣದ ಯೋಗವಿರುತ್ತದೆ!" ಎಂದು ನುಡಿದು ಪುನಃ ಸಮಾಧಿಯನ್ನು ಏರಿಸಿಕೊಂಡು ಕುಳಿತವರು ಇನ್ನೂ ಹಾಗೇ ಇರುತ್ತಾರೆ. ನಡುನಡುವೆ 'ಸೂರ್ಯಗ್ರಹಣದ ಯೋಗವಿರುತ್ತದೆ.' 'ಖಗ್ರಾಸ ಸೂರ್ಯಗ್ರಹಣದ ಯೋಗವಿರುತ್ತದೆ.' ಎಂದು ಒಂದೆರಡು ಸಾರೆ ನುಡಿದರು. ನಿತ್ಯದ ಪದ್ಧತಿಯಂತೆ ಸಮಾಧಿಯನ್ನು ಇಳಿಸಿದ ಕೂಡಲೆ ಸಮೀಪದ

ಘುರಿಗೆ ಹೋಗಿ ಆಚಮನವಿಧಿಯನ್ನು ಮಾಡತಕ್ಕದ್ದು. ಹಾಗೇನೂ ಈ ದಿನ ಮಾಡಲಿಲ್ಲ. ಮುಂದೆ ಕೆಲವು ಹೊತ್ತು ತಮ್ಮಷ್ಟಕ್ಕೆ ತಾವೇ—"ಸಾರಾಂಶ, ಸೂರ್ಯಗ್ರಹಣದ, ಕೆಲಹೊತ್ತಿನ ವರೆಗೆ ಖಗ್ರಾಸ ಸೂರ್ಯಗ್ರಹಣದ ಯೋಗವು ಇರುತ್ತದೆ. ಸೂರ್ಯನನ್ನು ರಾಹುವು ನುಂಗದೆ ಬಿಡುವದಿಲ್ಲ. ಆದರೆ—ಆದರೆ ಪುನಃ ರಾಹುವಿನ ಮುಖದಿಂದ ಬಿಡುಗಡೆ ಹೊಂದುವನು. ಆಗ ಸೂರ್ಯನು ವಿಶೇಷವಾಗಿ ತೇಜಃಪುಂಜನಾಗಿ ಕಾಣಹತ್ತುವನು. ಈ ಬಗ್ಗೆ ಚಿಂತೆಮಾಡುವ ಕಾರಣವಿಲ್ಲ." ಈ ಪ್ರಕಾರ ಮಾತಾಡುತ್ತಿದ್ದರು. ನಡೆದ ಯಾವತ್ತು ಸಂಗತಿಗಳನ್ನು ತಮಗೆ ಹೇಳಿದೆನು. ನಾನು ಆ ಸೂರ್ಯಗ್ರಹಣದ ವಿಷಯವಾಗಿ ಬಹಳ ಹೊತ್ತು ವಿಚಾರ ಮಾಡಿದೆನು. ನನಗೆ ಆ ಮಾತಿನ ಅರ್ಥವಾಗಲಿಲ್ಲ. ತಮ್ಮನ್ನು ನೋಡಿದಮೇಲೆ ಆ ಮಾತಿನಲ್ಲಿ ತಮಗೆ ಸಂಬಂಧಿಸಿದ್ದೇನಾದರೂ ಇರಬಹುದೆಂದು ಈಗ ನನ್ನ ಮನಸ್ಸಿನಲ್ಲಿ ಬರಹತ್ತಿದೆ. ತಾವು ಕೈಕೊಂಡ ಕೆಲಸದಲ್ಲಿ ಏನಾದರೂ ವಿಘ್ನವು ಬರಬಹುದು. ಅದಕ್ಕೆ ಸಂಬಂಧಿಸಿಯೇ ಸಮರ್ಥರ ಉದ್ಗಾರವಿರಬಹುದೆಂಬಂತೆ ತೋರುತ್ತದೆ. ಹಾಗಿಲ್ಲದಿದ್ದರೆ ಸೂರ್ಯನು ಯಾರು? ಗ್ರಹಣವು ಎಲ್ಲಿಯದು? ಸಮರ್ಥರು ತ್ರಿಕಾಲಜ್ಞರಾಗಿರುವರು. ಅವರು ಪುರಶ್ಚರಣಕ್ಕೆ ಕುಳಿತ ಸಮಯದಲ್ಲಿ ಅವರ ದಿವ್ಯದೃಷ್ಟಿಗೆ ಏನಾದರೂ ಕಾಣಿಸಿರಲಿಕ್ಕೆ ಬೇಕು. ಇಲ್ಲದಿದ್ದರೆ ಸುಮ್ಮಸುಮ್ಮನೆ ಅವರ ಬಾಯಿಂದ ನಿರರ್ಥಕ ಶಬ್ದಗಳು ಎಂದೂ ಹೊರಡಲಿಕ್ಕಿಲ್ಲ.

ಈ ಮೇರೆಗೆ ಶ್ರೀಧರಸ್ವಾಮಿಗಳ ಭಾಷಣವು ನಡೆದಿರಲು ಅದನ್ನು ಆ ಇಬ್ಬರು ಗೃಹಸ್ಥರು ಸಮಾಧಾನಚಿತ್ತದಿಂದ ಕೇಳುತ್ತಿದ್ದರು. ಅವರಲ್ಲಿ ಸ್ವಲ್ಪ ಎತ್ತರವಾದ ಮನುಷ್ಯನು ತನ್ನ ಸಂಗಡಿಗನ ಮೋರೆಯನ್ನು ನೋಡಿ ಆಶ್ಚರ್ಯಚಕಿತನಾಗಿ ನಕ್ಕನು. ಮತ್ತೊಬ್ಬನು ಸುಮ್ಮನೆ ಶ್ರೀಧರಸ್ವಾಮಿಗಳ ಭಾಷಣವನ್ನು ಕೇಳುತ್ತ ಗೋಣು ಅಲ್ಲಾಡಿಸುತ್ತ ನಿಂತುಕೊಂಡಿದ್ದನು. ಆಗ ಮೊದಲು ಮಾತಾಡಿದವನು ಪುನಃ ತನ್ನ ಸಂಗಡಿಗನನ್ನು ಕುರಿತು—"ಸಮರ್ಥರು ತ್ರಿಕಾಲಜ್ಞರೆಂಬ ಮಾತು ಸುಳ್ಳೇ? ತಮಗೆ ಪತ್ರಮುಖದಿಂದ ಬಂದಸುದ್ದಿಯನ್ನು ಸಮರ್ಥರು ಅಂತರ್ದೃಷ್ಟಿಯಿಂದ ಅರಿತಿರಬಹುದು; ಮತ್ತು ಅವರ ಈ ಉದ್ಗಾರವು ಆ ಸುದ್ದಿಗೇ ಸಂಬಂಧಿಸಿದ್ದಂತೆ ಕಾಣುತ್ತದೆ" ಎಂದು ಅಂದನು.

ಸಂಗಡಿಗನ ಈ ಮಾತು ಕೇಳಿ ಮತ್ತೊಬ್ಬ ವೀರನು ಗೋಣು ಅಲ್ಲಾಡಿಸಿ ತನ್ನ ಸಮ್ಮತಿಯನ್ನು ವ್ಯಕ್ತಪಡಿಸಿದನು; ಆದರೆ, ಬಾಯಿಂದ ಒಂದು ಅಕ್ಷರ

ವನ್ನು ಸಹ ಉಚ್ಚರಿಸಲಿಲ್ಲ. ಹೀಗೆಯೇ ಬಹಳ ಹೊತ್ತಿನವರೆಗೆ ನಡೆಯಿತು. ಕಲ್ಯಾಣಸ್ವಾಮಿಗಳೂ ಶ್ರೀಧರಸ್ವಾಮಿಗಳೂ—ಇನ್ನು ಹೊತ್ತು ಮುಣುಗಿ ಕತ್ತಲೆಯಾಗುವದು; ಬೇಗನೆ ನಾವು ಇಲ್ಲಿಂದ ಹೋಗುವದು ಉತ್ತಮ. ಸ್ವಾಮಿಗಳು ಇಂದೇನು ಏಳುವ ಲಕ್ಷಣವಿಲ್ಲ, ಪುನಃ ಒಂದು ಸಪ್ತಕದವರೆಗೆ ಪುರಶ್ಚರಣಕ್ಕೆ ಕೂಡ್ರುವಂತೆ ತೋರುತ್ತದೆ, ಎಂದು ವಿಚಾರಮಾಡಹತ್ತಿದರು; ಆದರೆ ವೇಣೂಬಾಯಿಗೆ ಅವರ ಅಭಿಪ್ರಾಯವು ಸರಿದೋರಲಿಲ್ಲ. ಅವಳು—ಛೇ! ಛೇ!! ಸಮರ್ಥರು ಇನ್ನು ಪುರಶ್ಚರಣಕ್ಕೆ ಕೂಡ್ರುವದಿಲ್ಲ ಸೂರ್ಯಗ್ರಹಣದ ಯೋಗ-ಖಗ್ರಾಸ ಸೂರ್ಯಗ್ರಹಣದ ಯೋಗವುಂಟೆಂದು ದೃಷ್ಟಾಂತವಾದದ್ದರಿಂದ ಆ ದೃಷ್ಟಾಂತವನ್ನು ಪೂರ್ಣವಾಗಿ ತಿಳಕೊಳ್ಳುವ ಉದ್ದೇಶದಿಂದ ಸಮರ್ಥರು ಪುನಃ ಸಮಾಧಿಯನ್ನು ಏರಿಸಿ ಕುಳಿತುಕೊಂಡಿದ್ದಾರೆ. ಬೇಗನೆ ಅವರು ತಮ್ಮ ಸಮಾಧಿಯನ್ನು ಇಳಿಸುವ ಹಾಗೆ ತೋರುತ್ತದೆ. ಆದಕಾರಣ ನಾವು ಇಲ್ಲಿಂದ ತೆರಳಬಾರದು. ಸ್ವಾಮಿಗಳು ಇನ್ನೇನು ಬಹಳ ಹೊತ್ತು ಕೂಡ್ರಲಿಕ್ಕಿಲ್ಲ. ಸ್ವಲ್ಪ ಹೊತ್ತಿನಲ್ಲಿಯೇ ಅವರು ಸಮಾಧಿಯನ್ನು ಇಳಿಸಿ ನಿತ್ಯದಂತೆ ಹೊರಬಿದ್ದು ಬರುವರು.

ಈ ಪ್ರಕಾರ ಮಾತುಗಳು ನಡೆದಿರಲು ವೇಣೂಬಾಯಿಯ ಮಾತಿನಂತೆ ಸಮರ್ಥರು ದೀರ್ಘ ಉಚ್ಛ್ವಾಸವನ್ನು ಬಿಟ್ಟು, ಒಂದು ದೊಡ್ಡ ಓಂಭೂಃಕಾರವನ್ನು ಮಾಡಿ ಕಣ್ಣು ತೆರೆದು ಸುತ್ತುಮುತ್ತು ನೋಡಹತ್ತಿದ್ದರು; ಮತ್ತು ಆ ಕೂಡಲೆ ಚಟ್ಟನೆ ಎದ್ದು ಹೊರಗೆ ಬಂದರು. ಆಗ ಅಲ್ಲಿಯ ಯಾವತ್ತೂ ಜನರು ಅವರ ಪಾದಗಳಿಗೆ ವಂದಿಸಿದರು. ಆ ಕಾಲಕ್ಕೆ ಸಮರ್ಥರು ಆ ಗಿಡ್ಡ ಮನುಷ್ಯನ ತಲೆಯ ಮೇಲೆ ಕಯ್ಯಿಟ್ಟು ಆಶೀರ್ವಾದ ಮಾಡುವಂತೆ ಎರಡೂ ಕೈ-ಗಳನ್ನು ಮುಂದೆ ಚಾಚಿದರು. ಆ ಬಳಿಕ ಅವರು ನೆಟ್ಟಗೆ ಅಲ್ಲಿಯೇ ಸಮೀಪದಲ್ಲಿದ್ದ ಝರಿಗೆ ಹೋಗಿ, ಆಚಮನವಿಧಿಯನ್ನು ತೀರಿಸಿಕೊಂಡು, ಆ ಎಲ್ಲ ಜನರನ್ನು ತಮ್ಮ ಬಳಿಗೆ ಕರೆದರು. ಅವರೆಲ್ಲರೂ ಬಂದು ವಿನಯದಿಂದ ಕೈಕಟ್ಟಿಕೊಂಡು ನಿಂತುಕೊಳ್ಳಲು ಸಮರ್ಥರು ತಮ್ಮ ಧೀರ ಗಂಭೀರವಾಣಿಯಿಂದ—

„ಚಿಂತೆಮಾಡುವ ಕಾರಣವಿಲ್ಲ; ಈಗ ನಾನು ಹೇಳಿದ ಮಾತಿನಲ್ಲಿ ಅರ್ಥವಿಲ್ಲ. ಕಠಿಣ ಕಾಲವಂತೂ ಒದಗಿರುವದು; ಆದರೆ ಅದು ಕಡೆತನಕ ಉಳಿಯುವದಿಲ್ಲ; ಶ್ರೀರಾಮನು ಈ ಪ್ರಸಂಗವನ್ನು ದೂರಮಾಡುವನೆಂಬ ಶ್ರದ್ಧೆಯನ್ನು ವಹಿಸಿರಿ. ನಿತ್ಯದ ಪುರಶ್ಚರಣಗಳು ಎಷ್ಟು ನಿರ್ವಿಘ್ನತೆಯಿಂದ ಸಾಗುತ್ತಿದ್ದವೋ ಅಷ್ಟು

ನಿರ್ವಿಘ್ನತೆಯಿಂದ ಈ ಪುರಶ್ಚರಣವು ಸಾಗಲಿಲ್ಲ." ಈ ಪುರಶ್ಚರಣದಲ್ಲಿ ಸೂರ್ಯಗ್ರಹಣದ ಯೋಗವಿರುತ್ತದೆಂದು ಗೊತ್ತಾಯಿತು; ಮತ್ತು ರಾಹುವು ಸೂರ್ಯನ ತೇಜಸ್ಸನ್ನು ಪೂರ್ಣವಾಗಿ ನುಂಗಲಿಕ್ಕೆ ಮಾಡಿದ ಸಿದ್ಧತೆಯು ದೃಷ್ಟಿಗೆ ಬಿತ್ತು; ಮತ್ತು ಆ ರಾಹುವು ಸೂರ್ಯನನ್ನು ಪೂರ್ಣವಾಗಿ ನುಂಗಿ ತನ್ನ ಹೊಟ್ಟೆಯಲ್ಲಿಯೇ ಹಿಡಿದಿಡಬೇಕೆಂಬ ವಿಚಾರದಲ್ಲಿದ್ದಂತೆ ಕಾಣಿಸಿತು. ತರುವಾಯ, ಸೂರ್ಯನಿಗೆ ಖಗ್ರಾಸಗ್ರಹಣ ಹಿಡಿದು, ಅವನು ತೀರ ತೇಜೋಹೀನನಾದ ಅನಿಷ್ಟಪ್ರಕಾರವು ಕಣ್ಣಿಗೆ ಬಿತ್ತು; ಆದರೆ ಆ ಸ್ಥಿತಿಯು ಬಹಳ ಹೊತ್ತು ನಿಲ್ಲಲಿಲ್ಲ. ತುಸು ಹೊತ್ತಿನಲ್ಲಿ ಸೂರ್ಯನು ರಾಹುವಿನ ಮುಖದಿಂದ ಹೊರಬಿದ್ದು, ಒಳ್ಳೇ ತೇಜಸ್ವಿಯಾಗಿ ಜನಪಥಕ್ಕೆ ತನ್ನ ಪ್ರತಾಪವನ್ನು ತೋರಿಸಹತ್ತಿದನು. ಇತ್ಯಾದಿ ಪ್ರಕಾರಗಳು ನನ್ನ ದೃಷ್ಟಿಗೆ ಬಿದ್ದವು. ಈ ಚಮತ್ಕಾರದ ಪ್ರಕಾರಗಳು ಒಮ್ಮೆಯಲ್ಲ, ಎರಡುಸಾರೆಯಲ್ಲ, ಇಡೀ ಇಪ್ಪತ್ತೊಂದು ದಿವಸಗಳ ಪುರಶ್ಚರಣದಲ್ಲಿ ಮೂರು ಬಾರೆ ನನ್ನ ದೃಷ್ಟಿಗೆ ಬಿದ್ದವು; ಆಗ ನಾನು ಪುನಃ ಸಮಾಧಿಯನ್ನು ಏರಿಸಿ ನೀನು ಸದ್ಯಕ್ಕೆ ಎಲ್ಲಿರುವೆ? ಏನು ಮಾಡುತ್ತಿರುವೆ? ಎಂಬದನ್ನು ಶೋಧಮಾಡುತ್ತಿರಲು ನೀನು ಮಾರ್ಗಕ್ರಮಣ ಮಾಡುತ್ತ ಇತ್ತಕಡೆಗೆಯೇ ಬರುವದನ್ನು ಕಂಡೆನು. ನೀನು ದಾರೀಹಿಡಿದು ಬರುವಾಗ ದುಃಖಿತರನ್ನು ಬಿಡಿಸುವದಕ್ಕಾಗಿ ಅಡ್ಡ ದಾರೀ ಹಿಡಿದು ಹೋದ ಸ್ಥಳದಲ್ಲಿಯೇ ನಾನು ನಿನ್ನನ್ನು ಕಂಡೆನು. ಆ ಕೆಲಸವನ್ನು ನೆಟ್ಟಗೆ ಮಾಡಿದೆ—ಬಹಳ ನೆಟ್ಟಗೆ ಮಾಡಿದೆ—ಅದರಿಂದ ನನಗೆ ಬಹಳ ಸಂತೋಷವಾಯಿತು." ಎಂದು ನುಡಿದರು.

ಈ ಮೇರೆಗೆ ಸಮರ್ಥರ ಭಾಷಣವು ನಡೆದಿರಲು, ಶ್ರೀಧರಸ್ವಾಮಿಗಳೂ ಕಲ್ಯಾಣಸ್ವಾಮಿಗಳೂ ವೇಣೂಬಾಯಿಯೂ ಆಶ್ಚರ್ಯಚಕಿತರಾಗಿ ಅವರ ಮುಖವನ್ನು ನೋಡುತ್ತ ಅವರಾಡುವ ಮಾತುಗಳನ್ನು ಕೇಳುತ್ತಿದ್ದರು. ಅವರಿಗೆ ಆ ಮಾತುಗಳು ಪೂರ್ಣವಾಗಿ ತಿಳಿಯುತ್ತಿದ್ದಿಲ್ಲೆಂಬದು ಮೇಲೆಯೇ ಕಾಣುತ್ತಿತ್ತು; ಆದರೆ ಆ ಮಾತುಗಳು ಯಾರಿಗೆ ಸಂಬಂಧಿಸಿದ್ದವೋ ಅವರಿಗೆ—ವಿಶೇಷವಾಗಿ ಹೊರಗಿಂದ ಬಂದ ಆ ಇಬ್ಬರು ಪ್ರವಾಸಿಗಳಿಗೆ—ಸ್ಪಷ್ಟವಾಗಿ ತಿಳಿದಿದ್ದವು. ಅವರಿಬ್ಬರು ಪರಸ್ಪರವಾಗಿ ಸಾರ್ಥದೃಷ್ಟಿಯಿಂದಲೂ, ಚಕಿತ ಮುದ್ರೆಯಿಂದಲೂ ನೋಡುತ್ತಿದ್ದರು. ಅವರ ಬಾಯಿಂದ ಒಂದು ಚಕಾರ ಶಬ್ದವು ಕೂಡ ಹೊರಡುತ್ತಿದ್ದಿಲ್ಲ. ಕೆಲಹೊತ್ತಿನ ಮೇಲೆ ಸಮರ್ಥರು—"ಇನ್ನು ಬಹಳ ಹೊತ್ತು ಇಲ್ಲಿಯೇ ಕೂತು ಮಾತಾಡುವದಕ್ಕಿಂತ ಅತ್ತಕಡೆಗೇ ಹೋಗೋಣ; ನಾನು

ಈಗಂತೂ ಆಹಾರವನ್ನು ತಕ್ಕೊಳ್ಳುವದಿಲ್ಲ. ಅವಶ್ಯ ಕಂಡರೆ ಎಲ್ಲರ ಕೂಡ ಸ್ವಲ್ಪ ಏನಾದರೂ ತಕ್ಕೊಳ್ಳುವೆನು. ನಿಮ್ಮ ಸಂಗಡ ಬಂದಜನರಿಂದ ನಿಮಗೆ ಮೋಕ್ಷಕಾರ್ಯದಲ್ಲಿ ಬಹಳ ಉಪಯೋಗವಾಗುವದು; ಮತ್ತು ಅದಕ್ಕಾಗಿಯೇ ಈ ಯೋಗಾಯೋಗವು ಒದಗಿರುವದು. ಇನ್ನು ನಡೆಯಿರಿ ಹೋಗೋಣ'' ಎಂದು ನುಡಿದರು.

ಆ ಬಳಿಕ ಸಮರ್ಥರು ಕಂದಕವನ್ನು ಇಳಿದು ಮಠದ ಹಾದೀ ಹಿಡಿದರು. ಸಂಗಡ ಇದ್ದ ಎಲ್ಲ ಜನರು ಸ್ವಲ್ಪ ಮುಂದಾದರು. ಸಮರ್ಥರೂ ಆ ಗಿಡ್ಡಮನುಷ್ಯನೂ ಮಾತ್ರ ಹಿಂದಿನಿಂದ ಬರುತ್ತಿದ್ದರು ಅಷ್ಟುಹೊತ್ತಿಗೆ ಅಸ್ತಮಯವಾಗಿ ಸಂಧಿಪ್ರಕಾಶವು ಸಹ ನಷ್ಟವಾಗಿ ಕಗ್ಗತ್ತಲೆಯಾಗಹತ್ತಿತ್ತು. ಒಬ್ಬರ ಮೋರೆ ಮತ್ತೊಬ್ಬರಿಗೆ ಕಾಣದಂತಾಯಿತು. ಆ ಕಾಲಕ್ಕೆ ಆ ನಿರ್ಜನ ಪ್ರದೇಶದಲ್ಲಿ ಮಾರ್ಗಕ್ರಮಣ ಮಾಡಲಿಕ್ಕೆ ಅವರಲ್ಲಿ ಯಾರಾದರೂ ಬೆಚ್ಚಿದರೇನು? ಬೆಚ್ಚಿಗೆಯ ವಿಚಾರವು ಸಹ ಅವರ ಮನಸಿನಲ್ಲಿ ಬಂದಂತೆ ಕಾಣಲಿಲ್ಲ. ಅಷ್ಟರಲ್ಲಿ ಏಳೆಂಟು ಜನರು ದೀವಟಿಗೆಗಳನ್ನು ಹಿಡಕೊಂಡು ತಮ್ಮ ಎದುರಿಗೆ ಬರುವದನ್ನು ಅವರು ಕಂಡರು. ಅವರು ಮಠದೊಳಗಿನ ಜನರು; ಸೂರ್ಯಾಸ್ತವಾಗಿ ಕಗ್ಗತ್ತಲೆ ಯಾದರೂ ಸ್ವಾಮಿಗಳೂ ಬರಲಿಲ್ಲ, ಅವರ ಶಿಷ್ಯಮಂಡಳಿಯಲ್ಲಿ ಯಾರೂ ಬಡ ಹಾಯಲಿಲ್ಲ, ಎಂದು ಮಠದೊಳಗಿನ ಜನರು ಆಲೋಚನೆಮಾಡಿ ಪುರಶ್ಚರಣ ಪ್ರದೇಶಕ್ಕೆ ಹೋಗಿ ನೋಡಿಯಾದರೂ ಬರಬೇಕೆಂದು ಅವರು ದೀವಟಿಗೆಗಳನ್ನು ತಕ್ಕೊಂಡು ಹೊರಟಿದ್ದರು. ಇತ್ತ ಸಮರ್ಥರೂ, ಅವರ ಹತ್ತಿರ ಉಳಿದ ಒಬ್ಬ ಪ್ರವಾಸಿಯೂ ಮಾತಾಡುತ್ತ ನಡೆದಿದ್ದರು. ಅವರ ಸಂಭಾಷಣವು ಕೆಳಗೆ ಬರದಂತೆ ನಡೆಯಿತು:—

ಪ್ರವಾಸಿ:—ಇಂದು ರಾಮಸಿಂಗನಿಂದ ಒಂದು ಗುಪ್ತ ಪತ್ರವು ಬಂದಿರುವದು. ಆ ಪತ್ರದಲ್ಲಿ ಅವನು ''ಆಲಮಗೀರನು ನಿಮ್ಮನ್ನು ಪೂರ್ಣವಾಗಿ ನಾಶಪಡಿಸಬೇಕೆಂದು ನಿಮ್ಮ ಮೇಲೆ ಒಂದು ಬಲವಾದ ದೊಡ್ಡ ದಂಡನ್ನು ಕಳಿಸುವದನ್ನು ನಿಶ್ಚಯ ಮಾಡಿದ್ದಾನೆ. ಆ ಪ್ರಕಾರ ಹುಕುಮುಗಳಾದರೂ ಹೊರಟಿರುವವು'' ಎಂದು ಬರೆದಿರುತ್ತಾನೆ. ಈ ಸಂಗತಿಯನ್ನು ಸನ್ನಿಧಿಗೆ ಅರಿಕೆ ಮಾಡಿಕೊಳ್ಳುದವಕ್ಕಾಗಿಯೇ ನಾನು ಇಂದು ಬಂದದ್ದು.

ಸ್ವಾಮಿ:—ಬಲವಾದ ದೊಡ್ಡ ದಂಡನ್ನು ಯಾರ ಕೂಡ ಕಳಿಸುವನಂತೆ? ಸ್ವತಃ ತಾನಾದರೂ ಬರಬೇಕು; ಇಲ್ಲದಿದ್ದರೆ ರಾಮಸಿಂಗನ ತಂದೆಯನ್ನಾದರೂ

ಕಳಿಸಬೇಕು. ಅವನ ಹೊರತು ಆ ದರಬಾರದಲ್ಲಿ ಅಂಥ ಪರಾಕ್ರಮಿಗಳು ಮತ್ತೆ ಯಾರು ಇರುವರು?

ಪ್ರವಾಸಿ:—ಹೌದು, ಅಲವರ್ಗೀರನು ತನ್ನ ಹುಟ್ಟಿದ ದಿವಸದ ಸಮಾರಂಭದಲ್ಲಿ ರಾಮಸಿಂಗನ ತಂದೆಯಾದ ಮಿರ್ಝಾರಾಜನನ್ನು ದೊಡ್ಡ ದಂಡಿನೊಡನೆ ಇತ್ತಕಡೆಗೆ ಕಳಿಸುವ ನಿಶ್ಚಯವನ್ನು ಮಾಡಿದ್ದಾನೆ. ಅವನ ಕೈಕೆಳಗೆ ದಿಲೇರಖಾನ, ದಾವೂದಖಾನ, ರಾಜಾರಾಯಸಿಂಗ ಶಿಸ್ಸೋದಿಯಾ, ಇಹಲೇಶಮಖಾನ, ಶೇಕಜಾದಾ, ಕುಬಾರಖಾನ, ರಾಜಾಸುಜನಸಿಂಗ ಬುಂದೇಲಾ, ಕಿರಾತಸಿಂಗ (ಈತನು ರಾಮಸಿಂಗನ ಒಬ್ಬ ತಮ್ಮನು; ಮಿರ್ಝಾರಾಜನ ಮಗನು.) ಮುಲ್ಲಾಯಹೀಆ, ರಾಜಾನರಸಿಂಗ ಗೌರ, ಪೂರಣಮಲ್ಲ ಬುಂದೇಲಾ, ಜಬರ್ದಸ್ತಖಾನ, ಬಾದಲಬಖತ್ಯಾರ, ಬರ್ಕಂದಾಜಖಾನ ಈ ಜನರನ್ನು ಸಂಗಡಕೊಟ್ಟು ಇತ್ತಕಡೆಗೆ ಕಳಿಸಿರುವನು. ಇತ್ತ ನಾವು ಜಸವಂತಸಿಂಗನಿಗೆ ಹಾಗೂ ಹೀಗೂ ಏನಾದರೂ ಹೇಳಿ, ಶಹಾಜಾದನನ್ನು ಸಮಾಧಾನಪಡಿಸಿ ವ್ಯವಸ್ಥೆ ಮಾಡುವಷ್ಟರೊಳಗೆ, ಹೊಸದೊಂದು ಪ್ರಸಂಗವು ನಮ್ಮ ಮುಂದೆ ನಿಂತೇ ಇರುವದು. ಏನು ಮಾಡುವದು? ಈ ಅಲವರ್ಗೀರನ ಜುಲುಮೆಯ ರಾಜ್ಯಕಾರಭಾರಕ್ಕೆ ಉತ್ತರ ಕಡೆಯ ಜನರು ಬೇಸತ್ತು ಒಬ್ಬರೂ ತಲೆ ಎತ್ತದಹಾಗೆ ಆಗಿರುವರು. ಅದರಿಂದಲೇ ಮೇಲಿಂದಮೇಲೆ ಅವನ ದಂಡು ದಕ್ಷಿಣಕ್ಕೆ ಬಂದು ತೊಂದರೆ ಕೊಡುವದು; ಆದರೆ ಉತ್ತರದಲ್ಲಿ ಯಾವನಾದರೂ ನಮ್ಮಂಥವನೊಬ್ಬನು ಸ್ವಲ್ಪ ಗದ್ದಲವನ್ನು ಮಾಡಹತ್ತಿದರೆ ಸಾಕು. ಔರಂಗಜೇಬನಿಗೆ ಇತ್ತ ಲಕ್ಷಕೊಡಲಿಕ್ಕೇ ಆಗಲಿಕ್ಕಿಲ್ಲ; ಆದರೆ ಅಂಥ ಸಾಹಸವನ್ನು ಮಾಡುವದು ಯಾರಿಗೆ ಬೇಕಾಗಿರುವದು? ಪ್ರತಿಯೊಬ್ಬ ಮನುಷ್ಯನು ವಿಷಯ ಸುಖದಲ್ಲಿ ಮಗ್ನನಾಗಿರುವನು. ಅಂಥವರಿಗೆ ಸ್ವದೇಶ, ಸ್ವಧರ್ಮ, ಸ್ವಜನ ಇವುಗಳ ಕಲ್ಪನೆಯು ಎಲ್ಲಿಯದು!! ನಿಷ್ಕಾರಣವಾಗಿ ಕಾಲಮೇಲೆ ಕಲ್ಲು ಯಾರು ಚಲ್ಲಿಕೊಳ್ಳುವರು? ಇದಲ್ಲದೆ ನಮ್ಮಂಥವರ ಮೇಲೆ ಸ್ವಾರಿಮಾಡಿ, ನಮ್ಮನ್ನು ದಂಡಿಸಿದರೆ ಬಾದಶಹನಿಂದ ಮತ್ತೆ ಜಹಗೀರುಗಳು ದೊರೆಯುವವು. ಅವನ್ನಾದರೂ ಯಾಕೆ ಕಳಕೊಂಡಾರು?

ಸಮರ್ಥ:—ಸತ್ಯ, ಸತ್ಯ, ನೀನಾಡುವ ಮಾತು ತೀರ ಸತ್ಯವಾದದ್ದು. ಆ ಜನರಿಗೆ ಅದು ರಕ್ತದಲ್ಲಿ ಭೇದಿಸಿರುವದು. ಬಾದಶಹನ ಸೇವೆಯನ್ನು ಮಾಡುವದು, ನಿಮ್ಮಂಥವನನ್ನು ಮುಂದು ಮಾಡಿಲಿಗೆ ಒತ್ತುವದು ಇವೇ ಕೆಲಸಗಳಲ್ಲಿ ಅವರು ನಿಜವಾದ ಶೌರ್ಯವೂ ಪೌರುಷವೂ ಉಂಟೆಂದು ತಿಳಿಯುತ್ತಾರೆ;

ಮತ್ತು ಇವೇ ಕೆಲಸಗಳು ತಮ್ಮ ನಿಜವಾದ ಕರ್ತವ್ಯಗಳೆಂದು ಅವರು ತಿಳಿದಿರುವರು. ಅವರಿಗೆ ಬಾಲಾಭ್ಯಾಸವೇ ಹಾಗೆ ಬಿದ್ದಬಳಿಕ ಮಾಡತಕ್ಕದೇನು? ಉಪಾಯವಿಲ್ಲ; ಆದರೆ ನಾವು ನಮ್ಮ ಉಪಾಯಗಳನ್ನು ಬಿಡಕೂಡದು. ಮಿರ್ಝಾರಾಜನಾದರೂ ಹಿಂದುವಲ್ಲವೆ? ಅವನಿಗೆ ವೈದಿಕಧರ್ಮದ ಅಭಿಮಾನವು ಸ್ವಲ್ಪಾದರೂ ಇದ್ದೀತೋ ಇರಲಿಕ್ಕಿಲ್ಲವೋ? ನಾವು ಅವನ ಬಳಿಗೆ ಸಂಧಾನವನ್ನು ಹಚ್ಚಿ ನೋಡತಕ್ಕದ್ದು. ರಾಮಸಿಂಗನಿಗೂ ನಿನಗೂ ಪರಿಚಯವಿದ್ದದ್ದೂ ಪತ್ರವ್ಯವಹಾರವಿರುವದೂ ಮಿರ್ಝಾರಾಜನಿಗೆ ಗೊತ್ತಿಲ್ಲ. ಒಂದುವೇಳೆ ಗೊತ್ತಾದರೆ, ಅವನಿಗೆ ಬಹಳ ಸಿಟ್ಟು ಬರಬಹುದೆಂದು ನನಗೆ ತೋರುತ್ತದೆ.

ಪ್ರವಾಸಿ:—ಓಹೋ ಒಂದುವೇಳೆ ಸಿಟ್ಟು ಬಂದೀತು, ಅದಕ್ಕೇನು ಮಾಡುವದು? ಆದರೆ ರಾಮಸಿಂಗನ ಮೇಲೆ ಅವನ ಪ್ರೇಮವು ಬಹಳ; ಅವನ ಎಲ್ಲ ಕೆಲಸಗಳು ರಾಮಸಿಂಗನನ್ನೇ ಅವಲಂಬಿಸಿರುವವು. ಮಿರ್ಝಾರಾಜನಿಗೆ ಅನೇಕ ಮಂದಿ ಮಕ್ಕಳು ಇರುವರು; ಅವರೊಳಗೆ ಈ ರಾಮಸಿಂಗನಲ್ಲಿ ಅವನ ನಿಜವಾದ ಪ್ರೇಮವಿರುವದೆಂದು ನಮಗೆ ಇಂದಿನ ವರೆಗೆ ತಿಳಿದ ಎಲ್ಲ ಸಂಗತಿಗಳಿಂದ ಗೊತ್ತಾಗುತ್ತದೆ; ಮತ್ತು ರಾಮಸಿಂಗನ ಬರಹದಿಂದಲೂ ಹಾಗೆ ಇದ್ದಂತೆ ತೋರುತ್ತದೆ; ಆದರೆ ರಾಮಸಿಂಗನ ಅಂತಃಕರಣಕ್ಕೂ ಅವನ ತಂದೆಯ ಅಂತಃಕರಣಕ್ಕೂ ಇಷ್ಟು ಹೆಚ್ಚುಕಡಿಮೆ ಉಂಟೆಂಬದು ಅವನ ತಂದೆಯ ಕನಸುಮನಸಿನಲ್ಲಿ ಸಹ ಇರಲಿಕ್ಕಿಲ್ಲ. ರಾಮಸಿಂಗನ ಮನಸ್ಸಿನಲ್ಲಿ—ತನ್ನ ತಂದೆಯು ಔರಂಗಜೇಬನ ವಿರುದ್ಧವಾಗಿ ಬಂಡಾಯವನ್ನು ಹೂಡಬೇಕೆಂತಲೂ, ದಕ್ಷಿಣದಲ್ಲಿ ನಾವು ಮಾಡುವಂತೆ ತಾನೂ ಮಾಡಬೇಕೆಂತಲೂ ಇರುತ್ತದೆ. ರಾಮಸಿಂಗನು ನನಗೆ ಬರೆದ ಎಷ್ಟೋಪತ್ರಗಳಲ್ಲಿ—"ನಮ್ಮ ಹಿರಿಯರು ಈ ಉದ್ಯೋಗವನ್ನು ಕೈಕೊಂಡರೆ ಸಹಜವಾಗಿ ಕಾರ್ಯಸಿದ್ಧಿಯಾಗುವದು ಯಾಕಂದರೆ ಬಹುಶಃ ಎಲ್ಲ ರಜಪೂತ ಅರಸರು ಅವರಿಗೆ ಅನುಕೂಲವಾಗಿರುವರು." ಎಂದು ಬರೆದಿದ್ದಾನೆ. ನನ್ನ ಮನಸ್ಸಿನಲ್ಲಿ ಒಮ್ಮೊಮ್ಮೆ ಅತ್ತ ಕಡೆಯ ವರ್ತಮಾನವನ್ನು ತಿಳಕೊಳ್ಳಲಿಕ್ಕೆ ಯಾರನ್ನಾದರೂ ಕಳಿಸಬೇಕೆಂಬ ವಿಚಾರವು ಬರುತ್ತದೆ; ಆದರೆ ಇತ್ತ ನಾಲ್ಕೂ ಕಡೆಗೆ ಸ್ವಲ್ಪ ಶಾಂತತೆಯುಂಟಾದರೆ ಹಾಗೆ ಮಾಡುವದರಿಂದ ಉಪಯೋಗವಾಗಬಹುದು.

ಸ್ವಾಮಿ:—ಅತ್ತ ಕಡೆಯ ವರ್ತಮಾನವೇನು? ವಿಜಾಪುರದಲ್ಲಿ ಯಾವಸ್ಥಿತಿಯು ಇರುವದೋ ಅದೇ ಸ್ಥಿತಿಯು ದಿಲ್ಲಿಯಲ್ಲಿರುವದು. ಸೆಗಣಿಯಲ್ಲಿ ವಾಸಿ

ಸುವ ಹುಳಗಳು, ಅದೇ ತಮ್ಮ ಸೌಖ್ಯದ ವಾಸಸ್ಥಳವೆಂದು ತಿಳಕೊಳ್ಳುತ್ತವೆ. ಹೀಗಿರುವವರೇ ಬಹು ಜನರು. ಅವರ ಸುಖವೂ ಅದರಲ್ಲಿಯೇ, ದುಃಖವೂ ಅದರಲ್ಲಿಯೇ; ಮತ್ತು ಅವರ ನರಕವೂ ಅದರಲ್ಲಿಯೇ, ಸ್ವರ್ಗವಾದರೂ ಅದರಲ್ಲಿಯೇ ಇರುವದು. ನಿಜವಾದ ಸ್ವರ್ಗಸುಖದ ಕಲ್ಪನೆಯು ಅವರ ಮನಸ್ಸಿನಲ್ಲಿ ಹುಟ್ಟಿದಾಗ ಅವರು ಮೇಲಕ್ಕೆ ತಲೆ ಎತ್ತುವರು.

ಪ್ರವಾಸಿ:—ಒಂದುವೇಳೆ ಅವರು ಮೇಲಕ್ಕೆ ತಲೆ ಎತ್ತಿ ನೋಡಹತ್ತಿದರೆ, ಸ್ವರ್ಗವು ಎರಡನೇ ಕಡೆಗಾದರೂ ಉಂಟೆಂಬ ಸಂಗತಿಯು ಅವರಿಗೆ ಗೊತ್ತಾಗುವದು.

ಸ್ವಾಮಿ:—ನಿನ್ನ ಹೇಳಿಕೆಯ ಮೇಲಿಂದ ರಾಮಸಿಂಗನು ಈ ಸ್ವಾರಿಯ ಸಂಗಡ ಬರುವದಿಲ್ಲೆಂಬಂತಾಯಿತು, ಅಲ್ಲವೆ?

ಪ್ರವಾಸಿ:—ಇಲ್ಲ; ಆ ವಿಷಯವಾಗಿ ಅವನು ತನ್ನ ಪತ್ರದಲ್ಲಿ ಏನೂ ಬರೆದಿಲ್ಲ; ಮತ್ತು ಇಂಥ ಸ್ವಾರಿಯ ಸಂಗಡ ಅವನು ಎಂದಿಗೂ ಬರಲಿಕ್ಕಿಲ್ಲೆಂದು ನನಗೆ ತೋರುತ್ತದೆ. ಯಾಕಂದರೆ ಅವನ ವಿಚಾರಗಳೇ ಬೇರೆ ಇರುತ್ತವೆ. ಅವನಿಗೆ ತನ್ನ ತಂದೆಯ ಸ್ವಭಾವವು ಎಷ್ಟು ಮಾತ್ರವೂ ಸೇರುವದಿಲ್ಲೆಂಬ ಸಂಗತಿಯು ತಮಗೆ ತೋರಿಸಿದ ಅವನ ಹಲವು ಪತ್ರಗಳಿಂದ ಸ್ಪಷ್ಟವೇ ಇರುತ್ತದೆ. ಅಂದಮೇಲೆ ಮೊಗಲರ ಜುಲುಮೆಯಿಂದ ಸ್ವತಃ ಮುಕ್ತರಾಗಿ ಪರರನ್ನು ಮುಕ್ತರನ್ನಾಗಿ ಮಾಡುವ ಪ್ರಯತ್ನ ಮಾಡುವವರ ಮೇಲೆ ಅವನು ಸಹಸಾ ದಂಡೆತ್ತಿ ಬಂದು ಯುದ್ಧಮಾಡಲಿಕ್ಕಿಲ್ಲ.

ಸಮರ್ಥ:—ಅವನು ಇಲ್ಲಿಗೆ ಬಂದರೆ ಒಳ್ಳೇದು; ಯಾಕಂದರೆ ಎಷ್ಟೋ ಸಂಗತಿಗಳು-ವಿಶೇಷವಾಗಿ ಯುದ್ಧದ ಸಂಗತಿಗಳು-ಸ್ವಲ್ಪ ಮುಂಚಿತವಾಗಿಯೇ ಗೊತ್ತಾದರೆ ಯುದ್ಧಪ್ರಸಂಗವನ್ನು ಇಲ್ಲದಂತೆ ಮಾಡಲಿಕ್ಕೆ ಬರುವಂತೆ ಇರುತ್ತದೆ. ಆ ಸಂಗತಿಗಳಿಂದ ಲಾಭಮಾಡಿಕೊಳ್ಳಬಹುದು. ಆದ್ದರಿಂದ....

ಪ್ರವಾಸಿ:—ತಾವು ಹೇಳುವದೇನೋ ನಿಜ; ಆದರೆ ರಾಮಸಿಂಗನು ತಂದೆಯ ಸಂಗಡ ಇಲ್ಲಿಗೆ ಬಂದರೆ ಅವನು ಮಗನಿಗೆ ಒಂದು ಕೆಲಸವನ್ನು ನೇಮಿಸಬಹುದು. ಆ ಬಳಿಕ ಅವನಿಂದ ನಮ್ಮ ಕೆಲಸಗಳು ಹ್ಯಾಗೆ ಆಗುವವು? ಇದಲ್ಲದೆ ಇಲ್ಲಿಗೆ ಬಂದ ಮೇಲೆ ನಮ್ಮ ಕೂಡ ಗುಪ್ತ ಸಂಗತಿಗಳ ವಿಷಯವಾಗಿ ಪತ್ರವ್ಯವಹಾರವನ್ನು ಇಟ್ಟದ್ದು ಬೈಲಿಗೆ ಬರುವ ಸಂಭವವುಂಟು. ಹಾಗೆ ಬಯಲಿಗೆ ಬಂದರೆ ನಮಗೇನು ಲಾಭವಾಗುವದು? ಆದಕಾರಣ ಮಿರ್ಝಾರಾಜನು ಇಲ್ಲಿಗೆ

ಬಂದಮೇಲೆ ಅವನ ಬಳಿಗೆ ಸಂಧಾನವನ್ನು ಹಚ್ಚಿ ನೋಡೋಣ. ರಾಮಸಿಂಗನು ಅಲ್ಲಿದ್ದದ್ದು ನೆಟ್ಟಗೆ ಅದೆ ಮಿರ್ಝಾರಾಜನು ನಮಗೆ ಅನುಕೂಲನಾಗುವ ಲಕ್ಷಣವು ತೋರಿದರೆ ರಾಮಸಿಂಗನನ್ನು ಇಲ್ಲಿಗೆ ಕರೆಸುವ ವ್ಯವಸ್ಥೆಯನ್ನು ಮಾಡುವದು ನಮಗೆ ಶಕ್ಯವದೆ. ರಾಮಸಿಂಗನ ಒಲವು ಪೂರ್ಣವಾಗಿ ನಮ್ಮ ಕಡೆಗೇ ಇರುವದು.

ಸಮರ್ಥ:—ಬರಿಯು ನಿಮ್ಮ ಕಡೆಗೆ ಅವನ ಒಲವು ಇದ್ದು ಪ್ರಯೋಜನ ವೇನು? ಅಲ್ಲಿಯೇನಾದರೂ ಖಟಾಟೋಪವನ್ನು ಅವನು ಮಾಡಬೇಕಾಗಿತ್ತು. ಮಿರ್ಝಾರಾಜನು ಅವನಿಗೆ ಅನುಕೂಲವಾಗದ್ದರಿಂದ ಏನಾಯಿತು? ನಿನಗಾದರೂ ನಿನ್ನ ಹಿರಿಯರು ಎಲ್ಲಿ ಅನಕೂಲರಾಗಿದ್ದರು? ಅದು ಹುಟ್ಟುಗುಣವೇ ಆಗಿರ ಲಿಕ್ಕೆ ಬೇಕು.

ಪ್ರವಾಸಿ:—ಛೇ ಛೇ ಹಾಗಿಲ್ಲ. ಅತ್ತ ಕಡೆಯ ಸ್ಥಿತಿಯು ಬೇರೆ ತರದ್ದಿರು ವದು. ಯಾವ ಕಡೆಯು ಔರಂಗಜೇಬನ ರಾಜ್ಯ, ಯಾವ ಕಡೆಯು ಮೊರಕಳಿಗೆ ಬಂದ ವಿಜಾಪೂರ. ಅತ್ತ ಕಡೆಯು ಖಟಾಟೋಪವನ್ನು ಮಾಡುವ ಮನುಷ್ಯನು ಮಿರ್ಝಾರಾಜನಂಥ ಸಾಹಸಿಯೇ ಇರಲಿಕ್ಕೆಬೇಕು. ಅಂದರೆ ಅದರಿಂದ ಏನಾ ದರೂ ಪರಿಣಾಮವಾಗುವದು. ರಾಮಸಿಂಗನಂಥವರ ಒಣ ಖಟಾಟೋಪದಿಂದ ಏನು ಪ್ರಯೋಜವಾಗುವದು?

ಸಮರ್ಥ:—ಸೈ ಸೈ ನೀನನ್ನುವ ಮಾತಾದರೂ ನಿಜವು; ಆದರೆ ಆ ಗುಣವು ಯಾರಿಗಾದರೂ ಹುಟ್ಟಾ ಇರಲಿಕ್ಕೆಬೇಕು. ಬಹಳ ವಿಚಾರ ಮಾಡುವವ ರಿಂದ ಇಂಥ ಸಂಗತಿಗಳು ಆಗುತ್ತಿರುವದಿಲ್ಲ.

ಈ ಮೇರೆಗೆ ಮಾತಾಡುತ್ತ ಮಾತಾಡುತ್ತ ಅವರು ಮಠದ ಸಮೀಪಕ್ಕೆ ಬಂದರು. ವಿಜಾಪುರದಿಂದ ಬಂದ ಆ ತರುಣ ಗೃಹಸ್ಥರು ಸಮರ್ಥರ ಮಾರ್ಗ ಪ್ರತೀಕ್ಷಿಸುತ್ತ ಕುಳಿತಿದ್ದರು. ಅವರ ದರ್ಶನಲಾಭವನ್ನು ಪಡೆಯದೆ, ಭೋಜನ ಮಾಡಲಿಕ್ಕಿಲ್ಲ, ಇಷ್ಟೇ ಅಲ್ಲ; ಬಾಯಲ್ಲಿ ನೀರು ಸಹ ಹಾಕಿಕೊಳ್ಳಲಿಕ್ಕಿಲ್ಲ, ಎಂದು ಅವರು ನಿಶ್ಚಯಿಸಿ ಕುಳಿತುಕೊಂಡಿದ್ದರು. ಸಮರ್ಥರು ಅಲ್ಲಿಗೆ ಬಂದ ಕೂಡಲೆ ಅವರು ಸಮರ್ಥರ ಪಾದಗಳ ಮೇಲೆ ದೀರ್ಘದಂಡವತ ನಮಸ್ಕಾರ ವನ್ನು ಹಾಕಿದರು. ಸಮರ್ಥರು ಅವರಿಗೆ ಆಶೀರ್ವದಿಸಿ ಹೇಳಿದ್ದೇನಂದರೆ:— ತಮ್ಮಗಳಿರಾ, ಹೀಗೆ ಹಟಹಿಡಿದು ಕುಳಿತುಕೊಳ್ಳುವದರಿಂದ ಒಮ್ಮೊಮ್ಮೆ ಉಭ ಯತರ ವ್ರತಭಂಗವಾಗುವ ಸಂಭವವುಂಟು. ನಾನು ಇನ್ನು ಒಂದು ಸಪ್ತಕ

ಪುರಶ್ಚರಣಕ್ಕೆ ಕುಳಿತುಕೊಂಡಿದ್ದರೆ ನಿಮ್ಮ ಗತಿಯು ಏನಾಗುತ್ತಿತ್ತು? ಏಳು ದಿವಸ ಅನ್ನ ನೀರುಗಳಿಲ್ಲದೆ ಪ್ರಾಣಬಿಡುತ್ತಿದ್ದಿರೇನು? ಇಲ್ಲಿ ಹೀಗಾದಕಾರಣ ಪುರಶ್ಚರಣವನ್ನು ಅಷ್ಟಕ್ಕೇ ನಿಲ್ಲಿಸಿ ಇಲ್ಲಿಗೆ ಬರಬೇಕಾಯಿತು. ಇರಲಿ, ಆದದ್ದಾಯಿತು. ಹ್ಯಾಗಾದರೂ ಇಲ್ಲಿಗೆ ನೀನು ಬಂದಿರುವಿ. ಇಲ್ಲಿಯೇ ಇರು. ಇಲ್ಲಿಂದ ಪುನಃ ಹೋಗಬೇಡ. ನಿನ್ನ ಮಾತೃಶ್ರೀಯವರನ್ನು ಇಲ್ಲಿಗೆ ಕರೆಸುವ ವ್ಯವಸ್ಥೆಯನ್ನು ಮಾಡು. ಸುಖರೂಪದಿಂದ ಇಲ್ಲಿಯ ತನಕ ಬರಲಿಕ್ಕೆ ಅವರಿಗೆ ಶಕ್ತಿಯು ಬರುವದು; ಚಿಂತೆಮಾಡಬೇಡ, ಎಳ್ಳಷ್ಟು ಚಿಂತೆಮಾಡುವ ಕಾರಣವಿಲ್ಲ. ಇನ್ನುಮೇಲೆ ಮಾತ್ರ ಆ ಬಾದಶಹನ ಸೇವೆಗೆ ಹೋಗಲಿಕ್ಕಿಲ್ಲೆಂದು ಮನಸ್ಸಿನಲ್ಲಿ ನಿರ್ಧಾರಮಾಡು. ನಿನ್ನ ದೇಹದ ಸಾರ್ಥಕ್ಯವಾಗಲಿ; ನಿನ್ನಿಂದ ಯಾವದೊಂದು ಸತ್ಕಾರ್ಯವು ಘಟಿಸಲಿ. ನಿನ್ನ ಜಹಗೀರು ಹೋದರೆ ಹೋಗಲೊಲ್ಲದೇಕೆ? ಬಾದಶಹನ ಸೇವೆಯನ್ನು ಮಾಡಿ ಹಿರಿಯರು ಗಳಿಸಿದ ಜಹಗೀರಿಗಿಂತ, ಸ್ವತಃ ಕಷ್ಟಬಟ್ಟು ಜನರಿಗೆ ಮೊಗಲರಿಂದ ಆಗುವ ತೊಂದರೆಯನ್ನು ತಪ್ಪಿಸಿ ಗಳಿಸಿದ ಜಹಗೀರು ಬೆಲೆಯುಳ್ಳದ್ದೆಂದು ತಿಳಿ. ಈ ವಿಚಾರಗಳು ನಿನ್ನ ಮನಸ್ಸಿನಲ್ಲಿ ಇನ್ನೂ ವರೆಗೆ ಬಂದಿಲ್ಲೆಂಬಂತಿಲ್ಲ; ಆದರೆ ಅವು ನಿನ್ನ ಅಂತಃಕರಣದಲ್ಲಿ ಸ್ಪಷ್ಟವಾಗಿ ಬಿಂಬಿಸಿಲ್ಲ. ಹ್ಯಾಗಾದರೂ ಈಗ ನೀನು ಹೊರಬಿದ್ದು ಬಂದಿರುವಿ; ಇನ್ನು ಅದರಲ್ಲಿ ತೊಡಗಿ ಕೆಡಬೇಡ.

ತೃಷಾಕ್ರಾಂತನಾದ ಮನುಷ್ಯನು ನೀರು ಕಂಡ ಕೂಡಲೆ ಹ್ಯಾಗೆ ಬಂದೇಸವನೆ ಗಟಗಟ ನೀರು ಕುಡಿಯುವನೋ; ಅದೇ ಪ್ರಕಾರ ಆ ತರುಣ ಗೃಹಸ್ಥನು ಕ್ರಮವನ್ನು ನಡಿಸಿದ್ದನು. ಸಮರ್ಥರು ಮಾತಾಡಹತ್ತಿದ ಬಳಿಕ ಅವನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಆ ಸಮಯದಲ್ಲಿ ಅಮೃತ ವೃಷ್ಟಿಯು ಆಗಹತ್ತಿರುವದು; ಸಿಕ್ಕಷ್ಟು ಇದೇಕಾಲಕ್ಕೆ ಕುಡಿದುಬಿಡಬೇಕು; ಎಂಬ ಭಾವವು ಅವನ ಮುಖಮುದ್ರೆಯಿಂದ ಒಡೆದು ಕಾಣುತ್ತಿತ್ತು; ಸಮರ್ಥರ ಭಾಷಣವು ಮುಗಿದಬಳಿಕ ಆ ಗೃಹಸ್ಥನು ಮತ್ತೊಮ್ಮೆ ಸಮರ್ಥರ ಚರಣಕಮಲಗಳ ಮೇಲೆ ತನ್ನ ದೇಹವನ್ನು ಈಡಾಡಿ, ಅವರಿಗೆ ಅಂದದ್ದೇನಂದರೆ:—ಮಹಾರಾಜರೆ, ನನ್ನನ್ನೂ ನನ್ನ ಕುಟುಂಬದವರನ್ನೂ ಯಾರು ಅತಿ ದೊಡ್ಡ ಸಂಕಟದೊಳಗಿಂದ ಬಿಡಿಸಿ, ತಮ್ಮಸನ್ನಿಧಿಗೆ ಕರಕೊಂಡು ಬಂದು ದರ್ಶನ ಲಾಭವನ್ನು ಮಾಡಿಕೊಟ್ಟರೋ ಅವರದೇ ಈ ಜೀವವು; ಇದರ ಮೇಲೆ ನನ್ನ ಅಧಿಕಾರವು ಎಳ್ಳಷ್ಟೂ ಇರುವದಿಲ್ಲೆಂದು ಆಗಲೇ ನಾನು ಅವರಿಗೆ ಹೇಳಿಕೊಂಡಿದ್ದೇನೆ, ಆದ್ದರಿಂದ

ಇಲ್ಲಿಂದ ಪುನಃ ನಾನು ವಿಜಾಪುರಕ್ಕೆ ಹೋಗುವ ವಿಚಾರವು ನನ್ನ ಮನಸಿನಲ್ಲಿ ಎಂದೂ ಬರುವಹಾಗಿಲ್ಲ. ಇನ್ನು ಮೇಲೆ ನಾನು ನನ್ನ ಈ ದೇಹವನ್ನು ತಮ್ಮ ಸೇವೆಯಲ್ಲಿಯೇ ಸವಿಸತಕ್ಕವನು; ಇಲ್ಲವೆ, ತಮ್ಮ ಅಜ್ಞಾನುಸಾರವಾಗಿ ನೇಮಿಸಿದ ಕೆಲಸವನ್ನಾದರೂ ಮಾಡತಕ್ಕವನು. ಈ ವಿಷಯವಾಗಿ ತಾವು ಮನಸ್ಸಿನಲ್ಲಿ ಸ್ವಲ್ಪಾದರೂ ಸಂಶಯವನ್ನು ತರಕೂಡದು. ನಾನಂತೂ ಆ ವಿಜಾಪುರ ಬಾದಶಹನ ದರಬಾರಕ್ಕೆ ಬೇಸತ್ತು ಹೋಗಿದ್ದೇನೆ. ಮೇಲಾಗಿ ತಮ್ಮ ಅಪ್ಪಣೆಯೂ ಆಯಿತು. ಇನ್ನು ಏನು ಬೇಕು? ತಮ್ಮ ಅಪ್ಪಣೆಯನ್ನು ಶಿರಸಾವಾನ್ಯ ಮಾಡಿ ಕೆಲಸ ಮಾಡಲಿಕ್ಕೆ ನಾನು ಒಂಟಿಗಾಲಮೇಲೆ ಸಿದ್ಧನಿರುತ್ತೇನೆ. ತಮ್ಮಂಥವರ ದರ್ಶನವಾಯಿತು; ತಮ್ಮ ಸೇವೆಮಾಡಲಿಕ್ಕೆ ಸಂಧಿಯು ದೊರೆಯಿತು. ಇನ್ನು ಹೆಚ್ಚಿಗೆ ಅಪೇಕ್ಷೆ ಮಾಡತಕ್ಕದ್ದೇನು? ನಾನು ತಮ್ಮ ದಾಸಾನುದಾಸನಾಗಿರುವೆನು.'' ಆ ಮಾತಿಗೆ ಸಮರ್ಥರು:—ಒಳ್ಳೇದು, ಯಾಕಾಗಲೊಲ್ಲದು, ಹಾಗೇ ಮಾಡು, ನೋಡೋಣ ಏನೇನು ಆಗುತ್ತದೆಯೋ? ಸದ್ಯಕ್ಕಂತೂ ನೀನು ಇಲ್ಲಿ ಇರು; ಆ ಬಳಿಕ ನಿನ್ನನ್ನು ಮಹಾರಾಜರ ಸಹಾಯಕ್ಕಾಗಿ ನೇಮಿಸುವೆನು; ಅಂದರೆ ಎಲ್ಲವೂ ಗೊತ್ತಾಗುವದು. ಮಹಾರಾಜರಿಗೇನು; ಸಹಾಯಕ್ಕೆ ನಿನ್ನಂಥವರು ಎಷ್ಟು ಮಂದಿ ಸಿಕ್ಕರೂ ಬೇಕೇಬೇಕು. ನಿನ್ನಿಂದ ಅವರಿಗೆ ಬಹಳ ಸಹಾಯವಾಗಬಹುದು. ಅವರು ನಿನ್ನನ್ನು ಕಂಡು ಬಹಳ ಕೌತುಕಬಟ್ಟಾರು. ಇನ್ನು ಸ್ನಾನಪಾನಾದಿಗಳನ್ನು ತೀರಿಸಿಕೊಂಹೋಗು. ಆ ಬಳಿಕ ಸಮಾಧಾನದಿಂದ ಮತ್ತೆ ಮಾತಾಡೋಣವಂತೆ ಎಂದು ಹೇಳಿ ಅವನನ್ನು ಸ್ನಾನಕ್ಕಾಗಿ ಕಳಿಸಿಕೊಟ್ಟರು; ಮತ್ತು ತಾವು ಒತ್ತಟ್ಟಿಗೆ ಆಹಾರಕ್ಕಾಗಿ ಕುಳಿತುಕೊಂಡರು. ಸಂಗಡ ಇದ್ದ ಇಬ್ಬರು ಪ್ರವಾಸಿಗಳಿಗೂ ಏನಾದರೂ ಆಹಾರವನ್ನು ತಕ್ಕೊಳ್ಳಿರೆಂದು ಸಮರ್ಥರು ಆಗ್ರಹ ಮಾಡಿದರು. ಸಮರ್ಥರ ಮಠದಲ್ಲಿ ಆಹಾರ ತಕ್ಕೊಳ್ಳೋಣವೆಂದರೆ ಪ್ರಸಾದವನ್ನು ತಕ್ಕೊಳ್ಳೋಣವು; ಅದಕ್ಕೆ ಯಾರು ಒಲ್ಲೆನ್ನುವರು? ಎಲ್ಲರೂ ಉಂಡರು. ಆ ಬಳಿಕ ಸಮರ್ಥರೂ ಆ ಇಬ್ಬರು ಪ್ರವಾಸಿಗಳೂ ಶ್ರೀಧರಸ್ವಾಮಿಗಳೂ ಒತ್ತಟ್ಟಿಗೆ ಕುಳಿತು ಏನೋ ವಿಚಾರಮಾಡ ಹತ್ತಿದರು. ಅವರು ಕುಳಿತ ಸ್ವಲ್ಪ ಹೊತ್ತಿನಮೇಲೆ ಮಠದೊಳಗಿನ ಒಬ್ಬ ಶಿಷ್ಯನು:—"ಪುಣೆಯಿಂದ ಒಬ್ಬ ಸುದ್ದಿಗಾರನಾದ ಕುದುರೆಯ ರಾವುತನು ಬಂದಿದ್ದಾನೆ. ದಿಲ್ಲಿಯಿಂದ ಮಹಾರಾಜರ ಹೆಸರಿನಿಂದ ಮತ್ತೊಂದು ಪತ್ರವು ಬಂದಿರುವದು; ಅದನ್ನು ತಕ್ಕೊಂಡು ಆ ರಾವುತನು ಬಂದಿದ್ದಾನೆ'' ಎಂದು ಹೇಳುತ್ತ ಬಂದನು.

ಆ ಇಬ್ಬರು ಪ್ರವಾಸಿಗಳಲ್ಲಿ ಒಬ್ಬ ಗೃಹಸ್ಥನು ಶಿವಾಜಿ ಮಹಾರಾಜನಿದ್ದನೆಂದು ವಾಚಕರು ಈ ಮೊದಲೇ ಅನುಮಾನಮಾಡಿರಬಹುದು. ಇನ್ನು ಆ ಬಗ್ಗೆ ಹೆಚ್ಚು ಗೂಢವಿಡದೆ ಸ್ಪಷ್ಟವಾಗಿ ಹೇಳಿ ಬಿಡುತ್ತೇವೆ. ದಿಲ್ಲಿಯಿಂದ ಪತ್ರವು ಬಂದಿರುವದೆಂಬ ಸಂಗತಿಯನ್ನು ಕೇಳಿದ ಕೂಡಲೆ ಮಹಾರಾಜರು ಅವನನ್ನು ಸಮಕ್ಷಮ ಕರೆದು, ಅವನಿಂದ ಆ ಥೈಲಿಯನ್ನು ಇಸಕೊಂಡು, ಒಳಗಿನ ಲಖೋಟಿಯನ್ನು ತೆಗೆದು ಸ್ವಾಮಿಯವರ ಮುಂದೆ ಚಲ್ಲಿದರು. ಸ್ವಾಮಿಗಳು ಅದನ್ನು ತಕ್ಕೊಂಡು ನೋಡಿದರು. ಅದು ರಾಮಸಿಂಗನ ಕಡೆಯಿಂದ ಬಂದದ್ದಾಗಿತ್ತು. ಅದರಲ್ಲಿ ಮುಂದಿನ ಪ್ರಕರಣದಲ್ಲಿ ಬರೆದ ಸಂಗತಿಗಳು ವಿವರಿಸಲ್ಪಟ್ಟಿದ್ದವು.

---

## ೪—ಪ್ರಯಾಣ.

ರಾಮಸಿಂಗನು ಆ ಪತ್ರದಲ್ಲಿ ತನ್ನ ತಂದೆಯು ಪ್ರಯಾಣದ ವೃತ್ತಾಂತವನ್ನು ಬರೆದದ್ದು ಹ್ಯಾಗಂದರೆ—

“ನಾನು ಈ ಮೊದಲು ಬರೆದ ಪತ್ರವು ನಿಮಗೆ ಮುಟ್ಟುವಷ್ಟರಲ್ಲಿಯೇ ಪುನಃ ನಿಮ್ಮನ್ನು ಎಚ್ಚರಗೊಳಿಸಬೇಕೆಂದು ಈ ಪತ್ರವನ್ನು ಬರೆದಿದ್ದೇನೆ. ಬಾದಶಹನ ಮನಸಿನಲ್ಲಿ ನಿಮ್ಮನ್ನು ಸಂಪೂರ್ಣವಾಗಿ ನಾಶಪಡಿಸಬೇಕೆಂದು ಅದೆ. ಇಂದಿನ ತನಕ ನಿಮ್ಮ ನಾಶದ ಸಲುವಾಗಿ ವಿಜಾಪುರದ ಹಾಗು, ತಮ್ಮ ಅನೇಕ ಜನಸರದಾರರು ಹಲವು ರೀತಿಯಿಂದ ಪ್ರಯತ್ನ ಮಾಡಿದಾಗ್ಯೂ ನೀವು ಯಾರದೂ ನಡೆಯಗೊಡಲಿಲ್ಲ; ಅದರಿಂದ ಬಾದಶಹನು ಸಿಟ್ಟಿನಿಂದ ಸಂತಪ್ತನಾಗಿರುವನು. ತಾನು ಇಲ್ಲಿಂದ ಕಳಿಸಿಕೊಟ್ಟ ಸರದಾರರನ್ನು ನೀವು ಅನುಕೂಲರನ್ನಾಗಿ ಮಾಡಿಕೊಳ್ಳುವಿರೆಂತಲೂ, ಅದರಿಂದ ನಿಮ್ಮ ಪ್ರಯತ್ನಗಳನ್ನು ಮುಂದು ಹಾಕುವಲುದ್ಯೋಗವನ್ನು ಯಾರೂ ಮನಃಪೂರ್ವಕವಾಗಿ ಮಾಡುವದಿಲ್ಲೆಂತಲೂ ಬಾದಶಹನು ತನ್ನ ಕಪಟಸ್ವಭಾವಕ್ಕನುಸರಿಸಿ ತಿಳಕೊಂಡಿರುವನು. ಒಮ್ಮೆ ಆತನ ಮನಸಿನಲ್ಲಿ ತಾನೇ ಸ್ವತಃ ದಕ್ಷಿಣಕ್ಕೆ ಹೋಗಬೇಕೆಂಬ ವಿಚಾರವು ಬಂದಿತ್ತು; ಆದರೆ ಇನ್ನೂ ಇಲ್ಲಿ ಚೆನ್ನಾಗಿ ವ್ಯವಸ್ಥೆಯು ಕೂತಂತೆ ಅವನಿಗೆ ಕಾಣುವದಿಲ್ಲ. ಶಹಾಜಿಹಾನನು ಜೀವದಿಂದ ಇರುವ ವರೆಗೆ ಔರಂಗಜೇಬನು ಆಗ್ರಾಪಟ್ಟಣವನ್ನು ಬಿಟ್ಟು ಕದಲುವದಿಲ್ಲ; ಔರಂಗಜೇಬನು ಅತ್ಯಂತ ನಿಂದ್ಯಮಾರ್ಗವನ್ನು ಅವಲಂಬಿಸಿ ಗಾದಿಯನ್ನು ಸೆಳಕೊಂಡದ್ದರಿಂದ, ಆ ಗಾದಿಯನ್ನು ತನ್ನಿಂದ

ಯಾವಾಗ್ಗೆ ಯಾರು ಕಸಕೊಂಡಾರೆಂಬ ಒಗ್ಗೆ ಅವನ ಮನಸಿನಲ್ಲಿ ಹಗಲಿರಳು ಭೀತಿಯು ನೆಲೆಗೊಂಡಿರುವದು. ನಾನು ಅತ್ತ ದಕ್ಷಿಣಕ್ಕೆ ದಂಡೆತ್ತಿ ಹೋಗಲು, ಇತ್ತ ಯಾರಾದರೂ ಒಂಡುಮಾಡಿ, ತಂದೆಯನ್ನು ಸೆರೆಯಿಂದ ಬಿಡಿಸಿ, ಪುನಃ ಗಾದಿಯ ಮೇಲೆ ಕೂಡ್ರಿಸಿದರೆ ಏನು ಮಾಡಬೇಕು, ಎಂಬ ವಿಚಾರವು ಅವನ ಮನಸ್ಸಿನಲ್ಲಿ ಮೇಲೆ ಮೇಲೆ ಒರುತ್ತಿರುವದು. ಅದರಿಂದ ಅವನ ಮನಸ್ಸು ಆಗ್ರಾಪಟ್ಟಣವನ್ನು ಬಿಟ್ಟು ಹೋಗಲಿಕ್ಕೆ ಒಲ್ಲದು. ಶಹಾಜಹಾನನು ಯಾವ ತಾಜಮಹಾಲನ್ನು ತನ್ನ ಪ್ರಿಯಪತ್ನಿಯ ಸ್ಮಾರಕವೆಂದು ಕಟ್ಟಿಸಿರುವನೋ, ಆ ತಾಜಮಹಾಲೆಂಬ ಸುಂದರ ಇಮಾರತು ಹಗಲಿರಳು ಅವನ ದೃಷ್ಟಿಗೆ ಬೀಳುವಂಥ ಸ್ಥಳವನ್ನು ಆಗ್ರಾಪಟ್ಟಣದ ಕೋಟೆಯಲ್ಲಿ ಹುಡುಕಿ ಅಲ್ಲಿ ಔರಂಗಜೇಬನು ಶಹಾಜಹಾನನನ್ನು ಸೆರೆಯಲ್ಲಿಟ್ಟಿರುವನು. ಒಂದಾನೊಂದು ಸಮಯದಲ್ಲಿ ಶಹಾಜಹಾನ ಬಾದಶಹನ ಅವಸ್ಥೆಯನ್ನು ನೋಡುವ ಸಂಧಿಯು ನನಗೆ ವಿಲಕ್ಷಣ ರೀತಿಯಿಂದ ದೊರೆಯಿತು; ಆ ಕಾಲಕ್ಕೆ ಯಾವಾತನು ತನ್ನ ಕೈ ನಡೆಯುವ ಕಾಲಕ್ಕೆ ಬೇಕಾದಷ್ಟು ಹಣವನ್ನು ವೆಚ್ಚಮಾಡಿ ಸಂಗಮುರವರೀ ಕಲ್ಲಿನ ಅತಿದೊಡ್ಡ ಕಟ್ಟಡವನ್ನು ಕಟ್ಟಿಸಿದನೋ, ಯಾವಾತನು ತಪಗಟ್ಟಲೆ ಬಾದಶಾಹೀ ಪದವನ್ನು ಅನುಭವಿಸಿದನೋ ಆ ಬಾದಶಹನ ದೀನಾವಸ್ಥೆಯನ್ನು ಕಂಡು ನನ್ನ ಮನಸ್ಸಿಗೆ ಅತ್ಯಂತ ಖೇದವಾಯಿತು. ಆಗ ನನ್ನ ಕಣ್ಣಿನಿಂದ ದಳದಳ ನೀರು ಸಹ ಉದರಿದವು. ಬಾದಶಹನಿಗೆ ಹೊಟ್ಟೆತುಂಬ ಅನ್ನವು ದೊರೆಯುವದಿಲ್ಲ; ಪ್ರಕೃತಿಯು ಅಸ್ವಸ್ಥವಾದರೆ ಔಷಧವು ದೊರೆಯುವದಿಲ್ಲ ಅವನು ಫಕೀರರ ಹಾಗೆ ಉದ್ದವಾದದ್ದೊಂದು ನಿಲುವಂಗಿಯನ್ನು ತೊಟ್ಟುಕೊಂಡಿರುವನು; ತಲೆಯ ಮೇಲೆ ಒಂದು ಟೊಪ್ಪಿಗೆ ಇರುವದು. ಪಂಜರದಲ್ಲಿ ಹಾಕಿಟ್ಟ ಯಾವದೊಂದು ಪಶುವಿನಂತೆ, ತನ್ನ ಕೈಯೊಳಗಿನ ಒಡಿಗೆಯನ್ನು ಊರುತ್ತ ಪಂಜರದಂತಿರುವ ಆ ಸೆರೆಮನೆಯಲ್ಲಿ ಅತ್ತಿಂದ ಇತ್ತ ಇತ್ತಿಂದ ಅತ್ತ ಓಡಾಡುತ್ತಿರುವನು. ಅವನ ಸ್ನಾನಮುಖಮಾರ್ಜನಾದಿ ಕೆಲಸಗಳ ಸಲುವಾಗಿ ಆ ಕೋಣೆಯಲ್ಲಿಯೇ ಒಂದು ಕಾಲಿವೆಯನ್ನು ಹಾಯಿಸಿರುವರು. ಅದರಲ್ಲಿ ಬಿಸಿನೀರಾಗಲಿ, ತಣ್ಣೀರಾಗಲಿ ಬರುವವು. ಆ ನೀರಿನಿಂದಲೇ ಅವನು ಸ್ನಾನಮುಖಮಾರ್ಜನಾದಿ ಕೆಲಸಗಳನ್ನು ತೀರಿಸಿಕೊಳ್ಳತಕ್ಕದ್ದು. ಅವನಿಗೆ ತೀರ ಕದನ್ನವು ಕೊಡಲ್ಪಡುತ್ತದೆ. ಅವನ ಅಂತಃಕರಣದವರು ಅಲ್ಲಿ ಯಾರೂ ಇಲ್ಲ. ಯಾರ ಮನಸ್ಸಿನಲ್ಲಾದರೂ—ಅವನ ನೊಮ್ಮಕ್ಕಳ ಮನಸ್ಸಿನಲ್ಲಿ ವಿಶೇಷವಾಗಿ ಮೊಮ್ಮಗಳ ಮನಸ್ಸಿನಲ್ಲಿ—ಬಾದಶಹನ

ಹತ್ತರ ಹೋಗಿ ಕೂತು ಮಾತಾಡಬೇಕು. ಆತನ ಶುಶ್ರೂಷೆಯನ್ನು ಮಾಡ ಬೇಕೆಂದು ಬಂದರೆ ಅದು ಶಕ್ಯವಿಲ್ಲ. ಯಾಕಂದರೆ ಯಾರಿಗೂ ಅವನ ಹತ್ತರ ಹೋಗಗೊಡುವದಿಲ್ಲ!! ಆಲಮಗೀರನ ಮನಸ್ಸಿನಲ್ಲಿ—ನಾನು ನನ್ನ ತಂದೆಯನ್ನು ಸೆರೆಯಲ್ಲಿಟ್ಟು ಗಾದಿಯನ್ನು ಆಕ್ರಮಿಸಿರುತ್ತೇನೆ. ಇಲ್ಲಿಂದ ನಾನು ಎಲ್ಲಿಯಾದರೂ ಹೊರಗೆ ಹೋದರೆ, ನನ್ನ ಹಿಂದೆ ಯಾವ ಕಾಲಕ್ಕೆ ಏನು ಪ್ರಸಂಗವು ಬಂದೀತು ಯಾರು ನನ್ನನ್ನು ಪಟ್ಟದಿಂದ ತಳ್ಳಿಯಾರೆಂಬ ನಿಯಮವಿಲ್ಲ. ಇವೇ ವಿಚಾರ ಗಳು ಹಗಲಿರುಳು ಕಣ್ಣ ಮುಂದೆ ಕಟ್ಟಿರುತ್ತವೆ ತನ್ನ ಮೇಲೆ ತನ್ನ ಒಬ್ಬಿಬ್ಬರು ಮಕ್ಕಳ ಹೊರತು ಬೇರೆ ಯಾರ ಪ್ರೇಮವೂ ಇಲ್ಲೆಂಬದೂ ಅವನಿಗೆ ಪೂರ್ಣ ವಾಗಿ ಮನವರಿಕೆಯಾಗಿರುತ್ತದೆ. ಇತ್ಯಾದಿ ಇಲ್ಲಿಯ ವರೆಗೆ ಎರಡನೇದೊಂದು ವಿಷಯವನ್ನು ಬರೆದೆನು; ಆದರೆ ಔರಂಗಜೇಬನು ಸ್ವತಃ ದಕ್ಷಿಣಕ್ಕೆ ದಂಡೆತ್ತಿ ಬರುವಂತಿಲ್ಲ, ಎಂಬ ಸಂಗತಿಯನ್ನು ನಿಮಗೆ ಸ್ಪಷ್ಟವಾಗಿ ತಿಳಿಸುವ ಉದ್ದೇಶ ದಿಂದ ಈ ಎಲ್ಲ ಸಂಗತಿಗಳನ್ನು ಬರೆದಿರುತ್ತೇನೆ. ತನ್ನ ಗಾದಿಯು ಸ್ಥಿರವಾಯಿ ತೆಂದು ನಂಬಿಕೆ ಹುಟ್ಟಿದ ಹೊರತು ಈ ಪ್ರಾಂತವನ್ನು ಬಿಟ್ಟು ಅವನು ದಕ್ಷಿಣಕ್ಕೆ ಎಂದೂ ಹೊರಡುವದಿಲ್ಲ! ಅದರಿಂದಲೇ ಅವನು ನಿಮ್ಮ ಪಾರುಪತ್ಯದ ಸಲು ವಾಗಿ ಯಾವನೊಬ್ಬ ಬಲಾಢ್ಯ ಸರದಾರನನ್ನು ಕಳಿಸುತ್ತಿರುತ್ತಾನೆ. ಇಂದಿನ ತನಕ ಅವನು ನಿಮ್ಮ ಮೇಲೆ ಯಾವ ಯಾವ ಸರದಾರರನ್ನು ಕಳಿಸಿದನೋ, ಅವರೆಲ್ಲರನ್ನು ಒಂದಿಲ್ಲೊಂದು ರೀತಿಯಿಂದ ನೀವು ಹಾದಿಗೆ ಹಚ್ಚಿದಿರಿ; ಯಾರ ಆಟವನ್ನೂ ನಡೆಯಗೊಡಲಿಲ್ಲ. ಅದರಿಂದ ಅವನು ಬಹಳ ಸಂತಪ್ತನಾಗಿರು ತ್ತಾನೆ. ಅದರಲ್ಲಿ ಶಾಹಿಸ್ತೆಖಾನನಿಗೆ ನೀವು ಮಾಡಿದ ಅವಸ್ಥೆಯನ್ನು ಕೇಳಿಯಂ ತೂ ಬಾದಶಹನಿಗಿಂತ ಅವನ ಮನೆಯ ಜನರಿಗೆ-ವಿಶೇಷವಾಗಿ ಶಾಹಿಸ್ತೆಖಾನನ ಹೆಂಡತಿಗೆ—ಬಹಳ ಅಸಮಾಧಾನವಾಯಿತು. ಅದಕ್ಕಾಗಿ ಅವರು ನಿಮ್ಮ ಸೇಡು ತೀರಿಸಿಕೊಳ್ಳಬೇಕೆಂದು ನಿಶ್ಚಯಿಸಿರುವರು; ಆದರೆ ಅದು ಸಫಲವಾಗುವದಿಲ್ಲೆಂ ಬದು ನನಗೆ ಗೊತ್ತದೆ. ನಿಮ್ಮ ಮೇಲೆ ಕಳಿಸಿಕೊಟ್ಟ ಪ್ರತಿಒಬ್ಬ ಮನುಷ್ಯನು ಕೈಬೀಸುತ್ತ ತಿರುಗಿ ಬರುವನು. ಇದಕ್ಕೆ ನಿಮ್ಮ ಶೌರ್ಯವು ಅಥವಾ ಚಾತುರ್ಯ ವು ಕಾರಣವಿರಬಹುದೆಂದು ಬಾದಶಹನು ತಿಳಿಯುವದಿಲ್ಲ; ಆದರೆ ಆ ಬಂದ ಸರ ದಾರರು ನಿಮಗೆ ಫಿತೂರಾಗಿ ಏನೂ ಕಾರ್ಯವನ್ನು ಮಾಡದೆ, ತಿರುಗಿ ಬರುವ ರೆಂದು ಅವನ ಕಲ್ಪನೆ ಇರುತ್ತದೆ! ನಮ್ಮ ಹಿರಿಯರು ಹೀಗೆಂದೂ ಫಿತೂರರಾಗಲಿ ಕ್ಕಿಲ್ಲೆಂದು ಬಾದಶಹನಿಗೆ ನಂಬಿಗೆಯುಂಟು; ಆದರೆ ಅದರಲ್ಲಿಯಾದರೂ ನಿಶ್ಚಯ

ವೆಲ್ಲಿ? ಹಿಂದುಹಿಂದುಗಳು ಒಟ್ಟುಗೂಡಿದರೆ ಏನಾಗುವದೋ ಏನೋ, ಎಂಬ ಸಂಶಯವು ಬಾದಶಹನ ಮನಸ್ಸಿನಲ್ಲಿ ಇದ್ದೇ ಇರುವದು. ದಕ್ಷಿಣದಲ್ಲಿ ಇರುವ ತನ್ನ ಎಲ್ಲ ರಾಜ್ಯವು ಕೈಬಿಟ್ಟು ಹೋದದ್ದನ್ನು ಕಂಡು ಮುಂದೆ ಏನು ಮಾಡಬೇಕು? ಶಿವಾಜಿಯನ್ನು ದಂಡಿಸಲಿಕ್ಕೆ ಯಾರನ್ನು ಕಳಿಸಿಕೊಡಬೇಕು? ಈ ಸಂಬಂಧದಿಂದ ಹಲವು ವಿಚಾರಗಳನ್ನು ಮಾಡಿದ ಬಳಿಕ ಈ ಮಹತ್ವದ ಕೆಲಸವು ನಮ್ಮ ಹಿರಿಯರ ಕಡೆಗೆ ಒಪ್ಪಿಸಲ್ಪಟ್ಟಿತು. ಆದರೆ ಅವರ ಮೇಲಾದರೂ ಪೂರ್ಣ ನಂಬಿಗೆಯೆಲ್ಲಿಯದೆ? ಅಷ್ಟು ನಂಬಿಗೆ ಇಲ್ಲದ್ದರಿಂದಲೇ ಅವರ ಸಂಗಡ ದಿಲೇರಖಾನನೆಂಬ ಸರದಾರನು ಕಳಿಸಲ್ಪಟ್ಟಿದ್ದಾನೆ. 'ಜಯಸಿಂಗನಲ್ಲಿ ಏನಾದರೂ ಫಿತೂರಿಯ ಲಕ್ಷಣಗಳು ಕಂಡುಬಂದರೆ, ಅವನ ಅಪ್ಪಣೆಯನ್ನು ಮನ್ನಿಸದೆ, ನಿನ್ನ ಮನಸಿಗೆ ಬಂದಂತೆ ವ್ಯವಸ್ಥೆ ಮಾಡು. ಜಯಸಿಂಗನನ್ನು ಮುಂದೆ ನೋಡಿಕೊಳ್ಳೋಣ' ಎಂದು ದಿಲೇರಖಾನನಿಗೆ ಅಂತರಂಗದಲ್ಲಿ ಕಟ್ಟಪ್ಪಣೆಯಾಗಿರುತ್ತದೆ; ಮತ್ತು ಇದೇ ಕಾರಣದಿಂದ ಬಾದಶಹನು ಎಷ್ಟೋಜನ ಖಾನರನ್ನು ಜಯಸಿಂಗನ ಕೂಡ ಕಳಿಸಿದ್ದಾನೆ. ಈ ಸಂಗತಿಯ ಕಡೆಗೆ ನೀವು ಸ್ವಲ್ಪಾದರೂ ಅಲಕ್ಷ ಮಾಡಬಾರದು. ತಮ್ಮ ವಿಷಯವಾಗಿ ಮಹಾರಾಜ ಜಯಸಿಂಗರ ಮನಸು ನೆಟ್ಟಗದೆ. ನಿಮ್ಮ ಕೂಡ ಯುದ್ಧಮಾಡಬೇಕೆಂದು ಅವರನ್ನು ಇಲ್ಲಿಂದ ದಕ್ಷಿಣಕ್ಕೆ ಕಳಿಸಿಕೊಟ್ಟಿದ್ದರೂ, ಅವರು ನಿಮಗೆ ಭಯಂಕರವಾದ ತೊಂದರೆಯಾಗುವಂಥ ಕೆಲಸವನ್ನು ಎಂದೂ ಮಾಡಲಾರರು. ನೀವು ಅವರನ್ನು ಮೋಸಗೊಳಿಸಿ ಗೊಂದಲದಲ್ಲಿ ಹಾಕುವ ಭಂಗಿ ಮಾತ್ರ ಬೀಳಬೇಡಿರಿ, ಯಾಕಂದರೆ ಅವರು ಬಹಳ ಧೋರಣಿ ಮನುಷ್ಯರು. ಬಾದಶಹನು ಅವರನ್ನು ನಿಮ್ಮ ಶಾಸನದ ಸಲುವಾಗಿ ಕಳಿಸಿದ್ದಾನೆ. ನೇಮಿಸಿ ಕೊಟ್ಟ ಕೆಲಸವು ಮನಸಿನ ತಕ್ಕ ಆಗುವಂತೆಯೂ, ಬಾದಶಹನ ಮನಸಿನಲ್ಲಿ ತಮ್ಮ ವಿಷಯವಾಗಿ ನಂಬಿಗೆ ಹುಟ್ಟುವಂತೆಯೂ ಅವರು ಕೆಲಸ ಮಾಡಬೇಕಾಗಿರುವದು. ಅವರು ನಿಮ್ಮಿಂದ ಎಂದೂ ಮೋಸಹೊಂದುವವರಲ್ಲ. ಅವರ ಸಿದ್ಧತೆಯು ಪೂರ್ಣವಾದದ್ದಿರುವದು ಯಾವ ಕಾಲಕ್ಕೆ ಯಾವ ಕಾರ್ಯವನ್ನು ಹ್ಯಾಗೆ ಮಾಡತಕ್ಕದ್ದೆಂಬ ಬಗ್ಗೆ ಅವರು ಪೂರ್ಣವಾಗಿ ಆಲೋಚನೆಯನ್ನು ಮಾಡಿರುವರು. ಈ ಎಲ್ಲ ಸಂಗತಿಗಳು ನಿಮಗೆ ಚೆನ್ನಾಗಿ ತಿಳಿಯಬೇಕೆಂತಲೇ ಈ ಪತ್ರವನ್ನು ಬರೆದಿದ್ದೇನೆ. 'ದಕ್ಷಿಣಹಿಂದುಸ್ಥಾನದಲ್ಲಿ ರಾಜ್ಯಸಂಸ್ಥಾಪನೆಯ ವಿಷಯವಾಗಿ ನಾನು ಪ್ರಯತ್ನನಡಿಸಿರುವಂತೆ ಉತ್ತರಹಿಂದಸ್ಥಾನದಲ್ಲಿ ನೀವು ಯಾಕೆ ಪ್ರಯತ್ನ ಮಾಡುವದಿಲ್ಲ' ಎಂದು ನೀವು ನಿಮ್ಮ ಹಿಂದಿನ ಪತ್ರದಲ್ಲಿ ಬರೆದು

ಕೇಳಿದ್ದಿರಿ; ಈ ಪ್ರಶ್ನೆಗೆ ಉತ್ತರವಿಷ್ಟೇ, ಇತ್ತ ಕಡೆಗೆ ಅಂಥ ಪ್ರಯತ್ನವು ಆಗ ದಿರಲಿಕ್ಕೆ ಕೆಲವು ಮುಖ್ಯ ಕಾರಣಗಳಿರುವವು. ಇಲ್ಲಿಯ ಹಿಂದೂ ಅರಸರು ತಮ್ಮ ತಮ್ಮೊಳಗೆ ಬಹಳ ದ್ವೇಷವನ್ನು ಮಾಡುತ್ತಾರೆ. ಒಬ್ಬನು ಏನಾದರೂ ಪ್ರಯತ್ನ ಮಾಡತೊಡಗಿದರೆ ಮತ್ತೊಬ್ಬನು ಅವನನ್ನು ಬಗ್ಗುಬಡಿಯಲಿಕ್ಕೆ ಹವ ಣಿಸುವನು. ಬಾದಶಹನ ಪ್ರೀತಿಯನ್ನು ಸಂಪಾದಿಸುವದಕ್ಕಾಗಿ ಯಾವ ಮನು ಷ್ಯನು ಯಾವ ಕಾಲಕ್ಕೆ ಯಾರ ಮೇಲೆ ಏನು ಪೇಚು ತರುವನೆಂಬ ನಿಯಮವಿಲ್ಲ. ಇನ್ನು ಆ ಬಗೆಯ ಪ್ರಯತ್ನವನ್ನು ಮಾಡಬಹುದಾದ ಜನರಲ್ಲಿ ಪ್ರಮುಖರೆಂದರೆ, ನಮ್ಮ ಹಿರಿಯರು, ಜೋಧಪುರದ ಜಸವಂತಸಿಂಗ, ಉದೇಪುರದ ರಾಜಸಿಂಗ ಇವರೇ ಮೂವರು. ಆದರೆ ಈ ಮೂವರೊಳಗೆ ಪರಸ್ಪರ ಪ್ರೇಮಭಾವವು ಅಥವಾ ಆದರವು ಎಳ್ಳಷ್ಟಾದರೂ ಇದ್ದಂತೆ ಕಂಡುಬರುವದಿಲ್ಲ. ಬಾದಶಾಹೀ ರಾಜ್ಯವನ್ನು ಮುಳುಗಿಸೋಣ ಅಥವಾ ಅದರ ವಿರುದ್ಧವಾಗಿ ಬಂಡಾಯವನ್ನೆಬ್ಬಿ ಸುವ ಪ್ರಯತ್ನಮಾಡೋಣ ಅಂದರೆ, ನಮ್ಮ ಹಿರಿಯರಿಗೂ ಜಸವಂತಸಿಂಗನಿಗೂ ಏನೋ ವಿಲಕ್ಷಣವೆನಿಸುತ್ತದೆ. ಅವರು—ಹೀಗೆ ಪ್ರಯತ್ನ ಮಾಡೋಣವೆಂದರೆ ಗುಡ್ಡದ ಒಂದು ಗವಿಯಲ್ಲಿ ಹೊಕ್ಕು ಆ ಗವಿಯ ಮೇಲ್‌ಭಾಗವನ್ನು ಅಗಿದು, ಮೈಮೇಲೆ ಕೆಡವಿಕೊಳ್ಳುವ ಮೂರ್ಖತನದ ಕೆಲಸವೆಂದು ಅಭಿಪ್ರಾಯಪಡು ವರು. ಗುಡ್ಡವು ಮೈಮೇಲೆ ಬಿದ್ದು ತಾವು ಮಾತ್ರ ಛಿನ್ನ ಭಿನ್ನವಾಗಬಹುದೇ ಹೊರತು ಇದಕ್ಕೂ ಹೆಚ್ಚಿಗೆ ಏನೂ ಕೆಲಸವಾಗಲಿಕ್ಕಿಲ್ಲ, ಎಂದು ಅವರ ತಿಳು ವಳಿಕೆಯುಂಟು. ನಮ್ಮ ಜನರ ಸದ್ಯಸ್ಥಿತಿಯನ್ನು ನೋಡಿದರೆ ಇತ್ತ ಕಡೆ ಗಂತೂ ಅವರು ಅನ್ನುವ ಸ್ಥಿತಿಯು ನಿಜವಾಗಿ ಇರುವದು. ಇತರ ಸಣ್ಣಪುಟ್ಟ ಅರಸರು ಯಾವಾಗಲೂ ಹೆಚ್ಚಿನ ಯೋಗ್ಯತೆಯ ಕೆಲಸಗಳನ್ನೂ ಅಧಿಕಾರ ಗಳನ್ನೂ ಸಂಪಾದಿಸುವ ಹವ್ಯಾಸದಲ್ಲಿಯೇ ಇರುವರು. ಅದರಿಂದ ಅವರ ಕನಸುಮನಸಿನಲ್ಲಿ ಸಹ ಔರಂಗಜೇಬನ ಜುಲುಮೆಯಿಂದ ಮುಕ್ತರಾಗಬೇಕೆಂಬ ವಿಚಾರವು ಬರುವದಿಲ್ಲ.

ನಮ್ಮ ಹಿರಿಯರು ಇಲ್ಲಿಂದ ಹೊರಟರೆಂದರೆ, ಚಿಕ್ಕ ದೊಡ್ಡ ಪಯಣ ಗಳನ್ನು ಮಾಡುತ್ತ ಅಲ್ಲಿಗೆ ಒಂದು ಇಳಿಯುವರು; ಅವರು ಒಮ್ಮೆ ಒಂದು ಕಾರ್ಯವನ್ನು ಕೈಕೊಂಡರೆಂದರೆ ತೀರಿತು. ಅದನ್ನು ಕಡೆಗಾಣಿಸುವವರೆಗೆ ವಿಶ್ರಾಂತಿ ಅಥವಾ, ಇಂದು ನಾಳೆ ಎಂದು ದಿನಹಾಕುವದು ಇವು ಅವರಿಗೆ ಸ್ವಪ್ನದಲ್ಲಿ ಸಹ ಸೂಚಿಸುವದಿಲ್ಲ. ಹಗಲಿರಳು ಅವರ ತಲೆಯಲ್ಲಿ ಅದೇ ವಿಚಾ

ರವು ಇರುವದು. ಅವರು ಬಹುಶಃ ಇಲ್ಲಿಂದ ಪೌಷ್ಯಮಾಸದಲ್ಲಿ ಹೊರಡ ಬಹುದು, ಮತ್ತು ಹ್ಯಾಗಾದರೂ ಮಾಡಿ ಚೈತ್ರದ ಪೌರ್ಣಿಮೆಗೆ ಔರಂಗಾಬಾದಕ್ಕೆ ಬಂದು ತಲಪುವರು. ಕದಾಚಿತ್ ಫಾಲ್ಗುಣ ಶುದ್ಧ ಪೌರ್ಣಿಮೆಗೂ ಒಂದು ವೇಳೆ ಔರಂಗಾಬಾದಕ್ಕೆ ಮುಟ್ಟಬಹುದು. ಇದರದೇನೂ ನಿಯಮವಿಲ್ಲ. ಇದೇ ಧೋರಣದಿಂದ ಸಿದ್ಧತೆಯನ್ನು ಇಡುವದಕ್ಕಾಗಿ ಅಲ್ಲಲ್ಲಿಗೆ ಈ ಮೊದಲೇ ಹುಕುಮುಗಳನ್ನು ಕಳಿಸಿರುವರು. ಸಂಕ್ರಮಣದ ಪೂರ್ವದಲ್ಲಿ ಅಥವಾ ಸಂಕ್ರಮಣಕ್ಕೆ ಅವರು ನರ್ಮದಾನದಿಯನ್ನು ದಾಟಬಹುದು. ಬಹುಶಃ ಮಕರ ಸಂಕ್ರಮಣವು ಅವರಿಗೆ ನರ್ಮದಾತೀರದಲ್ಲಿ ಆದೀತು. ಬರ್ಹಾಣಪುರದಲ್ಲಿ ಕೆಲವು ಮುಕ್ಕಾಮುಗಳನ್ನು ಮಾಡಿ ಅಲ್ಲಿ ಅವರು ದಂಡಿನ ಎಲ್ಲ ವ್ಯವಸ್ಥೆಯನ್ನು ಮಾಡ ತಕ್ಕವರಿರುವರು. ಬರ್ಹಾಣಪುರದಲ್ಲಿ ಅವರು ಬಹಳ ದಿವಸ ನಿಲ್ಲಲಿಕ್ಕಿಲ್ಲ. ಅಲ್ಲಿ ಶಹಾಜಾದಾ ಮುಅಜೀಮನ ಮುಕ್ಕಾಮು ಇರುವದು. ಅವನನ್ನು ಕಂಡು ಕೊಂಡು ತಾವು ಮುಂದೆಮಾಡತಕ್ಕದ್ದನ್ನೆಲ್ಲ ಅವನ ಮುಂದೆ ಹೇಳಿ ಜಸವಂತ ಸಿಂಗನನ್ನು ತಿರುಗಿ ದಿಲ್ಲಿಗೆ ಕಳಿಸಿ, ತಾವು ಅಲ್ಲಿಂದ ಪುಣೆಯ ಕಡೆಗೆ ಮೋರ್ಚೆಯನ್ನು ಹೂಡತಕ್ಕವರು. ಚೈತ್ರಶುದ್ಧ ಪೌರ್ಣಿಮೆಯ ಪೂರ್ವದಲ್ಲಿಯೇ ಪುಣೆಗೆ ಹೋಗಿ ಇಳಿಯಬೇಕೆಂದು ಅವರ ಉತ್ಕಟವಾದ ಇಚ್ಛೆಯು ಇರುವದು. ಅದನ್ನು ಪೂರ್ಣಮಾಡುವ ವಿಷಯದಲ್ಲಿ ಬೇಕಾದಷ್ಟು ವಿಘ್ನಗಳು ಬಂದರೂ ಅವುಗಳನ್ನು ಅವರು ಲೆಕ್ಕಿಸುವದಿಲ್ಲ; ಮತ್ತು ಬೇಕಾದವರು ಬೇಕಾದದ್ದು ಹೇಳಿದರೂ ಅವರು ಮುಂದಿಟ್ಟಕಾಲನ್ನು ಹಿಂದಕ್ಕೆ ಇಕ್ಕುವದಿಲ್ಲ. ಈಪ್ರೊತ್ತಿನ ವರೆಗಿನ ಅವರ ಚರಿತ್ರವು ನಿಮಗೆ ವಿದಿತವಾಗಿಯೇ ಇರುವದು. ಒಮ್ಮೆ ಇಂಥದೊಂದು ಸಂಗತಿಯನ್ನು ಹೀಗೆಮಾಡಬೇಕೆಂದು ನಿರ್ಣಯವಾದನಂತರ ತೀರಿತು, ಎಷ್ಟು ಪ್ರಕಾರದ ವಿಘ್ನಗಳೇ ಬರಲಿ, ತೊಂದರೆಗಳೇ ಪ್ರಾಪ್ತವಾಗಲಿ ಅವರು ತಾವು ಗೊತ್ತುಮಾಡಿದ ಮಾರ್ಗದ ಅತಿಕ್ರಮಣವನ್ನು ಎಂದೂ ಮಾಡುವದಿಲ್ಲ. ತೊಂದರೆಗಳು ಒದಗಿದಕೂಡಲೆ ಅವುಗಳನ್ನು ನೀಗುವ ಧೈರ್ಯ-ಪ್ರಯುಕ್ತಿಗಳು ಅವರಲ್ಲಿ ತಮ್ಮಿಂದ ತಾವೇ ಇಮ್ಮಡಿ ಮುಮ್ಮಡಿ ಆಗುವವು!! ಅದರಿಂದಲೇ ಶಹಾಜಹಾನನ ಕಾಲಕಿರ್ದಿಯಲ್ಲಿಯೂ, ಈ ಕಾಲಕಿರ್ದಿಯಲ್ಲಿಯೂ ಅನೇಕ ದೊಡ್ಡ ದೊಡ್ಡ ಕೆಲಸಗಳು ಅವರ ಕಡೆಗೆ ಒಪ್ಪಿಸಲ್ಪಟ್ಟಿದ್ದವು; ಈಗಾದರೂ ಒಪ್ಪಿಸಲ್ಪಡುತ್ತಲಿರುವವು. ಅವರು ಆ ಎಲ್ಲ ಕೆಲಸಗಳನ್ನು ಸರಿಯಾಗಿ ಮಾಡಿ ಕೀರ್ತಿಯನ್ನು ಪಡೆದಿರುವರು. ಅವರ ಭಾಷಣದಲ್ಲಿ ಸೌಜನ್ಯವೂ ಮಾರ್ದವವೂ ಬಹಳ; ಅವರು ಎಲ್ಲರ ಸಂಗಡ

ಒಳ್ಳೇ ನಮ್ರರಾಗಿ ನಡಕೊಳ್ಳುವರು; ಅದರಿಂದ ಯಾರೂ ಅವರ ವಿಷಯವಾಗಿ ಅಸಂತೋಷವನ್ನು ವ್ಯಕ್ತಪಡಿಸುವದಿಲ್ಲ ಅವರ ವಿಷಯವಾಗಿ ತಿರಸ್ಕಾರಬುದ್ಧಿ ಯುಳ್ಳವರ ಬಾಯಿ ಸಹ ಅವರ ಮುಂದೆ ಕಟ್ಟಾಗುವದು! ಅವರಿಗೆ ಮನುಷ್ಯರ ಪರೀಕ್ಷೆಯು ಬಹಳ ವಿಲಕ್ಷಣವಾಗಿರುವದು. ಯಾವ ಮನುಷ್ಯನು ಯಾವ ಧೋರಣದಿಂದ ನಡೆಯುವನೆಂಬದನ್ನು ಅರಿತುಕೊಳ್ಳುವ ಕೌಶಲ್ಯವಂತೂ ಅವ ರಲ್ಲಿ ಅತಿಶಯವಾಗಿರುವದು. ಮನಸಿನಲ್ಲಿ ಒಂದು ಸಂಗತಿಯನ್ನು ಹಿಡಕೊಂಡು ಬಹಿರಂಗದಲ್ಲಿ ಮತ್ತೊಂದನ್ನು ತೋರಿಸುವ ಮನುಷ್ಯನು ಅವರ ಮುಂದೆ ಹೋದಕೂಡಲೆ ಇದ್ದ ಸಂಗತಿಯನ್ನು ಯಥಾರ್ಥವಾಗಿ ಹೇಳಿಬಿಡುವನು! ಇಂಥ ಸಂಗತಿಗಳು ಈ ವರೆಗೆ ಎಷ್ಟೋ ಆಗಿರುವವು.

ನಮ್ಮ ತೀರ್ಥರೂಪರವರ ವರ್ಣನೆಯನ್ನು ನಾನೇ ಮಾಡಿದ್ದನ್ನು ಕಂಡು ನೀವು ನಗಬಹುದು; ಇಲ್ಲವೆ ನನಗೆ ದೋಷಕೊಡಬಹುದು; ಆದರೆ ಇನ್ನು ಮುಂದೆ ನೀವು ಎಂಥ ಯೋಗ್ಯತೆಯ, ಎಂಥ ಸ್ವಭಾವದ ಮನುಷ್ಯನ ಕೂಡ ನಡೆಯುತಕ್ಕದ್ದಿರುವದೋ ಆ ಮನುಷ್ಯನ ವಿಷಯವಾಗಿ ಮೊದಲೇ ನಿಮಗೆ ಪೂರ್ಣವಾಗಿ ಗೊತ್ತಿರುವದು ಒಳ್ಳೇದೆಂದು ಆಲೋಚಿಸಿ ನನ್ನ ಹಿರಿಯರ ಸ್ತುತಿ ಯನ್ನು ಮಾಡಿದ ದೋಷವನ್ನು ಹೊತ್ತುಕೊಂಡಿದ್ದೇನೆ. ನೀವು ಅವರ ಧೋರಣ ದಿಂದ ನಡೆದರೆ ಅವರು ನಿಮಗೆ ಸಹಾಯವನ್ನೇ ಮಾಡುವರಲ್ಲದೆ ತೊಂದರೆ ಯನ್ನು ಕೊಡಲಿಕ್ಕಿಲ್ಲ. ಒಂದುವೇಳೆ ಅವರು ನಿಮಗೆ ಅನುಕೂಲ ಸಂಗತಿಗಳು ಯಾವವು? ಪ್ರತಿಕೂಲ ಸಂಗತಿಗಳು ಯಾವವು? ಎಂಬ ಬಗ್ಗೆ ಒಳ್ಳೇ ಉಪ ಯುಕ್ತವಾದ ಆಲೋಚನೆಗಳನ್ನು ಹೇಳಿದರೂ ಹೇಳಬಹುದು. ಇಷ್ಟು ದಿವಸಗಳ ವರೆಗೆ ನಿಮ್ಮ ಮೇಲೆ ಬಂದ ಶತ್ರುಗಳಲ್ಲಿ ಕೆಲವರನ್ನು ನೀವು ಯುಕ್ತಿಯಿಂದಲೂ ಕೆಲವರನ್ನು ಯುದ್ಧದಿಂದಲೂ ಸೋಲಿಸಿ ಹಿಂದಕ್ಕೆ ಅಟ್ಟಿರುವಿರಿ. "ನಾನು ಶಿವಾಜಿಯನ್ನು ಸೋಲಿಸಿ ಅವನನ್ನು ಸೆರೆಹಿಡಕೊಂಡು ಬರುವೆನು" ಎಂದು ಪ್ರತಿಜ್ಞೆಯನ್ನು ಮಾಡಿ ವಿಜಾಪುರ ದರ್ಬಾರದಿಂದಲೂ ಇಲ್ಲಿಂದಲೂ ಬಂದ ಸರ ದಾರರಿಗೆಲ್ಲ ಕವಳೀಹಣ್ಣು ತಿನ್ನಲಿಕ್ಕೆ ಹಚ್ಚಿರುವಿರಿ. ಆದ್ದರಿಂದಲೇ ಈಗ ಔರಂಗ ಜೇಬ ಬಾದಶಹನು ನಮ್ಮ ಹಿರಿಯರನ್ನು ನಿಮ್ಮ ಮೇಲೆ ಕಳಿಸಿಕೊಟ್ಟಿರುವನು. "ಇತರರಂತೆ ನಾನಾದರೂ ಅಪಮಾನಹೊಂದಿ ತಿರುಗಿ ಮನೆಯ ಹಾದೀಹಿಡಿದು ಹೋಗುವದು ತೀರ ಲಜ್ಜಾಸ್ಪದವಾದ ಸಂಗತಿಯು; ಒಂದುವೇಳೆ ಹೀಗಾದರೆ ಇಷ್ಟು ದಿವಸದ ನನ್ನ ಕೀರ್ತಿಗೆ ಕಲಂಕವು ಹತ್ತುವದು" ಎಂಬ ಸಂಗತಿಯು

ಹಗಲಿರಳೂ ಅವರ ಮನಸಿನಲ್ಲಿ ವಾಸಮಾಡುತ್ತಿರುವದು. ಅವರಿಗೆ ಇಂದಿಗೆ ಅರವತ್ತು ವರುಷಗಳು ಸಂದಿದವು; ಆದರೆ ಯುದ್ಧ ಮಾಡುವ ಸಾಮರ್ಥ್ಯವು ಹಿಮ್ಮೆಟ್ಟಿಲ್ಲ; ಅವರಲ್ಲಿ ಉತ್ಸಾಹವು ಇನ್ನೂ ಇದ್ದಹಾಗೇ ಇರುವದೆಂದರೆ ಅತಿಶಯೋಕ್ತಿಯಾಗಲಾರದು. ಈ ನನ್ನ ಬರಹದ ಅನುಭವವು ಬೇಗನೆ ನಿಮಗೆ ಬರುವದು. ನೀವು ಅವರ ಕೂಡ ಸಾಮೋಪಚಾರದಿಂದ ನಡೆದರೆ ಅವರಿಂದ ನಿಮಗೆ ಸಹಾಯವೇ ಆಗುವದು. ಆದರೆ ನೀವು ದಂಡನೀತಿಯ ಉಪಯೋಗವನ್ನು ಮಾಡಿದರೆ ಅವರೇನು ನಿಮಗೆ ಹಿಂಜರಿಯುವದಿಲ್ಲ. ನೀವು ಬಹುಕಾಲದಿಂದ ಶ್ರಮಬಟ್ಟು ಕಟ್ಟತೊಡಗಿದ ಇಮಾರತನ್ನು ಆಗಲೇ ಕೆಡವಿಬಿಡುವರು. ನಿಮ್ಮ ವಿಷಯವಾಗಿ ಅವರ ಅಭಿಪ್ರಾಯವು ಚನ್ನಾಗಿರುವದೆಂದು ಈ ಮೊದಲೇ ನಿಮಗೆ ತಿಳಿಸಿರುವೆನು. ನೀವು ಕೈಕೊಂಡ ಕಾರ್ಯದ ಹೇತುವು ಬಹಳ ಚನ್ನಾಗಿರುವದು; ಆದರೆ ಅದು ಸಾಧ್ಯವಾಗಲಿಕ್ಕೆ ಈ ಕಾಲವು ಅನುಕೂಲವಾದದ್ದಲ್ಲ. ಸದ್ಯದ ಕಾಲದಲ್ಲಿ ನಾವು ಪೆತ್ತಗಾಗಿಯೇ ನಡೆಯಲಿಕ್ಕೆಬೇಕು

ಹಿರಿಯರ ಸಂಗಡ ನಾನೂ ದಕ್ಷಿಣಕ್ಕೆ ಬರಬೇಕೆಂದು ನಿನ್ನಿನ ತನಕ ನನ್ನ ವಿಚಾರವಿತ್ತು. ಸದ್ಯಕ್ಕೆ ಪತ್ರವ್ಯವಹಾರದಿಂದ ವ್ಯಕ್ತವಾಗುವ ನಮ್ಮ ನಿಮ್ಮ ಸ್ನೇಹವು ಪ್ರತ್ಯಕ್ಷ ದರ್ಶನದಿಂದ ದೃಢವಾದೀತೆಂಬ ಆಶೆಯು ನನ್ನನ್ನು ಹೊರಡಲುದ್ಯುಕ್ತನನ್ನಾಗಿ ಮಾಡುತ್ತಿತ್ತು; ಆದರೆ ವಿಚಾರಾಂತ್ಯದಲ್ಲಿ ಹಾಗೆ ಮಾಡುವದು ನನಗೆ ಇಷ್ಟವಾಗಿ ತೋರಲಿಲ್ಲ, ಯಾಕಂದರೆ, ನಾನು ಇಲ್ಲಿ ಇದ್ದು ನಿಮಗೆ ಅವಶ್ಯವಿದ್ದ ಸಹಾಯವನ್ನು ಸಹಜವಾಗಿ ಮಾಡಬಹುದು; ಆದರೆ ತಂದೆಗಳ ಸಂಗಡ ದಕ್ಷಿಣಕ್ಕೆ ಹೊರಟು ಬಂದರೆ, ಅವರ ಸಂಗಡ ಇರುವಾಗ ನಿಮ್ಮ ಕೂಡ ಗುಪ್ತ ಪತ್ರವ್ಯವಹಾರವನ್ನು ಇಡುವದು ದುಷ್ಕರವೂ ಅನಿಷ್ಟಕರವೂ ಆದದ್ದು. ನಮ್ಮ ಹಿರಿಯರ ಕಣ್ಣುತಪ್ಪಿಸಿ ಯಾರೂ ಯಾವ ಕೆಲಸವನ್ನೂ ಮಾಡಲಾರರು. ಅವರು ನಿಮ್ಮ ಪ್ರಾಂತದಲ್ಲಿ ಬಂದ ಬಳಿಕ ಒಂದು ಪ್ರಹರವಾದರೂ ವಿಶ್ರಾಂತಿಯನ್ನು ತೆಗೆದುಕೊಳ್ಳಲಿಕ್ಕಿಲ್ಲ. ಇದರಿಂದ ನಾನನ್ನುವ ಮಾತಿನ ರಹಸ್ಯವನ್ನು ತಿಳಕೊಳ್ಳಿರಿ. ಈ ನನ್ನ ಬರಹದಿಂದ ಎಲ್ಲ ಸಂಗತಿಗಳ ನಿಜವಾದ ಧೋರಣವು ನಿಮಗೆ ಗೊತ್ತಾಗುವದು. ಸದ್ಯಕ್ಕೆ ನಾನು ಇದಕ್ಕೂ ಹೆಚ್ಚು ಬರೆಯುವದಿಲ್ಲ. ಮಾರ್ಗದಲ್ಲಿ ಮಹತ್ವದ ಸಂಗತಿಗಳು ವರ್ತಿಸಿದರೆ, ಅವು ಕೂಡಲೆ ನಿಮಗೆ ತಿಳಿಯುವಂತೆ ವ್ಯವಸ್ಥೆಯನ್ನು ಮಾಡಿರುತ್ತೇನೆ. ನನ್ನ ಒಬ್ಬ ಪ್ರೀತಿಯ ಗೆಳೆಯನಾದ ರಾಜಾರಾಯಸಿಂಗ ಶಿಸೋದಿಯಾ ಎಂಬವನ ಮಗನಾದ ಕೀರ್ತಿಸಿಂಗನೆಂಬ

ವನಿಗೆ ಈ ಕಾರ್ಯಭಾಗವನ್ನು ವಹಿಸಿದ್ದೇನೆ. ಅವನು ನಿಮಗೆ ಆಗಾಗ್ಗೆ ಗುಪ್ತ ಪತ್ರಗಳನ್ನು ಬರೆದು ಮಹತ್ವದ ಸಂಗತಿಗಳನ್ನು ತಿಳಿಸುವನು; ಮತ್ತು ಮುಂದಾದರೂ ಪ್ರತಿಯೊಂದು ಕೆಲಸದಲ್ಲಿ ನಿಮಗೆ ಸಹಾಯ ಮಾಡುವನು. ಆದರೆ ಈ ಸಹಾಯದಿಂದ ನಿಮಗೆ ಉಪಯೋಗವಾದೀತೆಂದು ನನಗೆ ತೋರುವದಿಲ್ಲ.

ರಾಮಸಿಂಗನು ಅಂತಃಕರಣಪೂರ್ವಕವಾಗಿ ಬರೆದ ಈ ಸವಿಸ್ತರ ಪತ್ರವನ್ನು ಓದಿ ಆ ನಾಲ್ವರಿಗೂ ಬಹಳ ಸಮಾಧಾನವೆನಿಸಿತು. ಪತ್ರದಲ್ಲಿ ಬರೆಯತಕ್ಕ ಸಂಗತಿಯು ಇನ್ನಾವದೂ ಉಳಿದಿರುವದಿಲ್ಲೆಂಬದು ಸ್ಪಷ್ಟವಾಗಿ ಕಂಡುಬಂತು. ಪತ್ರಬರೆಯುವವನ ಮನಸ್ಸು, ಆ ಪತ್ರವು ಯಾರಿಗೆ ಬರೆಯಲ್ಪಟ್ಟಿತೋ ಅವರ ವಿಷಯವಾಗಿ ಎಷ್ಟು ಪ್ರೇಮಪೂರ್ಣವಾದದ್ದೂ, ಆದರಯುಕ್ತವಾದದ್ದೂ ಇರುವದೆಂಬದು ಆ ಪತ್ರದ ಪ್ರತಿಯೊಂದು ಶಬ್ದದಲ್ಲಿ ಒಡೆದು ಕಾಣುತ್ತಿತ್ತು. ಪತ್ರ ಬರೆಯುವವನು ತನಗೆ ಶಕ್ಯವಿದ್ದಷ್ಟು ಸಹಾಯವನ್ನು ಶಿವಾಜಿಮಹಾರಾಜರಿಗೆ ಮಾಡುವ ನಿಶ್ಚಯವನ್ನು ಮಾಡಿದ್ದು ಆ ಪತ್ರದ ಪ್ರತಿಯೊಂದು ವಾಕ್ಯದಿಂದ ತಿಳಿಯುವಂತೆ ಇತ್ತು. ಸಾಧ್ಯವಿದ್ದರೆ ನಾನು ನಮ್ಮ ಹಿರಿಯರ ಮನಸ್ಸನ್ನು ಈ ದಂಡಯಾತ್ರೆಯಿಂದ ತಿರುಗಿಸುತ್ತಿದ್ದೆನೆಂಬ ಪ್ರತ್ಯಕ್ಷ ಶಬ್ದವು ಆ ಪತ್ರದಲ್ಲಿ ಎಲ್ಲಿಯೂ ಇಲ್ಲದಿದ್ದರೂ, ಈ ಅರ್ಥವು ಪತ್ರದಿಂದ ಧ್ವನಿತವಾಗುತ್ತಿತ್ತೆಂಬದರಲ್ಲಿ ಯಾರಿಗೂ ಸಂದೇಹವಿದ್ದಿಲ್ಲ. ಪತ್ರವನ್ನು ಓದಿ ಆ ನಾಲ್ವರೂ ವಿಸ್ಮಿತರಾದರು. ರಾಮಸಿಂಗನು ಇಂಥ ಪತ್ರವನ್ನು ಇದೇ ಮೊದಲನೇ ಸಾರೆ ಬರೆದಿದ್ದನೆಂಬಂತೆ ಇಲ್ಲ; ಅವನಿಂದ ಇಂಥ ಅನೇಕ ಪತ್ರಗಳು ಬಂದಿದ್ದವು. ಆ ಎಲ್ಲ ಪತ್ರಗಳಲ್ಲಿ ರಾಮಸಿಂಗನು, ಶಿವಾಜಿಮಹಾರಾಜರು ಕೈಕೊಂಡ ಕಾರ್ಯದ ಬಗ್ಗೆ ಪ್ರೇಮಾದರಗಳನ್ನು ಉತ್ಕೃಷ್ಟವಾಗಿ ವ್ಯಕ್ತಪಡಿಸಿದ್ದನು. ಅವೆಲ್ಲವುಗಳಿಗಿಂತ ಈ ಪತ್ರದಲ್ಲಿ ಅವುಗಳ ಪರಮಾವಧಿಯಾಗಿತ್ತು.

ಪತ್ರವನ್ನು ಓದಿ ಮುಗಿಸಿದ ಬಳಿಕ ಸ್ವಾಮಿಗಳವರು—"ಅಹಹ! ಇಂಥ ಸತ್ಪುತ್ರನು ಹುಟ್ಟಿದ್ದು ಜಯಸಿಂಗನ ಸುದೈವವೇ ಸರಿ. ಇದರಲ್ಲೇನೂ ಸಂದೇಹವಿಲ್ಲ. ನಮ್ಮ ಸಲುವಾಗಿ ಈತನ ಅಂತಃಕರಣವು ಎಷ್ಟು ಕರಗುತ್ತಿರುವದು? ತಂದೆಯ ಸಂಗಡ ಇವನು ದಕ್ಷಿಣಕ್ಕೆ ಬಂದಿದ್ದರೆ ಬಹಳ ಒಳ್ಳೇದಾಗುತ್ತಿತ್ತು. ಇಲ್ಲಿ ಬಂದಮೇಲೆ ಒಂದುವೇಳೆ ಯುದ್ಧಮಾಡುವ ಪ್ರಸಂಗವು ಬರಬಹುದು. ಇವನಿಗೆ ನಮ್ಮ ಕೂಡ ಯುದ್ಧಮಾಡುವ ಮನಸಿಲ್ಲ. ಆದರಿಂದಲೇ ಅವನು ತಂದೆಯ ಸಂಗಡ ಹೊರಡುವ ವಿಚಾರವನ್ನು ರಹಿತಮಾಡಿದ್ದಾನು. ಅಹಹ!

ಈ ಹುಡುಗನು ಎಂಥ ಧೋರಣೆಯು! ಇವನ ವಿಚಾರಗಳು ಎಷ್ಟು ದೂರ ದೃಷ್ಟಿಯವು!! ಈತನ ಬರಹದಿಂದ ನಮಗೆ ನಿಜವಾಗಿ ಪ್ರಯೋಜನವಾಗುವದು.” ಈ ಮಾತಿಗೆ ತಾನಾಜಿಯು—“ಒಹೋ, ಪ್ರಯೋಜನವಾಗದೇನು ಮಾಡೀತು? ಅವನು ತನ್ನ ಪತ್ರದಲ್ಲಿ ಪ್ರತಿಯೊಂದು ಸಂಗತಿಯನ್ನು ನಮಗೆ ಉಪಯೋಗವಾಗುವಂತೆಯೇ ಸ್ಪಷ್ಟವಾಗಿ ವಿವರಿಸಿದ್ದಾನೆ. ಅವನು ತನ್ನ ಪತ್ರದಲ್ಲಿ ಬರೆದ ಪ್ರಕಾರ ಕೀರ್ತಿಸಿಂಗನು ಜಯಸಿಂಗನ ಪ್ರತಿಯೊಂದು ಮುಕ್ಕಾಮಿನಲ್ಲಿ ನಡೆದ ವಿಶೇಷ ಸಂಗತಿಗಳನ್ನು ಆಗಾಗ್ಗೆ ಬರೆದರೆ ನಮ್ಮ ಕಾರ್ಯಕ್ಕೆ ಎಷ್ಟು ಅನುಕೂಲವಾಗುವದು! ಶತ್ರುಗಳ ಸೈನ್ಯದಲ್ಲಿ ನಡೆಯುವ ಪ್ರತಿಯೊಂದು ಸಂಗತಿಯು ನಮಗೆ ತಿಳಿಯಲಿಕ್ಕೆ ಬೇಕು. ನನಗೆ ಅಪ್ಪಣೆಯಾದರೆ ನಾನು ಯಾವದಾದರೂ ಒಂದು ಉಪಾಯದಿಂದ ಹಗೆಗಳ ಛಾವಣಿಯಲ್ಲಿ ಹೊಕ್ಕು ಸಾಧಿಸಿದ ಮಟ್ಟಿಗೆ ಅಲ್ಲಿ ನಡೆಯುವ ಸಂಗತಿಗಳನ್ನು ಅರಿತುಕೊಂಡು ನಿಮಗೆ ತಿಳಿಸುವೆನು. ಅಡಿಗಡಿಗೆ ಅವರಲ್ಲಿ ನಡೆಯುವ ಸಂಗತಿಗಳೆಲ್ಲ ನಮಗೆ ತಿಳಿಯುತ್ತ ಹೋದರೆ ನಮಗೆ ಪ್ರಯೋಜನವಾಗುವದೆಂಬದರಲ್ಲಿ ಸಂದೇಹವಿಲ್ಲ. ಎರಡನೇ ಪ್ರಕರಣದಲ್ಲಿ ವಿವರಿಸಿದ ಇಬ್ಬರು ಪ್ರವಾಸಿಗಳಲ್ಲಿ ಒಬ್ಬರು ಶಿವಾಜಿಮಹಾರಾಜರು, ಇನ್ನೊಬ್ಬನು ತಾನಾಜಿಯಾಗಿದ್ದರೆಂಬದನ್ನು ಹೇಳುವ ಕಾರಣವಿಲ್ಲ.

ತಾನಾಜಿಯು ಆಡಿದ ಮಾತುಗಳನ್ನು ಕೇಳಿ ಮಹಾರಾಜರು ಮುಗುಳುನಗೆ ನಕ್ಕು:—ಯಾವದೇ ಕೆಲಸವಿರಲಿ, ಸೋಗುಹಾಕಿಕೊಂಡು ಸುದ್ದಿ ತರಲಿಕ್ಕೆ ಹೋಗಲು ನಮ್ಮ ಈ ಗೃಹಸ್ಥನು ಒಂಟಿಕಾಲಮೇಲೆ ಸಿದ್ಧನಾಗಿರುವನು. ಶತ್ರುಗಳ ಸೈನ್ಯದಲ್ಲಿ ಗುಪ್ತಚಾರನಾಗಿ ಸಂಚರಿಸುವಾಗ ಅಕಸ್ಮಾತ್ತಾಗಿ ತನ್ನ ರಹಸ್ಯವು ಹೊರಬಿದ್ದು ಶತ್ರುಗಳಿಗೆ ಗೊತ್ತಾದರೆ, ಮುಂದೆ ತನ್ನ ಗತಿ ಏನಾದೀತೆಂಬ ಕಲ್ಪನೆಯು ಸಹ ಈ ಗೃಹಸ್ಥನ ಮನಸಿನಲ್ಲಿ ಬರುವದಿಲ್ಲ!! ಇಂಥವನಿಗೆ ಇನ್ನೇನು ಹೇಳಬೇಕು?

ತಾನಾಜಿ:—ಹೇಳತಕ್ಕದ್ದೇನು? “ಹೋಗು ನಿನಗೆ ತಿಳಿದಂತೆ ಮಾಡು” ಎಂದು ಅಪ್ಪಣೆಯನ್ನು ಕೊಟ್ಟರಾಯಿತು. ಅಕಸ್ಮಾತ್ತಾಗಿ ಸಂಕಟದಲ್ಲಿ ಸಿಕ್ಕು ಸತ್ತರೆ, ಇಹಲೋಕದ ಯಾತ್ರೆಯು ಮುಗಿಯಿತು. ನನ್ನಂಥ ನೂರಾರು ಜನ ಸೇವಕರು ಸ್ವಾಮಿಕಾರ್ಯಕ್ಕೆ ಸಿದ್ಧರಾಗಿರುವರು. ಒಂದುವೇಳೆ ಕಾರ್ಯವನ್ನು ನೆರವೇರಿಸಿಕೊಂಡು ಬಂದರೆ ಪುನಃ ಮತ್ತೊಂದು ಕಾರ್ಯಕ್ಕೆ ಟೊಂಕಾ ಕಟ್ಟುವೆನು.

ಮಹಾರಾಜ:—ಓಹೋ! ಅಪ್ಪಣೆಯು ಸಲುವಾಗಿ ನಮ್ಮ ದಾರೀ ನೋಡುತ್ತೀರಲ್ಲವೆ? ಇದೊಂದು ನಮ್ಮ ಮೇಲೆ ದೊಡ್ಡ ಉಪಕಾರವೆಂತಲೇ ತಿಳಿಯತಕ್ಕದ್ದು.

ಈ ಮೇರೆಗೆ ಇವರಿಬ್ಬರು ಮಾತಾಡುತ್ತಿರುವಾಗ ಸ್ವಾಮಿಗಳವರು ಮನಸಿನೊಳಗೆ ಏನೋ ಆಲೋಚನೆ ಮಾಡುತ್ತಿರುವಂತೆ ತೋರಿತು. ಅವರ ಲಕ್ಷ್ಯವು ಇವರ ಮಾತಿನ ಕಡೆಗೆ ಇದ್ದಿಲ್ಲ. ಅದರಂತೆ ಶ್ರೀಧರಸ್ವಾಮಿಗಳಾದರೂ ಇನ್ನೂ ವರೆಗೆ ಏನೂ ಮಾತಾಡಿದ್ದಿಲ್ಲ ಈ ಕಾಲಕ್ಕೆ ಅವರ ಮನಸ್ಸಾದರೂ ಕುತ್ತೊಂದು ವಿಷಯವನ್ನು ಆಲೋಚಿಸುವದರಲ್ಲಿ ತೊಡಗಿದಂತೆ ಕಾಣುತ್ತಿತ್ತು. ಬಹಳ ಹೊತ್ತಿನ ವರೆಗೆ ಸಮರ್ಥರು ಆಲೋಚಿಸಿ ಬಳಿಕ ಒಮ್ಮೆಲೆ:—ಶಿವಬಾ, ಈ ರಾಮಸಿಂಗನಿಂದ ನಿನಗೆ ಬಹಳ ಉಪಯೋಗವಾಗುವದು. ರಘುವೀರನು ಕಾಲ ಕಾಲಕ್ಕೆ ನಮ್ಮ ಹಿತದ ಸಲುವಾಗಿಯೇ ನಮ್ಮ ಮೇಲೆ ಅನೇಕ ಪ್ರಸಂಗಗಳನ್ನು ತರುವನು. ಆದರೆ ಆ "ಹಿತಗಳು ಯಾವವು? ಅವು ನಮಗೆ ಹೇಗೆ ಆಗುವವು? ಇದು ಮಾತ್ರ ಒಮ್ಮೊಮ್ಮೆ ಗೊತ್ತಾಗುವದು; ಒಮ್ಮೊಮ್ಮೆ ಗೊತ್ತಾಗುವದಿಲ್ಲ." ಈಗ ಒದಗಿದ ಪ್ರಸಂಗವು ಅದೇ ತರದ್ದಿರುವದು. ಈ ಪ್ರಸಂಗದಿಂದ ನಮಗೆ ಕೆಲವು ಕಾಲದ ವರೆಗೆ ಬಹಳ ತೊಂದರೆಯಾದರೂ, ನಿರಾಶೆಯು ಉತ್ಪನ್ನ ವಾದರೂ ಈ ತೊಂದರೆ, ನಿರಾಶೆಗಳು ಅಲ್ಪಕಾಲಿಕವೆಂದು ತಿಳಿಯತಕ್ಕದ್ದು. ಇದ ರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಎಲ್ಲ ತೊಂದರೆಗಳೂ ನೀಗಿ ಹೋಗಿ ಒಳಿತಾಗು ವದು. ಪುರಶ್ಚರಣವು ನಡೆದಾಗ ನನಗೆ ಮೂರು ಸಾರೆ ದೃಷ್ಟಾಂತವಾದದ್ದೇನು ನಿರರ್ಥಕವಲ್ಲ. ಆದರಿಂದ ಸಂಕಟವು-ಭಯಂಕರ-ಸಂಕಟವು ಬರುವದೆಂದು ಸೂಚಿತವಾಗಿರುತ್ತದೆ. ಆದರೆ ಅದರಿಂದ ನೀವು ನಿರಾಶರೂ, ಹತವೀರ್ಯರೂ, ಹತಧೈರ್ಯರೂ ಆಗುವ ಕಾರಣವಿಲ್ಲೆಂಬ ಸಂಗತಿಯೂ ಅದರ ಸಂಗಡಲೇ ಸೂಚಿತವಾಗಿರುವದೆಂಬದನ್ನು ಮರೆಯಬಾರದು.

ಮಹಾರಾಜ:—ತಾವು ಸ್ವತಃ ಹೀಗೆ ಆಶ್ವಾಸನವನ್ನು ಕೊಟ್ಟ ಮೇಲೆ ನಾವು ನಿರಾಶರೂ, ಹತವೀರ್ಯರೂ, ಹತಧೈರ್ಯರೂ ಯಾಕಾಗೋಣ? ಈ ಶಬ್ದಗಳು ಸಹ ನಮ್ಮ ಮನಸಿನಲ್ಲಿ ಬರುವದಿಲ್ಲ. ಇನ್ನು ಹೆಚ್ಚಿನ ವಿಚಾರ ವೆಲ್ಲಿಯದು?

ಸ್ವಾಮಿ:—ಶಾಬಾಸ್, ಇದ್ದರೆ ಇಂಥ ವೃತ್ತಿಯೇ ಇರಬೇಕು. ಸದ್ಯಕ್ಕೆ ನಮಗೆ ಹೆಚ್ಚಿಗೇನೂ ವಿಚಾರಮಾಡಲಿಕ್ಕೆ ಬರುವಂತಿಲ್ಲ. ಮುಂದೆ ಪ್ರಸಂಗಗಳು

ಹೇಗೆ ಬರುವವೆಂಬ ಒಗ್ಗೆ ಆಗಾಗ್ಗೆ ಸುದ್ದಿಗಳನ್ನು ತಿಳಕೊಂಡು ಅದರಂತೆ ನಮ್ಮ ವರ್ತನವನ್ನು ಇಡತಕ್ಕದ್ದು. ನಿನಗೆ ನಮ್ಮ ಉಪಯೋಗವು ಕೇವಲ ಆಶೀರ್ವಾದದ ಪೂರ್ತಿಯೇ ಸರಿ. ನಾವು ಒಳ್ಳೇ ಮುತ್ಸದ್ದಿಗಳೂ ಅಲ್ಲ, ಯೋಧಕರೂ ಅಲ್ಲ; ಆದರೆ ಕೈಕೊಂಡ ಕಾರ್ಯದಲ್ಲಿ ನಿನಗೆ ಯಶದೊರೆಯಬೇಕೆಂದು ತಪಶ್ಚರ್ಯವನ್ನು ಮಾಡತಕ್ಕವರಾಗಿದ್ದೇವೆ. ಆ ತಪಶ್ಚರ್ಯದಿಂದ ಪರಮೇಶ್ವರನ ಕೃಪೆಯಾದರೆ ನಿನ್ನ ಕಾರ್ಯಸಿದ್ಧಿಗೆ ಅದರ ಉಪಯೋಗವಾಗುವದು. ಇದಕ್ಕೂ ಹೆಚ್ಚಿಗೆ ನಮ್ಮಿಂದ ನಿನಗೆ ಏನು ಸಹಾಯವಾಗುವದು? ನೀನು ಆಗಾಗ್ಗೆ ಇಲ್ಲಿಗೆ ಬಂದು ನಮಗೆ ಎಲ್ಲ ಸಂಗತಿಗಳನ್ನು ಹೇಳುತ್ತೀ, ನಮ್ಮ ಆಲೋಚನೆಯನ್ನು ಕೇಳುತ್ತೀ; ಇದರಿಂದ ನಮಗೆ ಬಹಳ ಸಮಾಧಾನವಾಗುತ್ತದೆ. ಆದರೆ ನಿಜವಾಗಿ ಕಾರ್ಯಮಾಡುವ ಪ್ರಸಂಗವು ಒದಗಿದಾಗ ಎಲ್ಲ ಸಂಗತಿಗಳ ವಿಚಾರವನ್ನು ನಿನ್ನಷ್ಟಕ್ಕೆ ನೀನೇ ಮಾಡಿಕೊಳ್ಳಬೇಕಾಗುವದು................

"ಆ ವಿಚಾರವಾದರೂ ತಮ್ಮ ಕೃಪೆಯಿಂದಲೇ ಅಲ್ಲವೆ?" ಎಂದು ಶಿವಾಜಿ ಮಹಾರಾಜರು ಮುಗುಳುನಗೆಯಿಂದ ನಡುವೇ ಅಂದರು.

ಈ ಪ್ರಕಾರ ಹಲವು ಬಗೆಯ ಸಂಭಾಷಣಗಳು ನಡೆದಿರಲು, ರಾತ್ರಿಯು ಕಳೆದುಹೋಯಿತು. ನಿದ್ದೆಯ ಕಲ್ಪನೆಯು ಸಹ ಯಾರ ಮನಸ್ಸಿನಲ್ಲಿಯೂ ಬರಲಿಲ್ಲ. ಅರುಣೋದಯವಾಗಿ ಪೂರ್ವದಿಕ್ಕಿಗೆ ಸೂರ್ಯನ ಕೆಂಪು ಪ್ರಕಾಶವು ಹೊಳೆಯಹತ್ತಿತು. ಆಗ "ಇನ್ನು ನಾವು ಏಳತಕ್ಕದ್ದು; ಸ್ನಾನ-ಸಂಧ್ಯಾದಿ ಕಾರ್ಯಗಳಿಗೆ ಹೊತ್ತಾಯಿತು" ಎಂದು ಶ್ರೀಧರಸ್ವಾಮಿಗಳ ಮನಸಿಗೆ ಹೊಳೆದು, ಆಗ ಅವರು:—ಓಹೋ! ಮಾತುಮಾತಾಡುತ್ತ ವೇಳೆಯು ಎಷ್ಟು ಬೇಗನೆ ಹೋಯಿತು? ಈಗ ಸ್ನಾನದ ಹೊತ್ತಾಯಿತು. ಇಷ್ಟು ಹೊತ್ತಿನವರೆಗೆ ನಾನು ನಿಮ್ಮ ಮಾತುಗಳನ್ನು ತಟಸ್ಥ ವೃತ್ತಿಯಿಂದ ಕೇಳುತ್ತ ಕುಳಿತಿದ್ದೆನು. ನಿಮ್ಮೆಲ್ಲರ ಅನುಮತಿಯಿದ್ದರೆ ನಾನು ಜಯಸಿಂಗನ ಛಾವಣಿಯಲ್ಲಿ ಹೊಕ್ಕು ಅಲ್ಲಿ ಯಾವ ಪ್ರಸಂಗಗಳು ಜರಗುವವು? ಯಾವ ಯಾವ ಧೋರಣದಿಂದ ಯಾವ ಯಾವ ಕಾರ್ಯಗಳು ಮಾಡಲ್ಪಡುತ್ತಿರುವವು? ಇವುಗಳನ್ನು ಗುಪ್ತವಾಗಿ ತಿಳಿದುಕೊಂಡು ನಿಮಗೆ ತಿಳಿಯುವಂತೆ ವ್ಯವಸ್ಥೆ ಮಾಡುವೆನು. ತಾನಾಜಿಯಂತೆ ನಾನೇನು ಶೂರನಲ್ಲ; ಮುತ್ಸದ್ದಿಯೂ ಅಲ್ಲ; ಆದರೆ ಈ ಗುಪ್ತಚಾರನ ಕೆಲಸವನ್ನು ಮಾತ್ರ ಯಾರಿಗೂ ಗೊತ್ತುಹತ್ತದಂತೆ ನೆರವೇರಿಸುವೆನು. ಇದಕ್ಕೆ ನಿಮ್ಮ ಅಪ್ಪಣೆಯು ಮಾತ್ರ ಬೇಕು. ಈಗ ಜಯಸಿಂಗನು ಎಲ್ಲಿಗೆ ಬಂದಿರಬಹುದೆಂಬದು

ಈ ಪತ್ರದಿಂದ ಚೆನ್ನಾಗಿ ತಿಳಿಯುವಂತಿರುವದು. ಎಷ್ಟು ಅವಸರದಿಂದಲೂ, ಒತ್ತರದಿಂದಲೂ ಪ್ರವಾಸಮಾಡಿದರೂ ಪ್ರಚಂಡವಾದ ಸೈನ್ಯದೊಂದಿಗೆ ಅವನು ಪ್ರವಾಸಮಾಡತಕ್ಕವನಷ್ಟೇ? ಆದರೆ ನಾನು ಕೈಯಲ್ಲಿ ಒಂದು ಕಮಂಡಲು ತಕ್ಕೊಂಡು ಪ್ರವಾಸಮಾಡತಕ್ಕವನು. ನಾನು ಬರ್ಹಾಣಪುರದ ಹತ್ತರವಾಗಲಿ, ಅಲ್ಲಿಂದ ಔರಂಗಾಬಾದಕ್ಕೆ ಹೋಗುವ ದಾರಿಯ ಮೇಲಾಗಲಿ ಜಯಸಿಂಗನ ಸೈನ್ಯ ವನ್ನು ನಿಶ್ಚಯವಾಗಿ ಕೂಡಿಕೊಳ್ಳುವೆನು. ಆಗಾಗ್ಗೆ ಅಲ್ಲಿ ನಡೆಯುವ ಸಂಗತಿಗ ಳನ್ನು ತಿಳಕೊಂಡು ತಮ್ಮ ಕಡೆಗೆ ಕಳಿಸುವ ವ್ಯವಸ್ಥೆಯನ್ನು ಮಾಡುವೆನು. ಏನಾ ದರೂ ಹಂಚಿಕೆಮಾಡಿ ಆ ಸೈನಿಕರೊಳಗೆ ಕೂಡಿಕೊಂಡು ಸುದ್ದಿಗಳನ್ನು ತಿಳಿಯು ವೆನು. ಆ ಸುದ್ದಿಗಳನ್ನು ನಿಮ್ಮ ಕಡೆಗೆ ಕಳಿಸುವ ವ್ಯವಸ್ಥೆಯನ್ನು ಹೇಗೆ ಮಾಡು ತ್ತೇನೆಂಬದನ್ನು ಈಗಲೇ ಹೇಳಲಾರೆನು. ಇದಕ್ಕೆ ನಿಮ್ಮ ಅಪ್ಪಣೆಯನ್ನೂ, ಕೃಪೆ ಯನ್ನೂ ಮಾತ್ರ ಅಪೇಕ್ಷಿಸುತ್ತೇನೆ.

ಶ್ರೀಧರಸ್ವಾಮಿಗಳು ಈ ಮಾತುಗಳನ್ನು ಒಳ್ಳೇ ಅಂತಃಕರಣ ಪೂರ್ವಕ ವಾಗಿ ಮಾತಾಡುತ್ತಿದ್ದರೆಂಬದು ಅವರ ಪ್ರತಿಯೊಂದು ಶಬ್ದದ ಉಚ್ಚಾರದಿಂ- ದಲೂ ಮುಖಮುದ್ರೆಯಿಂದಲೂ ತಿಳಿಯುವಂತಿತ್ತು. ಆದರೆ ಸಮರ್ಥರು ಈ ಮಾತುಗಳನ್ನು ಕೇಳಿ ನಕ್ಕು—"ಹುಟ್ಟಗುಣವು ಏನು ಮಾಡಿದರೂ ಬದಲಾಗು ವದಿಲ್ಲ"ಂಬ ಮಾತು ಸುಳ್ಳಲ್ಲ. ಎಲಾ, ನೀನು ಸರ್ವಸಂಗಪರಿತ್ಯಾಗಮಾಡಿ ಗಾಯತ್ರೀ ಪುರಶ್ಚರಣಮಾಡಬೇಕೆಂದು ಇಲ್ಲಿಗೆ ಬಂದೆ; ಇಷ್ಟರಲ್ಲಿ ನಿನ್ನ ಮನಸಿಗೆ ಅದು ಬೇಡಾಯಿತೆ? ನೀನು ಬಂದಕೂಡಲೆ ನಿನಗೆ ಪುರಶ್ಚರಣಕ್ಕೆ ಕೂಡ್ರಲು ಅಪ್ಪಣೆಯನ್ನು ಕೊಡದೆ ಇದ್ದದ್ದೇ ಒಳ್ಳೇದಾಯಿತು. ಇನ್ನು ನಿನ್ನ ಮನಸ್ಸು ಇಂಥ ವಿಚಾರಗಳಲ್ಲಿ ತೊಡಗಿರುವಾಗ ಗಾಯತ್ರೀ ಪುರಶ್ಚರಣದ ಕಡೆಗೆ ಹೇಗೆ ಏಕಾಗ್ರವಾಗಬೇಕು? ಮನಸು ಚಂಚಲವಾಗಿದ್ದ ಮೇಲೆ ಪುರಶ್ಚರಣವು ಹೇಗೆ ಸಾಧಿಸುವದು? ನಿನ್ನ ಮನಸಿನ ಸ್ಥಿತಿಯು ನನಗೆ ತಿಳಿದದ್ದು ಒಳ್ಳೇದಾಯಿತು. ಶಿವಬಾ, ಈ ರಾಜೇಶ್ರೀಗಳನ್ನು ನಿನ್ನ ಸಂಗಡ ಕರಕೊಂಡು ಹೋಗು. ರಾಜ ಕೀಯ ಸಂಗತಿಗಳಲ್ಲಿ ಧಡಪಡಿಸುವ ಈತನ ಇಚ್ಛೆಗಳೆಲ್ಲ ಒಮ್ಮೆ ಪೂರ್ಣವಾಗಲಿ. ಅವುಗಳಿಗೆ ಬೇಸತ್ತು ಬಂದ ಮೇಲೆ ಇವನನ್ನು ಮಠದಲ್ಲಿ ತೆಗೆದುಕೊಳ್ಳುವೆನು. ಅಲ್ಲಿಯ ತನಕ ಈತನು ಇಲ್ಲಿ ಇರುವದು ಸಹ ಒಳಿತಲ್ಲ. ಇವನು ಪರರ ಮನ ಸ್ಸನ್ನು ಚಂಚಲಗೊಳಿಸುವನು. ಏನು ಶ್ರೀಧರಸ್ವಾಮಿಗಳೇ, ನಾನನ್ನುವದು ಸಟಿಯೋ ದಿಟವೋ; ನೀವೇ ಹೇಳಿರಿ.

ಸಮರ್ಥರು ಈ ಮಾತುಗಳನ್ನೆಲ್ಲ ಮುಗುಳುನಗೆಯಿಂದಲೇ ಆಡುತ್ತಿದ್ದರು. ಆದರೆ ಈ ಮಾತುಗಳನ್ನು ಕೇಳಿ ಶ್ರೀಧರಸ್ವಾಮಿಗಳು ನಾಚಿಕೆ ಪಟ್ಟವರಂತೆ ಮೋರೆಯನ್ನು ಕೆಳಗೆ ಹಾಕಿದರು. ಇದನ್ನೆಲ್ಲ ಕಂಡು ಮಹಾರಾಜರೂ ತಾನಾಜಿಯೂ ಮುಗುಳುನಗೆ ನಗುತ್ತಿದ್ದರು.

ಶ್ರೀಧರಸ್ವಾಮಿಯು ಕೆಳಗೆ ಮೋರೆಮಾಡಿಕೊಂಡು ಸುಮ್ಮನೆ ಕುಳಿತಿರುವದನ್ನು ಕಂಡು, ಸಮರ್ಥರು:—ಎಲಾ, ಹುಚ್ಚಾ, ನಿನಗೆ ಇಷ್ಟು ತಿಳಿಯಲಿಲ್ಲವೆ? ನಿನ್ನಿಂದ ಈ ತರದ ಕಾರ್ಯಭಾಗಗಳು ನೆರವೇರತಕ್ಕವಿರುವವೆಂತಲೇ ನಾನು ನಿನಗೆ ಪುರಶ್ಚರಣಕ್ಕೆ ಅಪ್ಪಣೆಯನ್ನು ಕೊಡಲು ತಡಮಾಡಿರುವೆನು. ನಿನ್ನ ಮನಸ್ಸಿನಲ್ಲಿ ಬಂದ ವಿಚಾರವು ಯೋಗ್ಯವಾಗಿರುವದು. ಹೋಗು, ನಿನ್ನ ಚಾತುರ್ಯದ ಉಪಯೋಗವನ್ನು ಮಾಡು ಜಯಸಿಂಗನ ದಂಡಿನಲ್ಲಿ ಹೋಗಿ ಸೇರು. ನಿನಗೆ ತಿಳಿದ ಸಂಗತಿಗಳನ್ನು ಶಿವಬಾನಿಗೆ ತಿಳಿಸು. ಇಷ್ಟು ಕೆಲಸಗಳನ್ನು ಮಾಡಿದೆಯೆಂದರೆ ನಿನ್ನ ಈ ಬಗೆಯ ಇಚ್ಛೆಗಳೆಲ್ಲ ನಷ್ಟವಾಗುವವು. ಆ ಬಳಿಕ ನೀನು ಪುರಶ್ಚರಣಕ್ಕೆ ಕೂಡಲು ತಕ್ಕವನಾಗುವೆ, ಎಂದು ಹೇಳಿದರು.

ಸಮರ್ಥರು ಈ ಮಾತುಗಳನ್ನು ನಿಜವಾಗಿಯೇ ಆಡುತ್ತಿರುವರೋ ತನಗೆ ಉಪಹಾಸಮಾಡಬೇಕೆಂದು ಆಡುತ್ತಿರುವರೋ ಎಂಬದು ಶ್ರೀಧರಸ್ವಾಮಿಗೆ ತಿಳಿಯದಂತಾಯಿತು. ಆದಬಂದ ಅವನು ಸಾವಕಾಶವಾಗಿ ಮೋರೆಯನ್ನು ಮೇಲಕ್ಕೆತ್ತಿ ಕಳ್ಳತನದಿಂದ ಸಮರ್ಥರ ಮೋರೆಯನ್ನು ನೋಡಿದನು. ಸಮರ್ಥರ ಲಕ್ಷವು ಅವನ ಕಡೆಗೆ ಇತ್ತೇ ಇತ್ತು. ಅವರು ಕೂಡಲೆ ಅವನ ಮನಸಿನೊಳಗಿನ ವಿಚಾರಗಳನ್ನು ತಿಳಕೊಂಡು—ಛೀ ಹುಚ್ಚಾ, ನಿನಗೆ ನಾನು ಚೇಷ್ಟೆಯನ್ನು ಯಾತಕ್ಕೆ ಮಾಡಲಿ? ನಿಜವಾಗಿಯೇ ಹೇಳುತ್ತೇನೆ. ನೀನು ಇನ್ನೂ ಕಚ್ಚಾಸ್ಥಿತಿಯಲ್ಲಿರುವೆಯೆಂದು ನಾನು ಹೇಳುವದು ಸುಳ್ಳಲ್ಲ. ನಿನ್ನಿಂದ ಏನೋ ಅಲ್ಪ ಸ್ವಲ್ಪ ಕಾರ್ಯಭಾಗವು ಆಗತಕ್ಕದ್ದಿರುವದೆಂತಲೇ ನಿನ್ನ ಮನಸಿನಲ್ಲಿ ಈ ವಿಚಾರಗಳು ಬರುತ್ತಿರುವವು. ಆದಕಾರಣ ನಿನ್ನ ಸೂಚನೆಯ ಪ್ರಕಾರ ಕಾರ್ಯವನ್ನು ಮಾಡಲಿಕ್ಕೆ ನಾನು ನಿನಗೆ ಅಪ್ಪಣೆಯನ್ನು ಕೊಡುತ್ತೇನೆ. ಅವಶ್ಯವಾಗಿ ಮಾಡು. ಈಗಲೇ ಹೊರಟು ಜಯಸಿಂಗನ ಸೈನ್ಯಕ್ಕೆ ಕೂಡಿಕೋ, ಎಂದು ಹೇಳಿದರು.

ಈಗ ಮಾತ್ರ ಸಮರ್ಥರ ಮಾತು ನಿಜವೆಂದು ಶ್ರೀಧರಸ್ವಾಮಿಯು ನಂಬಿ ಮೇಲೆ ಮೋರೆಮಾಡಿ ನೋಡಹತ್ತಿದನು. ಮಹಾರಾಜರು ಸಹ ಅವನಿಗೆ:—

ನೀವು ಇಂಥ ಕಾರ್ಯವನ್ನು ವಹಿಸಿದರೆ ಬಹಳ ಒಳ್ಳೇದಾಗುವದು. ನಿಮ್ಮಂಥ ಚತುರ ಬುದ್ಧಿಯ ಚಾರನು ಸಿಕ್ಕಬಳಿಕ ಕೇಳುವದೇನು? ಅದರಲ್ಲಿಯೂ ರಾಮ ಸಿಂಗನು ತನ್ನ ಪತ್ರದಲ್ಲಿ ಬರೆದ ಕೀರ್ತಿಸಿಂಗನು ನಿಮಗೆ ಭೆಟ್ಟಿಯಾಗಿ ಅವನೂ ನೀವೂ ಒಮ್ಮನಸಿನವರಾದರೆ ಬಹಳ ಒಳ್ಳೇದಾಗುವದು. ಎಷ್ಟೋ ಕೆಲಸಗಳನ್ನು ಮಾಡುವಾಗ ಅವನೊಬ್ಬನಿಗೇ ಬಹಳ ತೊಂದರೆಯಾಗುವಂಥ ಪ್ರಸಂಗಗಳಲ್ಲಿ ನೀವು ಅಲ್ಲಿಯೇ ಇರುವದರಿಂದಲೂ ಅವನಿಗೆ ಭೆಟ್ಟಿಯಾಗುವದರಿಂದಲೂ ಆ ಕಾರ್ಯ ಗಳು ಅವನಿಗೆ ಸುಲಭವಾಗುವವು. ಇನ್ನು ಈ ತಾನಾಜಿರಾಯರು ನಮ್ಮ ಬೇರೆ ಕೆಲಸಗಳಿಗೆ ಉಪಯೋಗವಾಗುವರು. ಈ ಪ್ರಕಾರ ಮಾತುಕಥೆಗಳಾದ ಬಳಿಕ ಎಲ್ಲರೂ ಏಕಾಂತದೊಳಗಿಂದ ಎದ್ದರು. ಸ್ನಾನಸಂಧ್ಯಾದಿ ನಿತ್ಯಕರ್ಮಗಳನ್ನು ತೀರಿಸಿಕೊಂಡರು. ಆ ಬಳಿಕ ಭೋಜನರೂಪದಿಂದ ಪ್ರಸಾದಗ್ರಹಣವನ್ನು ಮಾಡಿದರು. ವಿಜಾಪುರದಿಂದ ಬಂದ ಸರದಾರನು ಸಮರ್ಥರಿಗೆ ದಂಡವತ್ ನಮಸ್ಕಾರ ಮಾಡಿ, ಪ್ರಾರ್ಥಿಸಿದ್ದೇನಂದರೆ—"ದೀನದಾಸನು ತಮ್ಮ ಕೃಪಾಛತ್ರ ದಲ್ಲಿ ಬಂದಿರುವನು. ಈತನನ್ನು ತಮ್ಮ ಆಶ್ರಯದಲ್ಲಿ ತಕ್ಕೊಳ್ಳಬೇಕು. ಇಲ್ಲಿಂದ ತಿರುಗಿ ಹೋಗಲಿಕ್ಕೆ ಮನಸಿಲ್ಲ. ತಾವು ಹೇಳಿದ ಸೇವೆಯನ್ನು ಮಾಡಲು ನಾವಿ ಬ್ಬರೂ ಸಿದ್ಧರಾಗಿದ್ದೇವೆಂಬುದನ್ನು ಸರ್ವಜ್ಞರಾದ ತಮಗೆ ಹೇಳುವಕಾರಣವಿಲ್ಲ. ತಾವು ನಮ್ಮ ಹೃದ್ಗತವನ್ನು ತಿಳಕೊಂಡಿರುತ್ತೀರಿ. ನನ್ನ ಮಾತೃಶ್ರೀಯವರು ವೃದ್ಧರಾಗಿರುವರು. ಅವರನ್ನು ಇಲ್ಲಿಗೇ ಕರಕೊಂಡು ಬರುವದಕ್ಕೆ ಅಪ್ಪಣೆ ಯನ್ನಂತೂ ಕೊಟ್ಟೇಇರುವಿರಿ. ಇನ್ನು ಏನು ಅಪ್ಪಣೆಯಾಗುವದೋ ಅದ ರಂತೆ ನಡೆಯಲು ನಾನು ಸಿದ್ಧನಿದ್ದೇನೆ.

ಸಮರ್ಥರು ಅವನನ್ನು ಮೇಲಕ್ಕೆತ್ತಿ, ತಮ್ಮ ಹತ್ತರ ಕರಕೊಂಡು— ತಮ್ಮಾ, ನೀನು ಅಂದದ್ದೇ ನಿಜವು. ಈಗ ನೀನು ತಿರುಗಿ ಹೋಗಬೇಡ. ನಿನ್ನ ಮಾತೃಶ್ರೀಯವರನ್ನು ಇಲ್ಲಿಗೆ ಕರೆಯಿಸುವ ವ್ಯವಸ್ಥೆಯನ್ನು ಮಾಡುವೆವು. ನಿನ್ನಿಂದ ಅಲ್ಪ ಸ್ವಲ್ಪ ಸ್ವರಾಜ್ಯಸೇವೆಯು ಘಟಿಸತಕ್ಕದ್ದಿರುವದು. ಶಿವಬಾನು ನಿನ್ನ ಉಪಯೋಗವನ್ನು ಮಾಡಿಕೊಳ್ಳುವನು. ನಿನ್ನಿಂದ ಯಾವ ಕಾರ್ಯ ವಾದೀತೆಂಬದರ ಪರೀಕ್ಷೆಯನ್ನು ಶಿವಬಾನು ಮಾಡುವನು. ನೀನು ಅವನ ಅಪ್ಪಣೆಯನ್ನು ಪಾಲಿಸು. ಅವನ ಮನಸಿನ ವಿರುದ್ಧವಾಗಿ ಅಥವಾ ಅವನಿಗೆ ಕೇಳದೆ ಯಾವ ಕೆಲಸವನ್ನೂ ಮಾಡಬೇಡ. ಶಿವಬಾ, ನೀನು ಈತನನ್ನು ಜೀವದ ಮೇಲಿನ ಸಂಕಟದೊಳಗಿಂದ ಪಾರು ಮಾಡಿರುತ್ತೀ. ಅವನು ತನ್ನ

ಜೀವವನ್ನು ನಿನ್ನ ಅಧೀನ ಮಾಡಿದ್ದಾನೆ ಅವನಿಗೆ ಆಶ್ರಯ ಕೊಡು, ನಿನ್ನ ಕಾರ್ಯಕ್ಕೆ ಅವನ ಸಹಾಯವನ್ನು ತಕ್ಕೊ" ಎಂದಂದರು.

ಗೋಬ್ರಾಹ್ಮಣರ ಸಂರಕ್ಷಣ, ಹಿಂದುಧರ್ಮದ ಪ್ರತಿಪಾಲನ ಮಾಡುವ ಇಚ್ಛೆಯುಳ್ಳವರನ್ನು ಸಂಗ್ರಹಿಸಬೇಕೆಂದು ನನಗೆ ಈ ಮೊದಲೇ ಅಪ್ಪಣೆಯಾಗಿರುವದು. ಆ ಪ್ರಕಾರ ಇವರಿಗೆ ಆಶ್ರಯ ಕೊಡಬೇಕೆಂದು. ಪುನಃ ಹೇಳುವ ಕಾರಣವಿಲ್ಲ. ಬಾದಶಾಹೀ ಸತ್ತೆಯಿಂದ ನಮ್ಮ ಜನರಿಗೆ ಎಷ್ಟು ತೊಂದರೆಯಾಗುತ್ತಿರುವದೆಂಬದು ಇವರ ಅನುಭವಕ್ಕೂ ಬಂದಿರುವದು. ಆ ಜುಲುಮಿಯ ಅಧಿಕಾರವನ್ನು ತೆಗೆದು ಹಾಕಲು ಪ್ರಯತ್ನ ಮಾಡುವ ಜನರು ನಮಗೆ ಬೇಕೇಬೇಕು. ವಿಜಾಪುರದವರಂತೂ ನಮ್ಮನ್ನು ಗೋಳಾಡಿಸಿ ಬಿಟ್ಟಿರುವರು. ಬಾದಶಹನು ಒಳ್ಳೇ ಸೊಗಸುಗಾರನು; ಅದರಂತೆ ಅವನ ಜಾತಿಬಾಂಧವರೂ ಕೂಡ ನಡೆಯುವರು; ನಿಮ್ಮ ಉದಾಹರಣೆಯನ್ನೇ ತಕ್ಕೊಳ್ಳಿರಿ. ನೋಡಿರಿ, ಆ ನೀಚರು ವಿಜಾಪುರದಿಂದ ಹೇಗೆ ನಿಮ್ಮ ಬೆನ್ನುಹತ್ತಿ ಬಂದು ಹೊತ್ತು ಸಾಧಿಸಿ ನಿಮ್ಮ ಕುಟುಂಬದ ಮಾನಭಂಗಮಾಡಬೇಕೆಂದು ಹೊಂಚು ಹಾಕಿದ್ದರು! ನೀವು ಈಗ ವಿಚಾರ ಮಾಡಿದ್ದು ಯೋಗ್ಯವಿರುವದು; ನೀವು ನಮ್ಮ ಸಂಗಡ ಬರ್ರಿ. ನಾವು ಅನುಭವಿಸುವ ಕಷ್ಟಗಳನ್ನು ನೀವೂ ಅನುಭವಿಸಿರಿ. ಈಗ ನಡೆದ ಯುದ್ಧಗಳಲ್ಲಿ ನಮಗೆ ಜಯವಾದರೆ ಕೆಲವುಟ್ಟಿಗಾದರೂ ಔರಂಗಜೇಬನು ಸುಮ್ಮನೆ ಕೂಡ್ರುವನು. ವಿಜಾಪುರದವರೂ ಮೇಲಕ್ಕೆ ತಲೆಯೆತ್ತಲಿಕ್ಕಿಲ್ಲ. ಒಂದು ವೇಳೆ ನಮಗೆ ಸೋಲು ಬಂದರೆ ದೇವರ ಮನಸಿನಲ್ಲಿ ಬೇರೆ ಏನೋ ವಿಚಾರಗಳು ಇರುವವೆಂದು ತಿಳಿದು ನಾವು ನಮ್ಮ ಪ್ರಯತ್ನಗಳನ್ನು ಯಥಾಪ್ರಕಾರವಾಗಿ ಮಾಡುತ್ತ ಇರೋಣ. ಪ್ರಯತ್ನ ಮಾಡುವದು ನಮ್ಮ ಕೆಲಸವು; ಸಾಧ್ಯಾಸಾಧ್ಯಗಳು ಈಶ್ವರಾಧೀನವಾದ ಸಂಗತಿಗಳು. ನಿರಾಶೆಯು ಮಾತ್ರ ಹಿತಕರವಲ್ಲ. ಅದರ ಗಾಳಿಯು ಸಹ ಸೋಂಕಕೂಡದು. ಈ ಪ್ರಕಾರ ನನಗೆ ಸಮರ್ಥರ ಉಪದೇಶವುಂಟು. ಇದನ್ನೇ ನಾನು ನನ್ನ ಜನರಿಗೆ ಅಗಾಗ್ಗೆ ಹೇಳುವೆನು. ಯಾವ ಕಾಲಕ್ಕೆ ನನ್ನ ಮನಸ್ಸು ನಿರಾಶೆಯಿಂದ ತೊಂದರೆಪಡುವದೋ ಆಗ ನಾನು ಸುಮ್ಮನೆ ಹೊರಟು ಇಲ್ಲಿಗೆ ಬರುವೆನು. ಇಲ್ಲಿಗೆ ಬಂದ ಕೂಡಲೆ ಈ ಸ್ಥಾನದ ದರ್ಶನಮಾತ್ರದಿಂದಲೇ ನಿರಾಶೆಯು ಸಂಪೂರ್ಣವಾಗಿ ನನ್ನನ್ನು ಬಿಟ್ಟು ತೊಲಗುವದು" ಈ ಪ್ರಕಾರ ಮಾತಾಡಿ ಮಹಾರಾಜರು ಎದ್ದು ನಿಂತರು. ಶ್ರೀಧರಸ್ವಾಮಿಗಳೂ ತಮ್ಮ ಸಿದ್ಧತೆಯನ್ನು ಮಾಡತೊಡಗಿ

ದರು; ತಾನಾಜಿಯು ಕುದುರೆಗಳಿಗೆ ಜೀನು ಹಾಕಿ ತರಲಿಕ್ಕೆ ಹೋದನು. ವಿಜಾಪುರದಿಂದ ಬಂದ ತರುಣ ಗೃಹಸ್ಥನು—"ನಾನು ಮಹಾರಾಜರ ಸಂಗಡ ಈಗಲೇ ಹೋಗತಕ್ಕದ್ದೇನು?" ಎಂದು ಸಮರ್ಥರಿಗೆ ಕೇಳಲು, ಅವರು ಈಗಲೇ ಬೇಡವೆಂದು ಆಜ್ಞಾಪಿಸಿದರು. ಆ ಬಳಿಕ ಮಹಾರಾಜರು, ತಾನಾಜಿ, ಶ್ರೀಧರಸ್ವಾಮಿ, ಮಹಾರಾಜರ ಸೇವಕರು. ಇಷ್ಟು ಜನರು ಅಲ್ಲಿಂದಹೊರಟು ನಡೆದರು.

---

## ೫—ಜೋಯಿಸನು.



ಮೊಗಲ ಸೈನ್ಯದ ಭಾವಣಿಯೆಂದರೆ ಸುಖೋಪಭೋಗದ ಆಗರವೇ ಆಗಿರುವದೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಸೈನ್ಯದ ಮುಖ್ಯಾಧಿಕಾರಿಗಳು ದಿಲ್ಲಿಯಲ್ಲಿ ಅಥವಾ ಆಗ್ರಾಪಟ್ಟಣದಲ್ಲಿರುವಾಗ ಅವರು ತಮ್ಮ ತಮ್ಮ ಮನೆಗಳಲ್ಲಿ ನಾನಾ ಪ್ರಕಾರದ ವಿಲಾಸಗಳಲ್ಲಿಯೇ ಮಗ್ನರಾಗಿರುತಿದ್ದರಲ್ಲದೆ ದಂಡಿನ ವಿಷಯವಾಗಿ ಎಚ್ಚರಪಡುತ್ತಿದ್ದಿಲ್ಲ. ದಂಡು ಹೊರಗೆ ಹೊರಟಿತೆಂದರೆ ಅವರು ಅನುಭೋಗಿಸುವ ಸುಖೋಪಭೋಗಕ್ಕೆ ಎಣೆಯೇ ಇಲ್ಲದಂತಾಗುವದು. ದಂಡಾಳುಗಳು ತಮ್ಮ ಇಚ್ಛೆಗೆ ಬಂದಂತೆ ವರ್ತಿಸುವರು; ಬೇಕಾದಷ್ಟು ಸುಲಿಗೆಗಳನ್ನು ಮಾಡುವರು; ಬೆಳೆದು ನಿಂತ ಪೈರನ್ನು ತುಳಿದು ಹಾಳುಮಾಡುವರು; ಇಂಥ ಕೆಲಸಗಳನ್ನೆಲ್ಲ ಮಾಡಲಿಕ್ಕೆ ತಮಗೆ ಒಂದುತರದ ಹಕ್ಕು ಉಂಟೆಂದು ಅವರು ಭಾವಿಸುವರು. ಈ ಬಗ್ಗೆ ಯಾರೂ ಅವರಿಗೆ ಅಡ್ಡಬರುವಂತಿದ್ದಿಲ್ಲ. ಹೀಗೆ ಯಾಕೆ ಎಂದು ಅವರನ್ನು ಯಾರೂ ಕೇಳುವವರಿಲ್ಲ; ಹೊಲದೊಳಗಿನ ಪೈರು ಹಾಳಾದರೆ, ಹೊಲದ ಒಡೆಯನು ಯಾರಿಗೆ ದೂರು ಹೇಳಬೇಕು? ಮತ್ತು ದೂರು ಹೇಳುವವನ ವಿಚಾರವನ್ನಾದರೂ ಯಾರು ಕೇಳುವರು? ದಂಡಿನ ಸಂಗಡ ಸುಖೋಪಭೋಗಕ್ಕೆ ಅನುಕೂಲವಾದ ಇಂಥದೊಂದು ಸಂಗತಿಯು ಇಲ್ಲವೆಂದು ಹೇಳಲಿಕ್ಕೆ ಬರುವಂತಿದ್ದಿಲ್ಲ. ಒಂದು ಪಟ್ಟು ಸೈನ್ಯವಿದ್ದರೆ ಹತ್ತುಪಟ್ಟು ಬಾಜಾರಬುಣುಗು; ಬಾಜಾರಬುಣುಗಿನಲ್ಲಿ ಇಂಥಿಂಥ ಪ್ರಕಾರದ ಮನುಷ್ಯರು ಇಲ್ಲವೆಂದು ಹೇಳಲಿಕ್ಕೆ ಬರುವಂತಿದ್ದಿಲ್ಲ. ಎಲ್ಲ ಪ್ರಕಾರದ ಮನುಷ್ಯರ ಸಂಗ್ರಹವು ಅದರಲ್ಲಿತ್ತು. ಸೈನ್ಯವು ಎಲ್ಲಿಯಾದರೂ ತಳವೂರಿದರೆ ತೀರಿತು. ಹಾಡೋಣ, ಬಾರಿಸೋಣ, ನಾಚು, ದೈತಕು, ಆಟನೋಟಗಳು, ತಮಾಸೆಗಳು ಇವೆಲ್ಲ ಸಂಗತಿಗಳು ಕೂಡಲೆ ಆರಂಭವಾಗುತ್ತಿದ [illegible] ಖೋಪಭೋಗದಿಂದ

ತುಂಬಿ ತುಳುಕುತ್ತಿರುವ ಈ ಸೈನ್ಯವು ಪ್ರವಾಸದಲ್ಲಿರುವ ಒಂದು ಪಟ್ಟಣವೇ ಆಗಿರುವದೆಂದು ನೋಡುವವರಿಗೆ ಒಡೆದು ಕಾಣುತ್ತಿತ್ತು. ಪಟ್ಟಣಗಳಲ್ಲಿರುವಾಗ ಜನರು ಏನಂದಾರೆಂಬ ಹೆದರಿಕೆಯ ಮೂಲಕವಾಗಿ ಈ ಸುಖೋಪಭೋಗವು ಇಷ್ಟು ಉಚ್ಛೃಂಖಲವಾಗಿ ನಡೆಯುತ್ತಿದ್ದಿಲ್ಲ; ಆದರೆ ಧಾರಾತೀರ್ಥದಲ್ಲಿ ದೇಹವನ್ನು ಅರ್ಪಿಸಿ ಪುಣ್ಯಪಡೆಯಬೇಕೆಂಬ ದೃಢನಿಶ್ಚಯದಿಂದ ಮನೆಬಿಟ್ಟು ಹೊರಗೆ ಹೊರಟ ಈ ವೀರಾಗ್ರೇಸರರಿಗೆ ಯಾರ ಅಂಜಿಕೆಯೂ ಇಲ್ಲದಂತಾಗಿತ್ತೆನ್ನಲಿಕ್ಕೆ ಅಡ್ಡಿಯಿಲ್ಲ. ಪ್ರಾಚೀನಕಾಲದಲ್ಲಿ ವಾಡಿಕೆಯಾಗಿ ಎಲ್ಲ ಸೈನ್ಯಗಳ ಸ್ಥಿತಿಯು ಹೀಗೇ ಇರುತ್ತಿತ್ತು; ಆದರೆ ಅದರಲ್ಲಿಯೂ ಮೊಗಲ ಸೈನ್ಯದ ಸ್ಥಿತಿಯು ಈ ವಿಷಯದಲ್ಲಿ ಬಹಳ ವಿಲಕ್ಷಣವಾದದ್ದಿತ್ತು. ದಂಡಿನೊಳಗಿನ ಪ್ರತಿಯೊಬ್ಬ ಮನುಷ್ಯನ ಮನಸ್ಸಿನಲ್ಲಿ ಮುಂದೆ ಬದುಕುವವರಾರು, ಸಾಯುವವರಾರು; ಇದ್ದಷ್ಟು ದಿವಸ ಉಂಡುಟ್ಟು ಸುಖದಿಂದ ಕಾಲಕ್ರಮಣ ಮಾಡಿದರಾಯಿತು, ಎಂಬ ವಿಚಾರಗಳೇ ಬರುತ್ತಿದ್ದವು.

ಮೇಲೆ ಸಾಮಾನ್ಯವಾಗಿ ಮೊಗಲ ಸೈನ್ಯದ ವಿಷಯವಾಗಿ ಹೇಳಲ್ಪಟ್ಟ ಸಂಗತಿಗಳೇ ಜಯಸಿಂಗನು ತನ್ನ ಸಂಗಡ ದಕ್ಷಿಣಕ್ಕೆ ತಂದ ದಂಡಿಗೂ ಹತ್ತುತ್ತಿದ್ದವು. ಸನ್ ೧೬೬೫ನೇ ಇಸವಿಯ ಜಾನೇವಾರಿ ತಿಂಗಳ ೯ನೇ ತಾರೀಖಿಗೆ ಜಯಸಿಂಗನ ಸೈನ್ಯವು ನರ್ಮದಾ ನದಿಯನ್ನು ದಾಟಿತು. ಅಲ್ಲಿ ಸ್ವಲ್ಪ ದಿವಸಗಳವರೆಗೆ ದಂಡು ತಳವೂರಿತ್ತು. ದಂಡು ತಳವೂರಿದಾಗ ಜಯಸಿಂಗನು ಸುಮ್ಮನೆ ಕೂಡ್ರುತ್ತಿದ್ದಿಲ್ಲ ಆ ಪ್ರಾಂತದ ಬೆಳೆಯು ಹ್ಯಾಗಿರುವದು? ಪ್ರಾಂತದ ಸಾಮಾನ್ಯ ಸ್ಥಿತಿಯು ಹ್ಯಾಗಿರುವದು? ಇದನ್ನೆಲ್ಲ ಲಕ್ಷಪೂರ್ವಕವಾಗಿ ನೋಡಿ ತನಗೆ ತಿಳಿದ ಸಂಗತಿಗಳನ್ನೆಲ್ಲ ಔರಂಗಜೇಬ ಬಾದಶಹನಿಗೆ ಕಳಿಸುತ್ತಿದ್ದನು. ಜಯಸಿಂಗನು ಹೀಗೆ ಉದ್ಯೋಗ ಮಾಡುತ್ತಿರುವಾಗ ಅವನ ದಂಡಿನವರು ತಮ್ಮ ಕಾಯಕವನ್ನು ನಡಿಸುತ್ತಿದ್ದರು. ಅವರು ಸುತ್ತುಮುತ್ತಲಿನ ಹಳ್ಳಿಪಳ್ಳಿಗಳಿಗೆ ಹೋಗಿ, ಮನಸೋಕ್ತವಾಗಿ ಸುಲಿಗೆಗಳನ್ನು ಮಾಡಿ ಪುನಃ ಛಾವಣಿಗೆ ಬಂದು ಸಭ್ಯಜನರಂತೆ ಕುಳಿತುಕೊಳ್ಳುವರು. ಬೇರೆ ಕೆಲವರು ಡೇರೆಗಳನ್ನೂ, ಗುಡಾರಗಳನ್ನೂ ಹೊಡೆದು ನೃತ್ಯ, ಗಾಯನ, ವಾದನಗಳಲ್ಲಿ ಕಾಲ ಕಳೆಯುವರು. ಸುಖೋಪಭೋಗಕ್ಕೆ ಮೆಚ್ಚಿದ ಜನರಿಗೆ ಅವರ ಸುಖೋಪಭೋಗದ ಸಾಧನಗಳನ್ನು ಒದಗಿಸಿಕೊಡುವಂಥ ಜನರು ಅಂದರೆ, ಅವರ ಸುಖೋಪಭೋಗದಿಂದಲೇ ತಮ್ಮ ಹೊಟ್ಟೆಯನ್ನು ಹೊರಕೊಳ್ಳುವ ಜನರು ತಮ್ಮ ಕೈಲಾದಮಟ್ಟಿಗೆ

ಹೆಣಗಿ ಆ ಜನರ ಮನಸ್ಸನ್ನು ಒಲಿಸಿಕೊಳ್ಳಲಿಕ್ಕೆ ಯತ್ನಮಾಡುತ್ತಿದ್ದರು. ಮೇಲೆ ಹೇಳಿದಂತೆ ಜಾನೇವರಿ ತಿಂಗಳ ೯ನೇ ತಾರೀಖಿನ ದಿವಸ ಜಯಸಿಂಗನು ದಂಡಿನೊಡನೆ ನರ್ಮದೆಯನ್ನು ದಾಟಿದ ಬಳಿಕ ೨೦-೨೧ ದಿವಸಗಳಿಗೆ ಅವನ ಸೈನವು ಬರ್ಹಾಣಪುರದ ಸಮೀಪಕ್ಕೆ ಬಂದಿತು. ಇಲ್ಲಿಯವರೆಗೆ ಬಹಳ ವೇಗದಿಂದ ಬಂದದ್ದರಿಂದ ಆದ ಆಯಾಸದಿಂದಲೂ, ಬರ್ಹಾಣಪುರದಂಥ ಒಳ್ಳೇ ವೈಭವ ಸಂಪನ್ನವಾದ ಪಟ್ಟಣವು ಸಮೀಪದಲ್ಲಿದ್ದದರಿಂದಲೂ ಇಲ್ಲಿ ಸೈನ್ಯವು ನಾಲ್ಕು ದಿವಸ ಹೆಚ್ಚಿಗೆ ತಳವೂರಬೇಕೆಂದು ಸೈನಿಕರು ಅಪೇಕ್ಷಿಸಹತ್ತಿದರು.

ಆ ಕಾಲಕ್ಕೆ ಬರ್ಹಾಣಪುರವು ಒಳ್ಳೇ ವೈಭವಸಂಪನ್ನವಾದ ಪಟ್ಟಣಗಳಲ್ಲಿ ಒಂದಾಗಿತ್ತು. ನರ್ಮದೆಯ ದಕ್ಷಿಣಭಾಗದಲ್ಲಿ ವಿಜಾಪುರದ ಹೊರತು ಬರ್ಹಾಣಪುರದಂಥ ಮತ್ತೊಂದು ಪಟ್ಟಣವೇ ಇದ್ದಿಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದು. ದಂಡಿಗೆ ಅವಶ್ಯಕವಾಗಿರುವ ಕೆಲವು ಸಾಮುಗ್ರಿಗಳನ್ನು ಸಿದ್ಧಮಾಡಿಕೊಳ್ಳುವದಕ್ಕಾಗಿ ಈ ಪಟ್ಟಣದ ನೆರೆಯಲ್ಲಿ ೮-೧೦ ದಿವಸಗಳ ವರೆಗೆ ತಳವೂರಬೇಕೆಂದು ಜಯಸಿಂಗನು ಆಲೋಚಿಸಿದನು. ಈ ಸುದ್ದಿಯು ಸೈನಿಕರಿಗೆ ತಿಳಿದ ಕೂಡಲೆ ಕೇಳುವದೇನದೆ? ಎತ್ತ ನೋಡಿದತ್ತ ಆನಂದವೇ ಆನಂದವು. ಎಲ್ಲ ತರದ ವಿಲಾಸಗಳು ಸೈನ್ಯದಲ್ಲಿ ನಾಲ್ಕೂ ಕಡೆಗೆ ತೋರಹತ್ತಿದವು.

ಈ ಮೇರೆಗೆ ಜಯಸಿಂಗನ ಸೈನ್ಯವು ಬರ್ಹಾಣಪುರದಲ್ಲಿ ತಳವೂರಿ ಒಂದೆರಡು ದಿವಸಗಳಾದವು. ಸೈನಿಕರು ಮಿತಿಮೀರಿ ವಿಲಾಸವನ್ನು ಅನುಭವಿಸಹತ್ತಿದರು. ಪಟ್ಟಣದ ರಾಜಮಾರ್ಗಗಳಲ್ಲಿಯೂ, ಚಾಂದಣೀಚೌಕಿನಲ್ಲಿಯೂ ದಂಡಾಳುಗಳು ತಂಡ ತಂಡವಾಗಿ ತಿರುಗಹತ್ತಿದರು. ಅಲ್ಲಲ್ಲಿಗೆ ಗುಂಪು ಗುಂಪಾಗಿ ನೆರೆದು, ಅತಿ ಉಲ್ಹಾಸದಿಂದ ಪರಸ್ಪರರ ಮನೆರಂಜನವನ್ನು ಮಾಡಿಕೊಳ್ಳುತ್ತಿದ್ದರು. ಬೀದಿ ಬೀದಿಗಳಲ್ಲಿ ಜನರು ಗುಂಪು ಗುಂಪಾಗಿ ನೋಡುತ್ತಿರಲು ತರತರದ ಆಟಗಳನ್ನು ಆಡುತ್ತಿದ್ದರು. ಎಷ್ಟೋ ಜನರು ತಂಬಾಕ, ಗಾಂಜಿ, ಅಫೀಮುಗಳ ಅಂಗಡಿಗಳಲ್ಲಿ ಕುಳಿತು ಅವುಗಳ ಸೇವನವನ್ನು ನಡಿಸಿದ್ದರು. ಅದೇ ಸ್ಥಳದಲ್ಲಿ ಒಬ್ಬ ಹಿಂದೂ ಜೋಯಿಸನು ಒಂದು ಪಂಚಾಂಗವನ್ನು ಮುಂದಿಟ್ಟುಕೊಂಡು ನಿಮ್ಮ ಮನಸ್ಸಿನಲ್ಲಿದ್ದದ್ದನ್ನು ಕೇಳಿಕೊಳ್ಳಿರಿ ಹೇಳುತ್ತೇನೆ, ಎಂದು ಕವಡಿಗಳನ್ನು ಒಗೆದು ಜನರನ್ನು ತನ್ನ ಕಡೆಗೆ ಕರೆಯಹತ್ತಿದನು. ಜನರು ಹೆಚ್ಚು ಹೆಚ್ಚಾಗಿ ಅವನ ಸುತ್ತುಮುತ್ತು ನೆರೆಯಹತ್ತಿದರು.

ಮನುಷ್ಯನಿಗೆ ಭವಿಷ್ಯಶ್ರವಣವು ಬಲು ರಮ್ಯವಾಗಿರುವದು; ಆದ್ದರಿಂದ

ಅವನು ತನ್ನ ಮುಂದಿನ ಆಯುಷ್ಯವು ಹೇಗೆ ಹೋಗುವದು, ತನ್ನದೊಂದು ಬಯಕೆಯು ಕೈಗೂಡುವದೋ ಇಲ್ಲವೋ ಎಂಬ ಸಂಗತಿಗಳನ್ನು ತಿಳಕೊಳ್ಳಬೇಕೆಂದು ಆತುರಪಡುವದು ಸಹಜವಾಗಿರುವದು. ಸಾಮುದ್ರಿಕದ ಮೇಲೆ ಅಥವಾ ಫಲಜೋತಿಷ್ಯದ ಮೇಲೆ ಮನುಷ್ಯನ ನಂಬಿಗೆಯು ಇರಲಿ-ಇಲ್ಲದಿರಲಿ, ನಿಮ್ಮ ಆಯುಷ್ಯದಲ್ಲಿ ಹಿಂದೆ ನಡೆದ ಸಂಗತಿಗಳನ್ನೂ ಮುಂದಾಗುವ ಸಂಗತಿಗಳನ್ನೂ ಕೈನೋಡಿ ಇಲ್ಲವೆ ಪಂಚಾಂಗ ನೋಡಿ ಹೇಳುತ್ತೇನೆಂದು ಯಾವನಾದರೂ ಅಂದರೆ, ಅವನಿಗೆ ಬೇಡವೆಂದು ಅನ್ನಲಿಕ್ಕೆ ಯಾರ ಮನಸ್ಸೂ ಒಡಂಬಡುವದಿಲ್ಲ. ಏನು ಹೇಳುತ್ತಾನೋ ನೋಡೋಣ ಎಂದು ಅವನ ಮುಂದೆ ಕೈಚಾಚುವ ಮನಸ್ಸಾಗುವದು. ಬಳಿಕ ಭವಿಷ್ಯವನ್ನು ಹೇಳುವವನು ತನ್ನದೊಂದು ಅನುಮಾನ ಪದ್ಧತಿಯಿಂದಾಗಲಿ, ತನಗೆ ಗೊತ್ತಿದ್ದ ಲೋಕತಾಳೆಯ ಬಲದಿಂದಾಗಲಿ ಬೇಕಾದ ಅರ್ಥವು ಹೊರಡುವ ಭಾಷೆಯಿಂದ ಮಾತಾಡಹತ್ತಿದನೆಂದರೆ ಕೇಳುವವರಿಗೆ ಇವನು ಹೇಳುವ ಸಂಗತಿಗಳು ಅನುಭವಕ್ಕೆ ಬರುವವು. ಎಂಬಂತೆ ಭಾಸವಾಗುವದು; ಒಮ್ಮೆ ಈ ತರದ ಮನಸಿನ ಗ್ರಹಿಕೆಯಾಗಲು, ಮುಂದೆ ಆ ಜೋಯಿಸನು ಏನು ಹೇಳಿದರೂ ಅವೆಲ್ಲ ಸಂಗತಿಗಳು ತಮ್ಮ ಮನಸಿಗೆ ಒಪ್ಪುವಂತೆಯೇ ಭಾಸವಾಗುವದು. ಜೋಯಿಸನು "ನಿಮಗೆ ಮಾತೃಸೌಖ್ಯವು ವಿಶೇಷವಾಗಿ ಇಲ್ಲ" ಎಂದು ಹೇಳಿದರೆ, ಕೇಳುವವನು "ನಮ್ಮ ತಾಯಿಯು ಜೀವದಿಂದಿಲ್ಲ" ಎಂಬ ಅರ್ಥದಿಂದ ನನ್ನ ಮೇಲೆ ನನ್ನ ತಾಯಿಯ ಪ್ರೇಮವು ವಿಶೇಷವಾಗಿರುವದಿಲ್ಲ" ಈ ಅರ್ಥದ ವರೆಗೆ ಬೇಕಾದ ಒಂದು ಅರ್ಥವನ್ನು ತಿಳಕೊಳ್ಳಲಿಕ್ಕೆ ಅಡ್ಡಿಯಿಲ್ಲ. ಕೇಳುವವನು ಒಂದುವೇಳೆ "ಅದೇಕೆ? ಜೋಯಿಸರೆ, ನನ್ನ ತಾಯಿಯು ನನ್ನ ಮೇಲೆ ಬಹಳ ಪ್ರೀತಿಯನ್ನು ಮಾಡುವಳು" ಎಂದು ಅಂದರೆ ಅದಕ್ಕೆ ಜೋಯಿಸನು "ಬೇರೆ ಅಣ್ಣತಮ್ಮಂದಿರಗಿಂತ ನಿಮ್ಮ ಮೇಲೆ ನಿಮ್ಮ ತಾಯಿಯ ಪ್ರೇಮವು ಕಡಿಮೆಯೇ ಇರುವದು." ಎಂದು ಉತ್ತರಕೊಡುವನು. ಅದಕ್ಕೆ ಕೇಳುವವನು "ಏನು ನನಗೆ ಅಣ್ಣತಮ್ಮಂದಿರೇ ಇಲ್ಲವಲ್ಲ" ಎಂದು ಎಂದರೆ ಕೂಡಲೆ ಜೋಯಿಸನು—"ಇಲ್ಲದಿದ್ದರೇನಾಯಿತು, ಮನೆಯಲ್ಲಿ ಸಣ್ಣ ಸಣ್ಣ ಹುಡುಗರು ಇರಬಹುದಲ್ಲವೆ? ಅವರಿಗಿಂತ ಕಡಿಮೆ ಎಂದು ತಿಳಕೊಳ್ಳಬೇಕು." ಎಂದು ತಟ್ಟನೆ ಹೇಳಿ ಬಿಡುವನು.

ಸಾರಾಂಶ, ಯಾವನೊಬ್ಬ ಮನುಷ್ಯನ ಮನಸ್ಸನ್ನು ತನ್ನ ಕಡೆಗೆ ಎಳಕೊಳ್ಳುವ ಅನೇಕ ವಿದ್ಯೆಗಳಲ್ಲಿ ಫಲಜ್ಯೋತಿಷವು ಅತಿ ಮೋಹಕವಾದ ಒಂದು

ವಿದ್ಯೆಯಾಗಿರುತ್ತದೆ. ಈ ವಿದ್ಯೆಯಲ್ಲಿ ಪ್ರವೀಣನಾದ ಮನುಷ್ಯನು ಬುದ್ಧಿವಂತನೂ, ವ್ಯವಹಾರಚತುರನೂ, ಚಾಣಾಕ್ಷನೂ ಆಗಿದ್ದರೆ, ಅವನು ಕ್ಷಣಮಾತ್ರದಲ್ಲಿ ಸಾವಿರಾರು ಜನರ ಮನಸ್ಸನ್ನು ತನ್ನ ಕಡೆಗೆ ಎಳೆದುಕೊಳ್ಳಲಿಕ್ಕೆ ಶಕ್ತನಾಗುವನು. ಆದರೆ ಒಮ್ಮೆ ಜೋಯಿಸನ ಮಾತು ನಿಜವಾಗಿ ಬಹುಶಃ ತಪ್ಪುವದಿಲ್ಲೆಂದು ಪ್ರಖ್ಯಾತಿಯಾಯಿತೆಂದರೆ ತೀರಿತು; ಬೇಕಾದಷ್ಟು ಮಂದಿ ಕೇಳಲಿಕ್ಕೆ ಬರುವರು; ಮತ್ತು ಅವರು ಕೇಳುವ ಪ್ರಶ್ನಗಳಿಗೂ ಅಳತೆಯಿಲ್ಲದಂತಾಗುವದು. ನಡುಬಾಜಾರದಲ್ಲಿ ಇಲ್ಲವೆ ನಾಲ್ಕುಜನರು ನೆರೆಯುವ ಕಟ್ಟೆಯಮೇಲೆ ಪಂಚಾಂಗವನ್ನೂ, ಕವಡಿಗಳನ್ನೂ ತೆಗೆದುಕೊಂಡು ಭವಿಷ್ಯವನ್ನು ಹೇಳುವ ಜೋಯಿಸನು ಒಳ್ಳೇ ಕೌಶಲ್ಯದಿಂದ ಜನರನ್ನು ಮೋಹಪಾಶದಲ್ಲಿ ಕೆಡವುವದನ್ನು ನೋಡಿದರೆ, ಬಹಳ ಆಶ್ಚರ್ಯವಾಗುವದು. ಆ ಕಾಲದಲ್ಲಿ ಅವರ ವಿನೋದಪರವಾದ ಸಂಭಾಷಣಗಳನ್ನು ಕುಳಿತು ಕೇಳಬೇಕೆನಿಸುವದು. ಇರಲಿ, ಇಂಥ ಒಬ್ಬ ಜೋಯಿಸನು ಹಿಂದೆ ಹೇಳಿದಂತೆ ಬರ್ಹಾಣಪುರದ ಪೇಟೆಯೊಳಗಿನ ಒಂದು ಕಟ್ಟೆಯಮೇಲೆ ಕುಳಿತು ಮಾರ್ಗದಲ್ಲಿ ಓಡಾಡುವವರಿಗೆ ನಿಮ್ಮ ದೈವಪರೀಕ್ಷೆಯನ್ನು ಮಾಡಿಕೊಳ್ಳಿರೆಂದು ಕೂಗಿ ಕರೆಯುತ್ತಿದ್ದನು. ಅವನು ಅನೇಕತರದ ಭವಿಷ್ಯಗಳನ್ನು ಹೇಳುತ್ತಿದ್ದನು. ಮರಣಕಾಲವನ್ನು ಸಹ ಹೇಳುತ್ತಿದ್ದನು. ಯುದ್ಧಕ್ಕೆ ಹೋಗುವ ಶಿಪಾಯಿಗಳು ಈ ಸಂಗತಿಯನ್ನು ಅವಶ್ಯವಾಗಿ ತಿಳಕೊಳ್ಳಲಿಕ್ಕೆಬೇಕೆಂದು ಅವನ ಅಭಿಪ್ರಾಯವಿತ್ತು. ಮೊದಮೊದಲು ಅವನ ಸುತ್ತಲು ನಾಲ್ಕಾರುಜನರು ಮಾತ್ರ ಇದ್ದರು. ಆದರೆ ಆ ಜೋಯಿಸನು ಒಬ್ಬಿಬ್ಬರಿಗೆ ಅವರವರ ಪ್ರಶ್ನಗಳಿಗೆ ಸಮಂಜಸವಾದ ಉತ್ತರಗಳನ್ನು ಕೊಡಲು, ಕೂಡಲೆ ಬಹುಜನರು ಅವನ ಸುತ್ತಮುತ್ತು ನೆರೆದರು. ಮತ್ತು ಮೊದಲು ನನ್ನ ಕೈಯನ್ನು ನೋಡಿರಿ, ನನ್ನ ಕೈಯನ್ನು ಮೊದಲು ನೋಡಿರಿ, ನನ್ನ ಪ್ರಶ್ನೆಗೆ ಬೇಗ ಉತ್ತರವನ್ನು ಹೇಳಿರಿ, ಎಂದು ಮೇಲಾಟದಿಂದ ಜನರು ಗದ್ದಲವನ್ನೇ ಎಬ್ಬಿಸಿಬಿಟ್ಟರು. ಆಗ ಜೋಯಿಸನು ಒಳ್ಳೇ ಉಚ್ಚಸ್ವರದಿಂದ—"ಸ್ವಲ್ಪ ಸಮಾಧಾನದಿಂದ ಕೇಳಿಕೊಂಡರೆ ಎಲ್ಲರ ಕೈನೋಡಿ ನಿಮ್ಮ ಪ್ರಶ್ನಗಳಿಗೆ ಉತ್ತರವನ್ನು ಹೇಳುವೆನು. ನೀವು ಒಮ್ಮೆಲೇ ನನ್ನ ಮುಂದೆ ನಾಲ್ವತ್ತು ಐವತ್ತು ಕೈಗಳನ್ನು ಚಾಚಿದರೆ ನಾನು ಯಾರಿಗೆ ಏನೂ ಹೇಳದೆ ಇಲ್ಲಿಂದ ಹೊರಟು ಹೋಗುವೆನು." ಎಂದು ಹೇಳಿದನು. ಆದರೆ ಅವನ ಮಾತುಗಳನ್ನು ಕೇಳುವರು ಯಾರು? ಅವರಲ್ಲಿಯೂ ಹುಂಬಜನರು ತಮ್ಮ ಶರೀರಬಲದಿಂದ ಬೇರೆಯವರನ್ನು ಹಿಂದನೂಕಿ ಮುಂದೆ ಹೋಗಿ 'ಜೋಯಿ

ಸರೆ, ನನ್ನ ಕೈನೋಡಿರಿ' ಎಂದು ತಮ್ಮ ಕೈಗಳನ್ನು ಮುಂದೆ ಚಾಚಿದರು. ಆಗ ಜೋಯಿಸನು ಈ ಸ್ಥಿತಿಯನ್ನು ನೋಡಿ, ಇನ್ನು ಹೀಗೆ ಮಾಡುವದು ಒಳಿತಲ್ಲ; ಬರೇ ಮೋರೆಯನ್ನು ನೋಡಿ ಬಾಯಿಗೆಬಂದದ್ದನ್ನು ಒದರಿಸಿದರಾಯಿತು. ಇದರ ಹೊರತು ಗತ್ಯಂತರವಿಲ್ಲೆಂದು ಆಲೋಚಿಸಿ, ಅವನು ಒಬ್ಬರ ಮೋರೆಯನ್ನು ನೋಡುವದು, ಬಾಯಿಂದ ಏನಾದರೂ ಸಂಸ್ಕೃತಭಾಷೆಯ ಅಥವಾ ಉರ್ದೂ ಭಾಷೆಯ ಪದಗಳನ್ನು ವಟವಟಿಸುವದು, ಕೆಲವರಿಗೆ ನೀವು ಭಾಗ್ಯವಂತರಾಗುವಿರೆಂತಲೂ, ಬೇರೆ ಕೆಲವರಿಗೆ ನೀವು ಬಹಳ ಸುಖಿಗಳೂ, ದೀರ್ಘಾಯುಷಿಗಳೂ ಆಗುವಿರೆಂತಲೂ ಮತ್ತೆ ಕೆಲವರಿಗೆ ನಿಮ್ಮ ನಾಲ್ವತ್ತೆಂಟನೇ ವಯಸ್ಸಿಗೆ ಬಹಳ ಭಾಗ್ಯೋದಯವಾಗತಕ್ಕದ್ದಿರುವದೆಂತಲೂ, ಹೇಳುವದು, ಇತ್ಯಾದಿ ಕಾರ್ಯಗಳನ್ನು ಒಳ್ಳೇ ಭರದಿಂದ ನಡೆಯಿಸಿದನು. ಮುಖಸ್ತುತಿಗಂತೂ ಮಿತಿಯೇ ಇದ್ದಿಲ್ಲ; ಕೆಲವರ ಕುಟುಂಬಸೌಖ್ಯವನ್ನು, ಹಲವರ ಪೌರುಷದ ವರ್ಣನೆಯನ್ನು ಮತ್ತೆ ಕೆಲವರ ಸ್ತ್ರೀ ಸೌಖ್ಯದ ವರ್ಣನೆಯನ್ನು ಮಾಡುತ್ತಿದ್ದನು.

ಈ ಮೇರೆಗೆ ಜೋಯಿಸರ ಕೆಲಸವು ಒಳ್ಳೇ ಭರದಿಂದ ಸಾಗುತ್ತಿರಲು, ಜನರ ಗದ್ದಲವೂ ವಿಶೇಷವಾಗಹತ್ತಿತು ಪ್ರಶ್ನವನ್ನು ಕೇಳಿದ ಕೆಲವರು ಜೋಯಿಸನು ಹೇಳಿದ್ದು ನಮ್ಮ ಅನುಭವಕ್ಕೆ ಬಂತೆಂದು ತಮ್ಮ ತಮ್ಮೊಳಗೆ ಮಾತಾಡುತ್ತ ನಡೆದರು. ಇದರಿಂದಂತೂ ಕೇಳುವದೇನದೆ? ಜೋಯಿಸನ ಪ್ರಸಿದ್ಧಿಯು ಹೆಚ್ಚಾಗಿ ಯಾರೊಬ್ಬರು ನಾವೂ ಒಂದು ಸಾರೆ ನಮ್ಮ ದೈವಪರೀಕ್ಷೆಯನ್ನು ಮಾಡಿಬಿಡೋಣ ಎಂದು ಜೋಯಿಸನ ಹತ್ತರ ಬಂದು ನೆರೆಯಹತ್ತಿದರು. ಈ ಗದ್ದಲವನ್ನು ನೋಡಿ ನೆರೆದವರೊಳಗಿನವನೊಬ್ಬನು—ಜೋಯಿಸರೆ, ಹೀಗೆ ನೀವು ಓಣಿಯಲ್ಲಿ ಜನರಿಗೆಲ್ಲ ಹೇಳುತ್ತ ಕುಳಿತರೆ ನಿರ್ಬಂಧವಿಲ್ಲದಂತಾಗುವದು. ನಿಮ್ಮ ಅಪ್ಪಣೆಯಾದರೆ ನಾನು ನಿಮ್ಮನ್ನು ನಮ್ಮ ಛಾವಣಿಗೆ ಕರಕೊಂಡು ಹೋಗುತ್ತೇನೆ ನಾನು ಜಾತಿಯಿಂದ ರಜಪುತನಿರುತ್ತೇನೆ. ನೀವು ಯಾವ ಮಾತಿಗೂ ಸಂಕೋಚಪಡಲು ಕಾರಣವಿಲ್ಲ; ಅಲ್ಲಿ ಇಷ್ಟು ಗದ್ದಲ ಗೊಂದಲಗಳು ಆಗಲಿಕ್ಕಿಲ್ಲ; ಪ್ರಶ್ನಕೇಳಲಿಕ್ಕೆ ಒಳ್ಳೇ ಜನರೇ ಬರುವರು. ನಿಮಗೆ ಯಾವ ತರದ ತೊಂದರೆಯೂ ಆಗಲಿಕ್ಕಿಲ್ಲ. ಅಲ್ಲಿಯ ಜನರಿಗೆ ನಿಮ್ಮ ಹೇಳಿಕೆಯು ಮನಸಿಗೆ ಬಂದರೆ ನಿಮಗೆ ಲಾಭವೂ ಚೆನ್ನಾಗಿ ಆಗಬಹುದು. ನಿಮ್ಮಲ್ಲಿ ಏನೋ ಒಂದು ಪ್ರಕಾರದ ವಿದ್ಯೆಯು ಇರುವದೆಂಬದರಲ್ಲಿ ಸಂದೇಹವಿಲ್ಲ. ನೀವು ಹೇಳಿದ ಮಾತುಗಳೆಲ್ಲ ನನ್ನ ಅನುಭವಕ್ಕೆ ಬಂದವು. ಆದಕಾರಣ ನನ್ನ ಸಂಗಡ ನಡೆಯಿರಿ,

ಈ ಪೇಟೆಯಲ್ಲಿ ನೀವು ಇನ್ನು ಎಷ್ಟು ಹೊತ್ತಿನವರೆಗೆ ಕೂಡ್ರುವಿರಿ? ನಾನು ನಿಮ್ಮ ಊಟ-ಉಡುಗೆಯ ವ್ಯವಸ್ಥೆಯನ್ನು ಚೆನ್ನಾಗಿಡುವೆನು; ಅನೇಕಜನ ಒಳ್ಳೇ ಗಿರಾಕಿಗಳನ್ನು ಒದಗಿಸಿಕೊಡುವೆನು. ಏಳಿರಿ!! ಎಂದು ಆಗ್ರಹಮಾಡಹತ್ತಿದನು.

ಜೋಯಿಸನು ಅವನ ಮೋರೆಯನ್ನು ಮಿಕಿಮಿಕಿನೋಡಿ:—ನಾನು ಈ ಗೃಹಸ್ಥನ ಕೂಡ ಹೋದರೆ ನನ್ನ ಕಾರ್ಯಭಾಗವು ನೆರವೇರುವದೋ ಇಲ್ಲವೋ ಎಂಬ ಪ್ರಶ್ನದ ಉತ್ತರವನ್ನೇ ತೆಗೆಯುತ್ತಿದ್ದನು. ಕಡೆಗೆ ಅನುಕೂಲವಾದ ಉತ್ತರವು ಹೊರಟಂತೆ ತೋರಿತು. ಯಾಕಂದರೆ ಅವನು ತನ್ನನ್ನು ಕರೆಯುವ ಗೃಹಸ್ಥನನ್ನು ಕುರಿತು:—ಒಳ್ಳೇದು, ನೀವು ಆಶ್ರಯಕೊಟ್ಟು ಕರಕೊಂಡು ಹೋಗಲಿಕ್ಕೆ ಒಪ್ಪಿದರೆ ನಾನು ಬರಲಿಕ್ಕೆ ಒಂಟಗಾಲ ಮೇಲೆ ಸಿದ್ಧನಿರುತ್ತೇನೆ; ಆದರೆ ನೀವು ಪೂರ್ಣವಾಗಿ ವಿಚಾರಮಾಡಿರಿ. ನನ್ನಿಂದ ನಿಮಗೆ ತೊಂದರೆಯಾಗಬಹುದು. ನಾವು ಹೇಳಿ ಕೇಳಿ ಜೋಯಿಸರು. ನಮ್ಮ ಕಡೆಗೆ ಹಗಲಿರಳು ಜನರು ಬರತಕ್ಕವರು. ಅವರ ಕೂಡ ನಾವು ಹರಟೀಕೊಚ್ಚುತ್ತ ಕೂಡತಕ್ಕವರು. ಇದೆಲ್ಲ ನಿಮ್ಮ ಮನಸಿಗೆ ಬರುತ್ತಿದ್ದರೆ ಒಪ್ಪಿಕೊಳ್ಳಿರಿ ಎಂದು ಹೇಳಿದನು.

“ಛೇ ಛೇ ಹಾಗೇನೂ ಇಲ್ಲ. ನಿಮ್ಮಿಂದ ನಮಗೆ ಯಾವತರದ ತೊಂದರೆಯೂ ಆಗುವದಿಲ್ಲ. ನಿಮಗೆ ಇರಲಿಕ್ಕೆ ಸ್ವತಂತ್ರವಾದ ಒಂದು ಡೇರೆಯನ್ನು ಹೊಡಿಸಿಕೊಡುವೆನು. ಅಲ್ಲಿ ನಿಮಗೆ ಯಾವತರದ ತೊಂದರೆಯೂ ತಟ್ಟದಂತೆ ವ್ಯವಸ್ಥೆಯನ್ನಿಡುವೆನು. ಇಷ್ಟು ನಿಮಗೆ ನಾನು ಆಗ್ರಹಮಾಡುವ ಉದ್ದೇಶವೇನಂದರೆ:—ನಿಮ್ಮ ವಿದ್ಯೆಯು ಈ ಪ್ರಕಾರ ಪೇಟೆಯಲ್ಲಿ ಮಾರಲಿಕ್ಕೆ ತಕ್ಕದ್ದಲ್ಲ. ಬಹಳ ಬೆಲೆಯುಳ್ಳದ್ದಿರುವದು. ಈ ಸಂಗತಿಯು ನನಗೆ ಪೂರ್ಣವಾಗಿ ಮನವರಿಕೆಯಾಗಿರುವದು, ಇದರಮೇಲೆ ನಿಮ್ಮ ಮನಸ್ಸು. ನಮ್ಮ ಛಾವಣಿಗೆ ನೀವು ಬಂದರೆ ನಿಮಗೆ ಯೋಗ್ಯ ಉತ್ಪನ್ನವಾಗುವದಲ್ಲದೆ, ನಿಮ್ಮ ಗುಣಕ್ಕೆ ತಕ್ಕ ಗೌರವವೂ ದೊರೆಯುವದು” ಈ ಮಾತು ಕೇಳಿ ಜೋಯಿಸನು:—ನಸುನಕ್ಕು ತಾನು ಹಾಸಿಕೊಂಡು ಕುಳಿತ ತಟ್ಟಿನ ಬುಡದಲ್ಲಿ ಕೈಹಾಕಿ ಒಂದು ಕಾಗದವನ್ನು ತೆಗೆದು ಅದನ್ನು ಆ ಗೃಹಸ್ಥನ ಕೈಯಲ್ಲಿ ಕೊಟ್ಟನು. ಅದರಲ್ಲಿ:—“ನೀವು ನನ್ನನ್ನು ಒಳ್ಳೇ ಆಗ್ರಹಮಾಡಿ ನಿಮ್ಮ ಛಾವಣಿಗೆ ಕರಕೊಂಡು ಹೋಗುತ್ತೀರಿ” ಎಂದು ಬರೆದಿತ್ತು. ಇದನ್ನು ಓದಿಕೊಂಡು ಆ ಗೃಹಸ್ಥನು ಒಳ್ಳೇ ಆಶ್ಚರ್ಯಚಕಿತನಾದಂತೆ ಜೋಯಿಸನ ಮೋರೆಯನ್ನು ನೋಡಹತ್ತಿದನು. ಅದಕ್ಕೆ ಜೋಯಿಸನು:—ನೋಡಿದಿರಾ, ನಾನು ಈ ಕಾಗದವನ್ನು ನೀವು ಬರುವದಕ್ಕೆ ಮುಂಚಿತವಾಗಿಯೇ

ಬರೆದಿಟ್ಟಿದ್ದೇನೆ ಇನ್ನು ನೀವು ಕರೆದಲ್ಲಿಗೆ ನಾನು ಬರುತ್ತೇನೆ. "ನೀವು ನನ್ನ ವಿದ್ಯೆಗೆ ಮೆಚ್ಚಿ ನನಗೆ. ಆಗ್ರಹಮಾಡಿ ನಿಮ್ಮ ಛಾವಣಿಗೆ ಒಯ್ಯುವಿರಿ" ಎಂದು ಮೊದಲೇ ನಾನು ಅರಿತುಕೊಂಡಿದ್ದೇನೆ. ಆ ಪ್ರಕಾರ ಆಗಲಿಕ್ಕೆ ಬೇಕು. ಹೀ-ಗೆಂದು ಜೋಯಿಸರು ತಮ್ಮ ಸಾಮಾನುಗಳನ್ನು ಸಾವರಿಸಿಕೊಳ್ಳಹತ್ತಿದರು. ಇತ್ತ ಪ್ರಶ್ನ ಕೇಳುವ ಜನರಿಗೂ ತೆರಪೇಇದ್ದಿಲ್ಲ. ಜೋಯಿಸರು ಅವರಿಗೆ ಸಮಯೋಚಿತ ಉತ್ತರಗಳನ್ನು ಕೊಡುತ್ತಲೇ ಇದ್ದರು. ಆ ಉತ್ತರಗಳನ್ನು ಜನರು ತಮಗೆ ಅನುಕೂಲವಾಗಿ ಇಲ್ಲವೆ ಪ್ರತಿಕೂಲವಾಗಿ ತಿಳಕೊಂಡು ಹರ್ಷಿತರಾಗಿ ಅಥವಾ ಖಿನ್ನರಾಗಿ ಅಲ್ಲಿಂದ ತೆರಳುತ್ತಿದ್ದರು ಜೋಯಿಸರಿಗೆ ದುಡ್ಡಿನಮೇಲೆ ವಿಶೇಷ ಆಶೆಯೂ ಕಾಣಲಿಲ್ಲ. ಅವರು ಆಗ ಕೂಡಿದಷ್ಟು ದುಡ್ಡನ್ನು ಕಿಸೆಗೆ ಹಾಕಿ ಎಲ್ಲ ಸಾಮಾನುಗಳನ್ನು ತಕ್ಕೊಂಡು ಆ ರಜಪೂತ ಗೃಹಸ್ಥನ ಬೆನ್ನುಹತ್ತಿ ಅಲ್ಲಿಂದ ಹೊರಟರು.

ಆ ರಜಪೂತ ಗೃಹಸ್ಥನಿಗೆ ಜೋಯಿಸರು ಹೇಳಿದ ಸಂಗತಿಗಳು ಚೆನ್ನಾಗಿ ಅನುಭವಕ್ಕೆ ಬಂದಿರಲಿಕ್ಕೆ ಬೇಕು. ಆ ಗೃಹಸ್ಥನ ಭಕ್ತಿಯು ಅವನ ಮೇಲೆ ವಿಶೇಷವಾಗಿತ್ತೆಂಬದು ನೋಡುವವರಿಗೆ ಒಡೆದುಕಾಣುತ್ತಿತ್ತು. ಅವನು ತನ್ನ ಡೇರೆಯ ಸಮೀಪದಲ್ಲಿ ಒಂದು ಸ್ವತಂತ್ರವಾದ ಡೇರೆಯನ್ನು ಹೊಡೆಯಿಸಿ ಅದನ್ನು ಆ ಜೋಯಿಸನಿಗೆ ಇರಲಿಕ್ಕೆ ಕೊಟ್ಟನು ಊಟಉಡಿಗೆಯ ವ್ಯವಸ್ಥೆಯನ್ನು ಮಾಡಿಕೊಟ್ಟನು. ಜೋಯಿಸನು ನನ್ನ ಅಡಿಗೆಯನ್ನು ನಾನೇ ಮಾಡಿಕೊಳ್ಳುತ್ತೇನೆಂದು ಹೇಳಿದನು. ಅದರಿಂದ ಆ ರಜಪೂತನು ನಿತ್ಯದಲ್ಲಿ ಅವನಿಗೆ ಅತ್ಯುತ್ಕೃಷ್ಟವಾದ ಸೀಧಾಸಾಮುಗ್ರಿಗಳನ್ನು ಕಳಿಸುತ್ತಿದ್ದನು. ಜೋಯಿಸನು ತನಗೆ ಬೇಕಾದಷ್ಟು ಉಪಯೋಗಿಸಿಕೊಂಡು ಉಳಿದಷ್ಟನ್ನು ಬಡಬಗ್ಗರಿಗೆ ಕೊಟ್ಟು ಬಿಡುತ್ತಿದ್ದನು.

ಬರ್ಹಾಣಪುರದ ಪೇಟೆಯಲ್ಲಿ ಕುಳಿತು ಭವಿಷ್ಯವನ್ನು ಹೇಳುತ್ತಿದ್ದ ಜೋಯಿಸನು ನಮ್ಮ ಛಾವಣಿಯಲ್ಲಿಯೇ ಇಳಕೊಂಡಿದ್ದಾನೆಂಬ ಸುದ್ದಿಯು ಹಾ ಹಾ ಅನ್ನುವಷ್ಟರಲ್ಲಿ ಇಡಿ ಛಾವಣಿಯ ತುಂಬ ಹಬ್ಬಿತು. ಮುಂದೆ ಕೇಳುವದೇನಿದೆ? ಜನರು ಕೂಡಹತ್ತಿದರು ಕೆಲವರು ತಮ್ಮಲ್ಲಿ ಧನಸಂಚಯವು ಎಂದಾಗುವದೆಂಬದನ್ನೂ, ಹಲವರು ತಮಗೆ ಯುದ್ಧದಲ್ಲಿ ಜಯವು ದೊರೆಯುವದೋ ಇಲ್ಲವೋ ಎಂಬದನ್ನೂ, ಬೇರೆ ಕೆಲವರು ತಮಗೆ ಹೆಚ್ಚಿನ ಅಧಿಕಾರದ ಸ್ಥಳವು ಎಂದು ದೊರೆಯುವದೆಂಬದನ್ನೂ ಕೇಳಿಕೊಳ್ಳಬೇಕೆಂದು ಹವಣಿಸುತ್ತಿದ್ದರು;

ಆದರೆ ಆ ಜೋಯಿಸನಿಗೆ ಆಶ್ರಯವನ್ನು ಕೊಟ್ಟ ರಜಪೂತನು ಈ ಪ್ರಶ್ನ ಕೇಳುವ ಜನರ ವ್ಯವಸ್ಥೆಯನ್ನು ಚೆನ್ನಾಗಿಟ್ಟಿದ್ದನು. ಏಕ ಕಾಲಕ್ಕೆ ಮೂರು ಮಂದಿಗಿಂತ ಹೆಚ್ಚು ಜನರು ಒಳಗೆ ಹೋಗಬಾರದೆಂದು ಕಟ್ಟುಮಾಡಿದ್ದನು. ಒಬ್ಬನು ಹೊರಗೆ ಬಂದ ವೇಳೆ ಮತ್ತೊಬ್ಬನು ಒಳಗೆ ಹೋಗಬೇಕಾಗುತ್ತಿತ್ತು. ಹೀಗೆ ವ್ಯವಸ್ಥೆ ಮಾಡಿದ್ದರಿಂದ ಎಲ್ಲರೂ ತಮ್ಮ ತಮ್ಮ ಪ್ರಶ್ನೆಗಳಿಗೆ ಯೋಗ್ಯ ಉತ್ತರಗಳನ್ನು ಹೊಂದಿ ಹೊರಗೆ ಬರುತ್ತಿದ್ದರು. ಜೋಯಿಸರು ಹೇಳಿದ ಸಂಗತಿಗಳು ನನ್ನ ಮನಸ್ಸಿಗೆ ಒಪ್ಪಲಿಲ್ಲೆಂದು ಹೇಳುವವರು ಸಾವಿರಕ್ಕೆ ಒಬ್ಬ ರಾದರೂ ಹೊರಡುತ್ತಿದ್ದಿಲ್ಲ. ಜನರು ಸಾಮಾನ್ಯವಾಗಿ ಈ ಜೋಯಿಸನ ವಿಷಯವಾಗಿ ಮಾತಾಡುವಾಗ—"ಬರಿಯ ಜ್ಯೋತಿಷದ ಬಲದಿಂದ ಇಂಥ ಸಂಗತಿಗಳನ್ನೆಲ್ಲ ಹೇಳಲಿಕ್ಕಾದೀತೇ? ಇವನಿಗೆ ಏನಾದರೂ ಒಂದು ಕರ್ಣಪಿಶಾಚಿ ಯಾಗಲಿ, ವೇತಾಳವಾಗಲಿ ಬಲೆದಿರಲಿಕ್ಕೆ ಬೇಕು" ಎಂದು ಅನ್ನುತ್ತಿದ್ದರು.

ಈ ಮೇರೆಗೆ ಜೋಯಿಸರ ಪ್ರಸ್ಥವು ಆ ಛಾವಣಿಯಲ್ಲಿ ವಿಶೇಷವಾಗಿಯೇ ಬೆಳೆಯುತ್ತ ಬೆಳೆಯುತ್ತ ದೊಡ್ಡ ದೊಡ್ಡ ಅಧಿಕಾರಸ್ಥರ ಕಿವಿತನಕ ಹೋಯಿತು. ಒಬ್ಬ ಸರ್ವಸಾಧಾರಣ ರಜಪೂತ ಶಿಪಾಯಿಯ ಆಶ್ರಯದಲ್ಲಿ ಒಂದು ಹರಕು ಡೇರೆಯಲ್ಲಿ ಇಳಕೊಂಡ ಜೋಯಿಸನ ಕಡೆಗೆ ಆ ಅಧಿಕಾರಸ್ಥರು ಬರುವರೆ? ಅವರು ಜೋಯಿಸರನ್ನೇ ತಮ್ಮ ಡೇರೆಗೆ ಕರೆಕಳುಹಿದರು. ಬಡವರಾದ ಐವತ್ತು ಅರವತ್ತು ಜನ ಸಿಪಾಯಿಗಳ ಕೈ ನೋಡಿ ಹೇಳಿದರೆ ಆಗುವ ಲಾಭಕ್ಕಿಂತಲೂ ಹೆಚ್ಚು ಲಾಭವು ಒಬ್ಬ ಅಧಿಕಾರಿಯ ಅಥವಾ ಸರದಾರನ ಕೈ ನೋಡಿ ಹೇಳಿದರೆ ಆಗುತ್ತಿತ್ತೆಂಬದನ್ನು ಬೇರೆ ಹೇಳುವ ಕಾರಣವಿಲ್ಲ. ಜೋಯಿಸನಿಗೆ ಇಂಥ ಮೂರು ನಾಲ್ಕು ಆಮಂತ್ರಣಗಳು ಬಂದವು. ಆದರೆ ಅವರು—"ನಾನು ನಿಮ್ಮ ಲ್ಲಿಗೆ ಬಂದರೆ ನನ್ನ ವೇಳೆಯು ಬಹಳ ಹೋಗುವದು. ನಿಮ್ಮ ಪ್ರಶ್ನವನ್ನು ಕಾಗದದ ಮೇಲೆ ಬರೆದು ಕಳುಹಿಸಿರಿ. ಆದರ ಉತ್ತರವನ್ನು ನಾನು ಕಾಗದದ ಮೇಲೆ ಬರೆದು ಕಳುಹಿಸುತ್ತೇನೆ; ಅಥವಾ ನಿಮ್ಮ ಒಬ್ಬ ವಿಶ್ವಾಸದ ಮನುಷ್ಯ ನನ್ನು ಕಳಿಸಿರಿ. ಅವನ ಮುಂದೆ ಹೇಳಿಕಳಿಸುತ್ತೇನೆ. ನಿಮ್ಮ ಡೇರೆಗೆ ಬರ ಲಿಕ್ಕೆ ನಾನು ಒಲ್ಲೆನೆನ್ನುವದಿಲ್ಲ. ಅಲ್ಲಿಗೆ ಬಂದರೆ ಏನಿಲ್ಲೆಂದರೂ ನನ್ನ ಎರಡು ಪ್ರಹರ ವೇಳೆಯು ಹೋಗುವದು ಅಷ್ಟರಲ್ಲಿ ಇಲ್ಲಿ ಐನೂರು ಜನರು ನನ್ನ ದಾರೀನೋಡುತ್ತ ಕುಳಿತುಕೊಳ್ಳುವರು. ಇಷ್ಟು ಮೀರಿ ಬರಬೇಕೆಂದು ನಿಮ್ಮ ಆಗ್ರಹವಿದ್ದರೆ ಈ ದಾಸನು ನಿಮ್ಮ ಸೇವೆಗೆ ಸಿದ್ಧನೇ ಇರುವನು"

ಎಂದು ಹೇಳಿಕಳಿಸಿದರು. ದಂಡಿನ ಅಧಿಕಾರಸ್ಥರಿಗೆ ಈ ತರದ ಉತ್ತರಗಳನ್ನು ಕೊಟ್ಟರೆ ಸಾಗುವದೆ? ಅವರು ಸುಮ್ಮನಾಗುವರೆ? ಪುನಃ ಆಗ್ರಹದ ಅಂದರೆ ಜುಲುಮೆಯ ಆಮಂತ್ರಣಗಳು ಬರಹತ್ತಿದವು. ಅವುಗಳನ್ನು ಜೋಯಿಸನು ಉಪಾಯಗಾಣದೆ ಸ್ವೀಕರಿಸುವ ಭಾಗಬಿತ್ತು. ಎಷ್ಟೋ ಅಧಿಕಾರಸ್ಥರಿಗೆ ಮೊದ ಮೊದಲು ಈ ಬಗೆಯ ಉತ್ತರಗಳಿಂದ ಸಿಟ್ಟೂ ಬಂತು. ಆದರೆ ಜೋಯಿಸರ ಮುಖತಃ ಭೆಟ್ಟಿಯಿಂದಲೂ, ಪ್ರಶ್ನೋತ್ತರಗಳ ಸಂಭಾಷಣದಿಂದಲೂ ಅವರ ಆ ಸಿಟ್ಟು ಸದ್ದಿಲ್ಲದೆ ಓಡಿ ಹೋಯಿತು. ಈ ಮೇರೆಗೆ ದೊಡ್ಡ ದೊಡ್ಡ ಅಧಿಕಾರ ಸ್ಥರಲ್ಲಿಯೂ ಜೋಯಿಸರ ಗೌರವವು ಬೆಳೆಯಿತು. ಅದರಿಂದ ಬಡಬಗ್ಗರಿಗೆ ಜೋಯಿಸರ ಉಪಯೋಗವು ಕಡಿಮೆಯಾಗಹತ್ತಿತು. ಕಟ್ಟಕಡೆಗೆ ಈ ಸುದ್ದಿಯು ಸೇನಾಪತಿಯಾದ ಜಯಸಿಂಗ ರಾಜನಿಗೂ ಅವನ ಸಹಾಯಕ ಅಧಿಕಾರಿಯಾದ ದಿಲೇರಖಾನನಿಗೂ ಹತ್ತಿತು. ಎಷ್ಟೋ ದಂಡಿನ ಅಧಿಕಾರಿಗಳು ಜೋಯಿಸನ ಜ್ಯೋತಿಷಜ್ಞಾನವನ್ನು ವಿಶೇಷವಾಗಿ ಕೊಂಡಾಡಿದರು. ಇಂಥ ಅಲೌಕಿಕ ಜೋಯಿಸನನ್ನು ಒಮ್ಮೆ ಕರೆಯಿಸಿ ತಾನು ಒಂದೆರಡು ಪ್ರಶ್ನಗಳನ್ನು ಕೇಳಿನೋಡ ಬೇಕೆಂದು ಮಿರ್ಝಾರಾಜನ ಮನಸ್ಸಿನಲ್ಲಿಯೂ ಬಂತು. ಆಗ ಆ ಜೋಯಿಸ ನನ್ನು ಹೊಗಳಿದ ಒಬ್ಬ ಅಧಿಕಾರಸ್ಥನು ಅವನನ್ನು ತಮ್ಮ ಕಡೆಗೆ ಕರಕೊಂಡು ಬರುವೆನೆಂದು ಮಿರ್ಝಾರಾಜನಿಗೆ ವಿನಂತಿ ಮಾಡಿಕೊಂಡನು; ಆದರೆ ಆ ಮಿರ್ಝಾ ರಾಜನು—ಈಗ ನನಗೆ ಕೆಲಸವಿರುತ್ತದೆ. ಸ್ವಲ್ಪವೇಳೆಯಾದ ಮೇಲೆ ನಿಮಗೆ ಹೇಳುತ್ತೇನೆ, ಎಂದು ಹೇಳಿ ಸುಮ್ಮನಾದನು. ಈ ಉತ್ತರವನ್ನು ಕೇಳಿ ಅಲ್ಲಿ ನೆರೆದ ಜನರು 'ಈ ಮುದುಕನಿಗೆ ಸೈನ್ಯದ ವ್ಯವಸ್ಥೆ, ಬಾದಶಹನಿಗೆ ಪತ್ರ ಬರೆಯೋಣ ಇವೆರಡರ ಹೊರತು ಹೆಚ್ಚಿಗೇನೂ ಸೂಚಿಸುವದಿಲ್ಲ' ಎಂದು ತಮ್ಮ ತಮ್ಮೊಳಗೆ ಗುಜುಗುಟ್ಟಿದರು. ಅಂದು ಜೋಯಿಸರನ್ನು ಕರೆಯಿಸುವ ಮಾತು ಅಷ್ಟಕ್ಕೇ ಉಳಿಯಿತು. ಬೇರೆ ಜನರು ಮಾತ್ರ ಜೋಯಿಸರಿಂದ ಆಗತಕ್ಕಷ್ಟು ಉಪಯೋಗ ಮಾಡಿಕೊಳ್ಳುತ್ತಲೇ ಇದ್ದರು.

ಜಯಸಿಂಗರಾಜನ ಸೈನ್ಯವು ಬರ್ಹಾಣಪುರದಲ್ಲಿ ತಳವೂರಿ, ಇಂದಿಗೆ ಆರೇಳು ದಿವಸಗಳಾದವು. ಇಷ್ಟರಲ್ಲಿ ಜೋಯಿಸರು ಛಾವಣಿಯ ತುಂಬ ವ್ಯಾಪಿಸಿಕೊಂ ಡರು. ಜಗತ್ತಿನಲ್ಲಿ ಹಾಡೋಣ, ಬಾರಿಸೋಣ, ಚಿತ್ರತೆಗೆಯೋಣ, ನಾಟಕಆ- ಡೋಣ ಮುಂತಾದ ಎಷ್ಟೋ ಕಲೆಗಳು ಒಳ್ಳೇ ಮೋಹಕವಾಗಿರುವವು. ಎಷ್ಟೋ ಜನರಿಗೆ ಗಾಯನದ ರುಚಿಹತ್ತಿ ತಮ್ಮ ದುಡ್ಡನ್ನೆಲ್ಲ ಹಾಳುಮಾಡಿಕೊಂಡಿರುವ

ರಲ್ಲದೆ, ತಾವೂ ದುರ್ಮಾರ್ಗಕ್ಕೆ ಹತ್ತಿರುವರು ಆದರೆ ಜ್ಯೋತಿಷವು ಎಲ್ಲ ಕಲೆಗಳಿಗಿಂತ ಶ್ರೇಷ್ಠವಾದದ್ದು. ಇದರ ಉಪಯುಕ್ತತೆಯು ಸರ್ವಮಾನ್ಯವಾಗಿರುವದು. ಅದ್ದರಿಂದಲೇ ನಾಮಾಂಕಿತ ಜ್ಯೋತಿಷಿಗಳು ಲೋಕಪ್ರಿಯರಾಗುವರು.

ನಮ್ಮ ವಾಚಕರ ಪರಿಚಯದವನಾದ ಜೋಯಿಸನ ಹೇಳೋಣವು ಬಹು ಮೋಹಕವಾದದ್ದೂ, ಮನಸ್ಸಿಗೆ ತತ್ಕಾಲಕ್ಕೆ ಹೊಳೆಯುವಂಥಾದ್ದೂ ಆಗಿತ್ತೆಂದು ನಾವು ಹಿಂದೆಯೇ ಹೇಳಿದ್ದೇವೆ. ದಂಡಿನ ತಳವು ಬರ್ಹಾಣಪುರದಿಂದ ಕಿತ್ತಿ ಮುಂದಕ್ಕೆ ಹೊರಡಲು ಜೋಯಿಸನು ತನ್ನ ಆಶ್ರಯದಾತೃವಾದ ರಜಪೂತ ಶಿಪಾಯಿಯ ಬಳಿಗೆ ಬಂದು ರಜೆಯನ್ನು ಕೇಳಿಕೊಂಡನು. "ತಮ್ಮ ಆಶ್ರಯದಿಂದ ನನಗೆ ನಾಲ್ಕುದುಡ್ಡು ಸಿಕ್ಕವು. ತಮ್ಮ ಜನರಲ್ಲಿ ನನ್ನ ಗೌರವವೂ ಬೆಳೆಯಿತು. ಇದಕ್ಕಾಗಿ ನಾನು ತಮ್ಮನ್ನು ಬಹಳವಾಗಿ ಸ್ಮರಿಸುವೆನು. ನಾನು ಉತ್ತರಕ್ಕೆ ಕಾಶಿ, ಪ್ರಯಾಗ, ಗಯಾ ಇವುಗಳ ಕಡೆಗೆ ಹೋಗತಕ್ಕವನಿರುವೆನು. ತಮ್ಮ ಸಂಗಡ ನಾನು ಏತಕ್ಕೆ ಬರಲಿ. ನನಗೆ ಹೋಗಲಿಕ್ಕೆ ಅಪ್ಪಣೆಯನ್ನು ದಯಪಾಲಿಸಬೇಕು" ಎಂದು ಬಹು ವಿನಯದಿಂದ ಬೇಡಿಕೊಂಡನು. ಆ ಕಾಲಕ್ಕೆ ಅಲ್ಲಿ ಎಷ್ಟೋಜನರು ನೆರೆದಿದ್ದರು. ಜೋಯಿಸನ ಈ ವಿಜ್ಞಾಪನೆಯು ಆ ಜನರ ಕಿವಿಗೆ ಬಿದ್ದಕೂಡಲೆ ಅವರು:—"ಜೋಯಿಸರೇ ನೀವು ನಮ್ಮನ್ನು ಇಷ್ಟು ಬೇಗನೆ ಅಗಲಿಹೋಗುವದು ಸರಿಯಲ್ಲ. ಕಾಶೀಯಾತ್ರೆಯ ಕೆಲಸವನ್ನು ಮುಂದಕ್ಕೆ ಹಾಕಿರಿ. ನಾವು ಈಗ ಹೊರಟಕಾರ್ಯವು ನೆರವೇರಿತೆಂದರೆ ನಿಮ್ಮನ್ನು ಕಾಶಿಗೆ ಒಯ್ದು ಸುರಕ್ಷಿತವಾಗಿ ಮುಟ್ಟಿಸುವೆವು" ಎಂದು ಎಲ್ಲರೂ ಆಗ್ರಹ ಮಾಡಹತ್ತಿದರು. ಅವರ ಮಾತಿಗೆ ಜೋಯಿಸನು—ನನಗೆ ದುಡ್ಡು ಗಳಿಸುವ ಇಚ್ಛೆಯಿಲ್ಲ; ಆದರೆ ದೇವರು ನನಗೆ ದಯಪಾಲಿಸಿದ ಗುಣದ ಉಪಯೋಗವು ಬಹು ಜನರಿಗೆ ಆಗಬೇಕೆಂಬದೇ ನನ್ನ ಇಚ್ಛೆಯು; ಮತ್ತು ನನ್ನ ಗುರುಗಳ ಆಜ್ಞೆಯಾದರೂ ಹೀಗೇ ಇರುವದು. ಬರಿಯ ದ್ರವ್ಯದ ಆಶೆಗೆ ಬಿದ್ದು ಒಂದೇಕಡೆಗೆ ನಿಂತು ಕೊಳ್ಳಬಾರದೆಂದು ನಮ್ಮ ಗುರುಗಳು ಕಟ್ಟಪ್ಪಣೆ ಮಾಡಿರುವರು. ಏನು ಮಾಡಬೇಕು? ದೇವರು ನಮಗೂ ಹೊಟ್ಟೆಯನ್ನು ಕೊಟ್ಟಿರುವನಲ್ಲವೇ? ಅದಕ್ಕಾಗಿ ನಾಲ್ಕು ಕಡೆಗೆ ಅಡ್ಡಾಡಿ ರೊಕ್ಕಸ್ಥರಿಂದ ದುಡ್ಡು ತೆಗೆದುಕೊಳ್ಳುತ್ತೇವೆ. ನನ್ನ ಸಲುವಾಗಿ ನಿಮಗೆ ಅಲ್ಪ ಸ್ವಲ್ಪ ತೊಂದರೆಯು ಆಗುತ್ತದೆ. ಇಷ್ಟಾಗಿಯೂ ನಮ್ಮ ಸಂಗಡ ಬರಬೇಕೆಂದೇ ನೀವು ಆಗ್ರಹಮಾಡಿದರೆ, ನನ್ನದೇನೂ ಅಡ್ಡಿಯಿಲ್ಲ.

ಬರುತ್ತೇನೆ, ಎಂದು ನುಡಿದನು. ಜೋಯಿಸರ ಮೇಲೆ ಪೂರ್ಣ ನಂಬಿಗೆಯನ್ನಿಟ್ಟಿದ್ದ ದಂಡಾಳುಗಳು ಅವರನ್ನು ತಮ್ಮಲ್ಲಿಂದ ಕದಲಗೊಡಲಿಲ್ಲ. ಹೀಗೆ ಸೈನಿಕರ ಮನಸ್ಸನ್ನು ಒಲಿಸಿಕೊಂಡ ಆ ಜೋಯಿಸರು ನಿರ್ಭಯದಿಂದ ಆ ಸೇನಾ ಸಮೂಹದೊಡನೆ ನಡೆದರು.

—— ——

## ೬—ಕೀರ್ತಿಸಿಂಹನು.

ಔರಂಗಾಬಾದದಿಂದ ಸುಮಾರು ನಾಲ್ಕುದಿವಸಗಳ ಹಾದಿಯಮೇಲೆ ಜಯಸಿಂಗನ ದಂಡು ತಳವೂರಿತ್ತು. ಒರ್ಹ್ವಾಣಪುರವನ್ನು ಬಿಟ್ಟಮೇಲೆ ಜಯಸಿಂಗನು ಸೈನ್ಯಕ್ಕೆ ವಿಶ್ರಾಂತಿಯನ್ನೇ ಕೊಟ್ಟಿದ್ದಿಲ್ಲ ಅಲ್ಲಲ್ಲಿ ನಾಲ್ಕಾರುತಾಸು ವಿಶ್ರಮಿಸುವಷ್ಟರಲ್ಲಿಯೇ ಮತ್ತೆ ಅಲ್ಲಿಂದ ಮುಂದಕ್ಕೆ ಹೊರಡುವ ಒಪಿರಿಪಿಯು ಅವರ ಹಿಂದೆ ಇದ್ದೇಇರುತ್ತಿತ್ತು. ಜಯಸಿಂಗನಿಗೆ ನಿದ್ದೆಯೇ ಬೇಕಾಗುತ್ತಿದ್ದಿಲ್ಲ. ಅದರಿಂದ ಅವನ ಉಪದ್ರವಕ್ಕೆ ಬೇಸತ್ತು ಕೆಲವುಜನ ಶಿಪಾಯಿಗಳು ಅವನಿಗೆ ಸೈತಾನಸಿಂಗನೆಂದು ಕರೆಯುತ್ತಿದ್ದರು. ಹದ್ದಿನ ಕಣ್ಣುಗಳಂತೆ ಅವನ ಕಣ್ಣುಗಳು ಬಲುತೀಕ್ಷ್ಣವಾಗಿದ್ದವು. ಅವನು ತನ್ನ ಡೇರೆಯಲ್ಲಿ ಕುಳಿತುಕೊಂಡು, ಎಂದೂ ಕಾಲಕಳೆಯುತ್ತಿದ್ದಿಲ್ಲ. ಕುದುರೆಯ ಮೇಲೆ ಕುಳಿತುಕೊಂಡು ಛಾವಣಿಯಲ್ಲಿ ಅತ್ತಿಂದ ಇತ್ತ ಇತ್ತಿಂದ ಅತ್ತ ತಿರುಗಾಡುತ್ತಿದ್ದನು. ಶಿಪಾಯಿಗಳು ವಿಶ್ರಾಂತಿಸೌಖ್ಯವನ್ನು ಅನುಭವಿಸುತ್ತಿರುವಾಗ ಮಾತ್ರ ಅವನು ಅವರಿಗೆ ಯಾವ ತರದ ತೊಂದರೆಯನ್ನೂ ಕೊಡುತ್ತಿದ್ದಿಲ್ಲ ಆದರೆ ತಳವನ್ನು ಕಿತ್ತಿ ಹೊರಡಲಿಕ್ಕೆ ಅಪ್ಪಣೆಯಾದ ಕೂಡಲೆ, ಸ್ವಲ್ಪಾದರೂ ತಡಮಾಡುವದೂ, ಏನಾದರೂ ನೆವ ಹೇಳುವದೂ ಅವನಿಗೆ ಸೇರುತ್ತಿದ್ದಿಲ್ಲ. ಛಾವಣಿಯು ನಾನಾಪ್ರಕಾರದ ವ್ಯಸನಗಳಿಗೆ ತವರಮನೆಯಾಗಿತ್ತೆಂದು ಹಿಂದಿನ ಪ್ರಕರಣದಲ್ಲಿ ಹೇಳಿದ್ದೇವೆಇಂಥ ವ್ಯಸನಗಳಿಂದ ಸೈನ್ಯದ ಹಲನಚಲನಕ್ಕೆ ತೊಂದರೆಯು ಸಂಭವಿಸುವಂತೆ ತೋರಿದರೆ ಜಯಸಿಂಗನು ಅದನ್ನು ಎಂದೂ ಕ್ಷಮಿಸುತ್ತಿದ್ದಿಲ್ಲ ಈ ಪ್ರಕಾರದ ತೊಂದರೆಯನ್ನುಂಟುಮಾಡಿದ ಮನುಷ್ಯನನ್ನು ಅವನು ಹಳ್ಳೇ ನಿಷ್ಠುರತನದಿಂದ ಶಿಕ್ಷಿಸುತ್ತಿದ್ದನು. ಸ್ವತಃ ಜಯಸಿಂಗನು ಕರ್ತವ್ಯದಕ್ಷನಾದ್ದರಿಂದ ಅವನ ಸಂಗಡ ಬಂದಿದ್ದ ಮನಸಬದಾರರೂ, ಕೂಡ ಸ್ವಕಾರ್ಯದಕ್ಷರಾಗಿದ್ದರು. ಅವರೂ

ತಮ್ಮ ತಮ್ಮ ಕುದುರೆಗಳನ್ನು ಏರಿಕೊಂಡು, ತಮ್ಮ ತಮ್ಮ ಜನರ ವ್ಯವಸ್ಥೆಯನ್ನು ನೋಡುತ್ತಿದ್ದರು ಈ ಮೇರೆಗೆ ಒಂದೇಸವನೆ ಪ್ರಯಾಣಮಾಡುತ್ತ ಮಾಡುತ್ತ ಮೇಲೆ ಹೇಳಿದಂತೆ ಔರಂಗಾಬಾದದ ಸಮೀಪಕ್ಕೆ ಬಂದು ದಂಡು ತಳವೂರಿತು. ಅಲ್ಲಿ ಎರಡು ದಿವಸಗಳ ವಿಶ್ರಾಂತಿಯೆಂದು ಮೊದಲೇ ಅಪ್ಪಣೆಯಾಗಿತ್ತು. ಅದರಿಂದ ಎಲ್ಲ ಜನರಿಗೂ ಬಹಳ ಆನಂದವಾಗಿತ್ತು. ಇಳಿಹೊತ್ತಿನ ಸುಮಾರಕ್ಕೆ ದಂಡು ಬೀಡು ಬಿಟ್ಟದ್ದರಿಂದ ಎಲ್ಲರೂ ತಮ್ಮ ತಮ್ಮ ಹಾಸುಗೆಯ ಸುರಳಿಗಳನ್ನು ಬಿಚ್ಚಿ ಕಾಲು ಹರಿಯೀಡುವ ಆಲೋಚನೆಯಲ್ಲಿದ್ದರು. ಸ್ವಲ್ಪಹೊತ್ತಿನಲ್ಲಿಯೇ ಡೇರೆಗಳೂ, ತಂಬುಗಳೂ, ಪಡದೆಗಳೂ ಕಟ್ಟಲ್ಪಟ್ಟವು ಗುಡಾರಗಳೂ ಕಟ್ಟಿ ಸಿದ್ಧವಾದವು. ಅಲ್ಲಲ್ಲಿಗೆ ಮೂರು ಮೂರು ಕಲ್ಲುಗಳನ್ನು ಇಟ್ಟು, ಅವುಗಳ ನಡುವೆ ಉರಿಹಚ್ಚಿ ಮೇಲೆ ಪಾತ್ರೆಗಳನ್ನು ಪರಿಸಿದರು. ಛಾವಣಿಯು ತುಂಬ ಹೊಗೆಯು ಹೊರಡಹತ್ತಿತ್ತು. ಅಷ್ಟರಲ್ಲಿ ಸೂರ್ಯನು ಅಸ್ತಂಗತನಾದನು.

ಈ ಸಮಯಕ್ಕೆ ಇಬ್ಬರು ಗೃಹಸ್ಥರು ಕಾಲುನಡಿಗೆಯಿಂದ ಆ ಛಾವಣಿಯ ಒಂದು ಮಗ್ಗಲಿನಿಂದ ಹೊರಬಿದ್ದು ಹೊರಟರು; ಅವರಲ್ಲಿ ಒಬ್ಬನು ಫಕೀರರಂಥ ಸ್ಟೈಲಾದ ಕಫನಿಯನ್ನು ತೊಟ್ಟುಕೊಂಡಿದ್ದನು. ಅದು ಪಾದದವರೆಗೆ ಇಳಿಬಿದ್ದಿತ್ತು. ನಡಕ್ಕೆ ನಡುಕಟ್ಟು ಸುತ್ತಿದ್ದನು. ತಲೆಗೆ ಒಳ್ಳೇ ದೊಡ್ಡದಾದದ್ದೂ, ಎತ್ತರವಾದದ್ದೂ ಆದ ಪಂಜಾಬೀತರದ ಮುಂಡಾಸವನ್ನು ಸುತ್ತಿದ್ದನು. ಅವನ ಗಡ್ಡ ಮೀಸೆಗಳು ಒಳ್ಳೇ ಭವ್ಯವಾಗಿದ್ದವು. ಮತ್ತು ಅವು ಹುರಿಮಾಡಲ್ಪಟ್ಟು ಮೇಲಕ್ಕೇರಿಸಲ್ಪಟ್ಟಿದ್ದವು. ಕೈಯಲ್ಲಿ ಕತ್ತಿ ಮುಂತಾದ ಆಯುಧಗಳೇನೂ ಇದ್ದಿಲ್ಲ. ಕಫನಿಯ ಒಳಮಗ್ಗಲು ಏನಾದರೂ ಇದ್ದರೆ ಆದು ಯಾರಿಗೂ ಕಾಣುತ್ತಿದ್ದಿಲ್ಲ. ನೋಡುವವರಿಗೆ ಅವನು ಎಲ್ಲಿಯೋ ಹೊರಗೆ ತಿರುಗಾಡಲಿಕ್ಕೆ ಹೊರಟವನಂತೆ ಕಾಣುತ್ತಿದ್ದನು. ಅವನ ಒಂದು ಕೈಯಲ್ಲಿ ಉದ್ದವಾದ ಒಂದು ಕೋಲು ಇತ್ತು. ಮತ್ತೊಂದು ಕೈಯಲ್ಲಿ ಒಂದು ದೊಡ್ಡ ತಂಬಿಗೆಯನ್ನು ಹಿಡಿದಿದ್ದನು. ಅವನ ಸಂಗಡಿಗನ ಪೋಷಾಕು ಬೇರೆ ತರದ್ದಿತ್ತು. ಅವನು ತಲೆಗೆ ಒಂದು ಉದ್ದವಾದ ಟೊಪ್ಪಿಗೆಯನ್ನು ಹಾಕಿದ್ದನು. ಅವನ ಗಡ್ಡಗಳು ಎದೆಯವರೆಗೆ ಇಳಿಬಿದ್ದಿದ್ದವು. ಮೈಯೊಳಗೆ ಟೊಂಕದ ತನಕ ಅಗುವಷ್ಟು ಒಂದು ಬಗಲಗಸಿ ಅಂಗಿಯನ್ನು ತೊಟ್ಟಿದ್ದನು. ಅದಕ್ಕೆ ಹನ್ನೆರಡು ಕಸಿಗಳು ಇದ್ದವು. ಅವನು ಚಣ್ಣವನ್ನು ಹಾಕಿದ್ದನು. ಅದು ಪಾದದ ಕಡೆಗೆ ಸಣ್ಣಾಗುತ್ತ ಮೇಲ್ಭಾಗದಲ್ಲಿ ಒಳ್ಳೇ ಅಗಲಾಗಿತ್ತು. ಅವನ ಕೈಯಲ್ಲಿಯೂ ಶಸ್ತ್ರವಿದ್ದಿಲ್ಲ; ಅವರಿಬ್ಬರೂ ಛಾವಣಿಯಿಂದ

ಹೊರಬಿದ್ದ ಕೂಡಲೆ ಸುತ್ತುಮುತ್ತು ನೋಡದೆ ಸುಮ್ಮನೇ ತಮ್ಮ ದಾರೀಹಿಡಿದು ನಡೆದಿದ್ದರು. ದಂಡಾಳುಗಳ ಲಕ್ಷವೂ ಅವರ ಕಡೆಗೆ ಇದ್ದಂತೆ ತೋರಲಿಲ್ಲ. ಯಾಕಂದರೆ ಅವರೆಲ್ಲರೂ ತಮ್ಮ ತಮ್ಮ ಕೆಲಸಗಳಲ್ಲಿಯೇ ಮನಸ್ಸುಳ್ಳವರಾಗಿದ್ದರು. ಇದಲ್ಲದೆ ಅವರಿಬ್ಬರಲ್ಲಿ ಒಬ್ಬನ ಕೈಯೊಳಗೆ ತಂಬಿಗೆ ಇತ್ತಾದಕಾರಣ ಅವರಿಬ್ಬರೂ ಕೂಡಿ ಸಮೀಪದಲ್ಲಿರುವ ಹೊಳೆಗೆ ನೀರು ತರಲಿಕ್ಕಾಗಲಿ, ಬಹಿರ್ದೆಸೆಗಾಗಲಿ ಹೋಗುತ್ತಿರಬಹುದೆಂಬ ಅನುಮಾನದಿಂದ ಯಾರೂ ಅವರ ಕಡೆಗೆ ಲಕ್ಷಕೊಟ್ಟಿರಲಿಕ್ಕಿಲ್ಲ. ಯಾಕಂದರೆ ಆ ಸಮಯವೇ ಅಂಥದಿತ್ತು. ಬೇಕಾದವರು ಬೇಕಾದಲ್ಲಿ ಹೋಗಲಿಕ್ಕೆ ಅಡ್ಡಿ ಇದ್ದಿಲ್ಲ. ತಮ್ಮ ಮನಸಿಗೆ ಬಂದ ಕೆಲಸಗಳನ್ನು ಮಾಡಲಿಕ್ಕೆ ಯಾರ ಪ್ರತಿಬಂಧವೂ ಇದ್ದಿಲ್ಲ. ಛಾವಣಿಯ ಬೇರೆ ಬೇರೆ ಮಗ್ಗುಲುಗಳಿಂದ ಇವರಂತೆಯೇ ಇಬ್ಬಿಬ್ಬರು ನಾಲ್ನಾಲ್ಕುಮಂದಿ ಹೋಗುತ್ತಲೂ ಬರುತ್ತಲೂ ಇದ್ದರು. ಆದರೆ ನಮಗೆ ಮೇಲೆ ವರ್ಣಿಸಿದ ಇಬ್ಬರು ಗೃಹಸ್ಥರ ಸಂಬಂಧವಿದ್ದದರಿಂದ ಬೇರೆ ಜನರ ಕಡೆಗೆ ನಾವು ಲಕ್ಷಕೊಡುವ ಕಾರಣವಿಲ್ಲ.

ಮೇಲೆ ಹೇಳಿದ ಪ್ರಕಾರ ಆ ಇಬ್ಬರು ಗೃಹಸ್ಥರು ತಮ್ಮ ತಮ್ಮೊಳಗೆ ಏನೇನೋ ಮಾತಾಡುತ್ತ ನಡೆದಿದ್ದರು. ಜನರ ಗದ್ದಲವು ವಿಶೇಷವಾಗಿದ್ದ ಕಡೆಗೆ ಅವರು ಹೋಗುತ್ತಿದ್ದಿಲ್ಲ. ತಮ್ಮ ಕಡೆಗೂ ತಾವು ಆಡುವ ಮಾತಿನ ಕಡೆಗೂ ಯಾರಾದರೂ ಲಕ್ಷಕೊಟ್ಟಾರೆಂದು ಅವರು ಒಳ್ಳೇ ಸಾವಕಾಶವಾಗಿ ಮಾತಾಡುತ್ತಿದ್ದರು. ಛಾವಣಿಯನ್ನು ಬಿಟ್ಟು ಬಹು ದೂರ ಅಂತರವನ್ನು ಕ್ರಮಿಸಿಹೋದ ಬಳಿಕ ಅವರು ಗಂಟಲವನ್ನು ಸಡಿಲು ಬಿಟ್ಟು ಮಾತಾಡಹತ್ತಿದರು. ಆದಾಗ್ಯೂ ತಮ್ಮ ಮಾತು ಯಾರಿಗೂ ಕೇಳಿಸದಷ್ಟು ಮೆಲ್ಲಗೆ ಅವರು ಮಾತಾಡುತ್ತಿದ್ದರು. ಮಾತಾಡುತ್ತ ಮಾತಾಡುತ್ತ ಬರಲು ಛಾವಣಿಯು ಬಹಳ ದೂರ ಉಳಿಯಿತು. ಆಗ ಅವರೊಳಗಿನವನೊಬ್ಬನು ಮತ್ತೊಬ್ಬನನ್ನು ಕುರಿತು—ಇಷ್ಟು ದಿವಸಗಳವರೆಗೆ ನಾನು ಇಲ್ಲಿ ಹೀಗೆ ಇದ್ದದ್ದರಿಂದ ನನಗೆ ಹೇಳತಕ್ಕಷ್ಟು ಲಾಭವೇನೂ ಆಗಲಿಲ್ಲ. ಆದರೂ ಮಹಾರಾಜರಿಗೆ ಕೆಲವು ಮಹತ್ವದ ಸುದ್ದಿಗಳನ್ನು ಕಳಿಸಲಿಕ್ಕೆ ಅನುಕೂಲವಾಯಿತು. ಅವುಗಳಿಂದ ಮಹಾರಾಜರು ತಾವು ಇಲ್ಲಿಯವರೆಗೆ ನಡೆದಂತೆ ಇನ್ನು ಮುಂದೆ ನಡೆಯುವದು ಶಕ್ಯವಿಲ್ಲೆಂದು ಬಹುಶಃ ಅನುಮಾನ ಮಾಡಿರಬಹುದು. ಇಲ್ಲಿಯವರೆಗೆ ನಾವು ನೋಡಿದ ಸಂಗತಿಗಳಿಂದಲೂ, ಅನುಭವಿಸಿದ ಸಂಗತಿಗಳಿಂದಲೂ ಜಯಸಿಂಗನು ಸಾಧಾರಣ ಪ್ರತಿಯ ಮನುಷ್ಯನಲ್ಲೆಂಬದು ನಮಗೆ ಪೂರ್ಣವಾಗಿ ಮನವರಿಕೆಯಾಗಿರುತ್ತದೆ. ಅವನು ಬಹಳ

ಧೋರಣೆಯೂ, ದೃಢನಿಶ್ಚಯವುಳ್ಳವನೂ ಆಗಿರುವನು. ರಾಮಸಿಂಗನು ಮಹಾರಾಜರಿಗೆ ಬರೆದ ಪತ್ರದಲ್ಲಿ ಅವನ ವಿಷಯವಾಗಿ ಬರೆದ ವರ್ಣನೆಯು ಯಥಾರ್ಥವಾಗಿರುವದು. ಅಹಹ! ಇಂಥ ಮನುಷ್ಯನು ಅನುಕೂಲವಾದರೆ ನಮಗೆ ಇನ್ನು ಏನು ಬೇಕು? ಇದೆಲ್ಲ ನಿಜವು; ಆದರೆ ಜಯಸಿಂಗನ ಮನಸ್ಸಿನಲ್ಲಿ ಇಂಥ ಸದ್ಬುದ್ಧಿಯು ಹುಟ್ಟುವ ಬಗೆ ಯಾವದು? ಅವನು ತನ್ನ ಎಲ್ಲ ಪರಾಕ್ರಮವನ್ನೂ, ನಿಶ್ಚಯವನ್ನೂ, ಮುತ್ಸದ್ದಿತನವನ್ನೂ, ಚಾತುರ್ಯವನ್ನೂ ಮಹಾರಾಜರನ್ನು ಪಾತಾಳಕ್ಕೆ ಮೆಟ್ಟುವದರಲ್ಲಿ ಉಪಯೋಗಿಸತಕ್ಕವನಿರುತ್ತಾನೆ. ಅವನು ತಾನು ವಹಿಸಿಕೊಂಡ ಕಾರ್ಯದಲ್ಲಿ ತುಸ ದುರ್ಲಕ್ಷ ಮಾಡಿದರೆ, ಮಹಾರಾಜರ ಇಚ್ಛೆಯು ಹಾ ಹಾ ಅನ್ನುವಷ್ಟರಲ್ಲಿ ಈಡೇರುವದು. ಈವೊತ್ತಿನ ವರೆಗೆ ಅವರು ಎಷ್ಟು ಸಂಕಟಗಳನ್ನು ಅನುಭವಿಸಿದರು? ಎಷ್ಟು ದುಃಖಗಳನ್ನು ತಾಳಿಕೊಂಡರು? ಆದಾಗ್ಯೂ ಅವರು ತಮ್ಮ ನಿಶ್ಚಯವನ್ನು ಸ್ವಲ್ಪಾದರೂ ಬಿಟ್ಟಿಲ್ಲ. ಯಾಕಂದರೆ ಅವರು ಕೈಕೊಂಡ ಈ ಕಾರ್ಯವು ಸ್ವಾರ್ಥಮೂಲವಾದದ್ದಲ್ಲ. ತಮ್ಮ ಧರ್ಮಕ್ಕೂ, ತಮ್ಮ ದೇಶದೊಳಗಿನ ಬಡಬಗ್ಗರಿಗೂ ಆಗುತ್ತಿರುವ ತೊಂದರೆಗಳನ್ನು ದೂರಮಾಡುವದೇ ಅವರ ಮುಖ್ಯೋದ್ದೇಶವಾಗಿರುವದು. ಸ್ವಾರ್ಥವನ್ನು ಸಾಧಿಸಿಕೊಳ್ಳುವದು ಅವರ ಮನಸ್ಸಿನಲ್ಲಿದ್ದರೆ, ವಿಜಾಪುರದ ಬಾದಶಾಹಿಯನ್ನು ಆಗಲೇ ಅವರು ತಮ್ಮ ಕೈಯಲ್ಲಿ ತೆಗೆದುಕೊಳ್ಳುತ್ತಿದ್ದರು. ಈ ಕಾರ್ಯವು ಅವರಿಗೆ ಬಹು ಸುಲಭವಾಗಿ ಕೈಗೂಡುತ್ತಿತ್ತು. ಆದರೆ ನಮ್ಮ ಧರ್ಮಕ್ಕೆ ಒದಗುತ್ತಿದ್ದ ತಾಪವನ್ನೂ ಗೋಬ್ರಾಹ್ಮಣರ ಘಾತವನ್ನೂ, ಪತಿವ್ರತೆಯರ ಭ್ರಷ್ಟತೆಯನ್ನೂ ಸಾರಾಂಶ, ಒಂದೇ ಮಾತಿನಲ್ಲಿ ಹೇಳಬೇಕಂದರೆ ವೈದಿಕಧರ್ಮದ ನಿರ್ಭತ್ಸನೆಯನ್ನೂ ನಿಲ್ಲಿಸುವದೇ ಅವರು ಕೈಕೊಂಡ ಕಾರ್ಯದ ಮುಖ್ಯ ಹೇತುವಾಗಿರುವದು. ಅವರಿಗೆ ಯಾವ ದೊಡ್ಡ ಮನುಷ್ಯನ ಸಹಾಯವೂ ಇಲ್ಲ. ಬಡಬಗ್ಗರಾದ ಮಾವಳೀ ಜನರೂ, ನಮ್ಮಂಥ ಬಾವಾ ಗೋಸಾವಿಗಳೂ, ಅವರಿಗೆ ಸಹಾಯಕರು. ಜಸವಂತಸಿಂಗ ಜಯಸಿಂಗ ಇವರಂಥ ಒಬ್ಬಿಬ್ಬ ಸರದಾರರು ಮಹಾರಾಜರಿಗೆ ಕೂಡಿದರೆ, ಕೆಲಸವು ಬೇಗನೆ ಸಫಲವಾಗುವದು. ಇತ್ತ ಕಡೆಯ ಕಾರ್ಯಭಾಗವನ್ನು ಮಹಾರಾಜರು ನೆರವೇರಿಸುವರು. ಅತ್ತ ಕಡೆಯ ಕಾರ್ಯಭಾಗವನ್ನು ಮೇಲೆ ಕಾಣಿಸಿದ ಉಭಯ ಸರದಾರರಲ್ಲಿ ಯಾವನಾದರೂ ಒಬ್ಬ ಸರದಾರನಾಗಲಿ, ಇಬ್ಬರೂ ಒಮ್ಮನಸ್ಸಿನಿಂದಾಗಲಿ ಕೈಕೊಂಡರೆ ಅದು ನೆರವೇರುವದು.''

ಈ ಪ್ರಕಾರ ಮೊದಲನೇ ವ್ಯಕ್ತಿಯು ಆಡುವ ಮಾತುಗಳನ್ನು ಎರಡನೇ ವ್ಯಕ್ತಿಯು ಸ್ವಸ್ಥಚಿತ್ತದಿಂದ ಕೇಳಿಕೊಳ್ಳುತ್ತಿದ್ದನು. ಯಾವ ಮಾತಿಗೂ ಅವನು ಸಮ್ಮತಿಯನ್ನು ಕೊಡಲಿಲ್ಲ ವಿರುದ್ಧಾಭಿಪ್ರಾಯವನ್ನೂ ವ್ಯಕ್ತಪಡಿಸಲಿಲ್ಲ. ಆದರಿಂದ ಮೊದಲನೇಯವನು,—ಒಳ್ಳೇದು, ಆ ವಿಷಯವಾಗಿ ವಿಶೇಷಮಾತಾಡ ತಕ್ಕದ್ದಿರುವದಿಲ್ಲ. ತಾವು ನನಗೆ ವಚನಕೊಟ್ಟ ಪ್ರಕಾರ ನನ್ನ ಈ ಕಾರ್ಯ ಭಾಗವನ್ನು ನೆರವೇರಿಸತಕ್ಕದ್ದು. ಸುದೈವದಿಂದ ತಮ್ಮಂಥ ಕೆಲವು ಜನರು ಇಂಥ ಸಹಾಯವನ್ನಾದರೂ ಮಾಡಲಿಕ್ಕೆ ನಮಗೆ ದೊರಕಹತ್ತಿರುವರು. ಇದೇನು ಸಾಮಾನ್ಯವೆ? ಇಂದಿಲ್ಲ ನಾಳೆಯಾದರೂ ಇದರ ಸುಪರಿಣಾಮವಾಗ ಲಿಕ್ಕೆ ಬೇಕು. ಇದು ಇನ್ನು ಮುಂದೆ ಹೀಗೆ ಸಾಗತಕ್ಕದ್ದು. ನಾನು ಮೇಲೆ ಹೇಳಿದಂಥ ಕೆಲವು ವ್ಯಕ್ತಿಗಳು ಉತ್ತರಹಿಂದುಸ್ತಾನದಲ್ಲಿ ಹುಟ್ಟಬಹುದು. ಮತ್ತು ನಮ್ಮ ಮನಸಿನಂತೆ ಎಲ್ಲ ಕಾರ್ಯಗಳು ಜರಗಬಹುದು. ಆ ಬಗ್ಗೆ ನಾವು ಈ ಹೊತ್ತು ಚಿಂತೆಮಾಡುವ ಕಾರಣವಿಲ್ಲ. ನೀವು ನನಗೆ ವಚನಕೊಟ್ಟ ಪ್ರಕಾರ ಈ ಪತ್ರವನ್ನು ಒಯ್ದುಕೊಡಿರಿ. ನಿಮ್ಮ ಹಿಂದಿನಿಂದ ನಾನೂ ಬರು ವೆನು. ಇಲ್ಲವೆ ಔರಂಗಾಬಾದಕ್ಕೆ ಹೋದ ಮೇಲೆ ಎರಡನೇ ಪತ್ರವನ್ನು ಒಯ್ಯ ಲಿಕ್ಕೆ ಇನ್ನೊಬ್ಬ ಮನುಷ್ಯನನ್ನು ಹುಡುಕುವೆನು. ನಾವು ನಮ್ಮ ದೇಶದಲ್ಲಿ ಬಂದಿರುವೆವ; ನಮಗೆ ಮನುಷ್ಯರ ಕೊರತೆಯಾಗುವ ಸಂಭವವಿಲ್ಲ. ಈಗ ನೀವು ನನ್ನ ಈ ಕೆಲಸವನ್ನು ಮಾಡಿದರೆ ನಾನು ನಿಮಗೆ ಋಣಿಯಾಗುವೆನು. ತಾವು ರಜಪೂತರಿರುವಿರಿ. ತಮಗಾದರೂ ಈ ಸಂಗತಿಯು ಅಭಿಮಾನವಿರ ಲಿಕ್ಕೆ ಬೇಕು.''

ಮೊದಲನೇ ಗೃಹಸ್ಥನು ಆಡಿದ ಈ ಮಾತುಗಳನ್ನು ಕೇಳಿ, ಎರಡನೇ ಗೃಹ ಸ್ಥನು ಗಹಗಹಿಸಿ ನಗಹತ್ತಿದನು. ಇವನು ಒಮ್ಮೆಲೆ ಇಷ್ಟು ಯಾಕೆ ನಗುತ್ತಾ ನೆಂಬದು ಮೊದಲನೇ ಗೃಹಸ್ಥನ ಮನಸ್ಸಿನಲ್ಲಿ ಬರಲೊಲ್ಲದು. ಕಡೆಗೆ ಆ ನಗೆ ಯಿಂದ ಅವನಿಗೆ ಸಿಟ್ಟುಬಂತು. ಆಗ ಅವನು—ಎಲಾ ಗೃಹಸ್ಥಾ, ಈಗ ಎಂಟು ದಿವಸಗಳಿಂದ ನಮ್ಮ ನಿಮ್ಮ ಮಾತುಗಳಾಗಿ ನೀವು ನನ್ನ ಪತ್ರವನ್ನು ಒಯ್ದು ಕೊಡಲಿಕ್ಕೆ ಒಪ್ಪಿಕೊಂಡಿರಿ. ಆ ಪ್ರಕಾರ ವೇಷಾಂತರಮಾಡಿ ಪೋಷಾಕು ಹಾಕಿಕೊಂಡು ಬಂದಿರಿ. ಪ್ರಾರಂಭಕ್ಕೆ ನಿಮ್ಮ ವೇಷವನ್ನು ನೋಡಿದ ಕೂಡಲೆ ನನಗೆ ನಿಮ್ಮ ಗುರ್ತು ಸಹ ಹತ್ತಲಿಲ್ಲ. ನಾನು ನಿಮ್ಮ ಕಡೆಗೆ ಪತ್ರವನ್ನು ಕೊಟ್ಟೆನು. ನೀವು ತೆಗೆದುಕೊಂಡು ಹೊರಟಿರಿ. ಇಷ್ಟೆಲ್ಲ ಸಂಗತಿಗಳು

ಆಗಿ, ಈಗ ನಾನು ಎಷ್ಟು ಮಾತುಗಳನ್ನು ಆಡಿದರೂ, ನೀವು ಅವುಗಳನ್ನು ಸುಮ್ಮನೆ ಕೇಳಿಕೊಂಡು ಒಂದು ಚಕಾರ ಶಬ್ದವನ್ನು ಮಾತಾಡದೆ, ಒಂದೇಸವನೆ ನಗುತ್ತೀರಲ್ಲ! ಇದಕ್ಕೇನು ಅನ್ನಬೇಕು?

"ನಿಮ್ಮ ಭೋಳೇತನವನ್ನು ಕಂಡು ಯಾರಿಗೆ ನಗೆಬರಲಿಕ್ಕಿಲ್ಲ; ಹೇಳಿರಿ ನೋಡುವಾ?" "ನನ್ನ ಭೋಳೇತನವೇ? ನನ್ನ ಭೋಳೇತನವೇನು ನಿಮ್ಮ ದೃಷ್ಟಿಗೆ ಬಿತ್ತು?" ನಿಮ್ಮಲ್ಲಿರುವ ಭೋಳೇತನವು, ಅಥವಾ ಅದಕ್ಕೆ ಅರ್ಧಕೆಲಸ ಮಾಡುವ ಗುಣವೆಂದು ಅಂದುಕೊಳ್ಳಿರಿ. ಅದೇ ನನ್ನ ದೃಷ್ಟಿಗೆ ಬಿತ್ತು. ನಾನೇನು ಸುಮ್ಮ ಸುಮ್ಮನೆ ಹುಟ್ಟಿಸಿಕೊಂಡು ಹೇಳುವೆನೆ? ನೀವು ನಮ್ಮ ಛಾವಣಿಯಲ್ಲಿ ಪ್ರವೇಶಮಾಡಿ ಎಷ್ಟು ದಿವಸಗಳಾದವು? ನಿಮ್ಮ ನಮ್ಮ ಪರಿಚಯು ಅಥವಾ ಸ್ನೇಹ ವಾಗಿ ಎಷ್ಟು ದಿವಸಗಳಾದವು? ಇಷ್ಟು ದಿವಸಗಳಲ್ಲಿ ನೀವು ಯಾರ ಯಾರ ವಿಷಯು ವಾಗಿ ಏನೇನು ಅನುಮಾನಗಳನ್ನು ತೆಗೆದಿರುವಿರಿ? ನಿಮ್ಮ ವಿಷಯುವಾಗಿ ಯಾರಾರು ಏನೇನು ಅಭಿಪ್ರಾಯಪಟ್ಟಿರುವರು? ಎಂಬದನ್ನು ನೀವು ತಿಳಿದಿರುವಿರೋ? ಈ ನಮ್ಮ ಛಾವಣಿಯೊಳಗಿನ ಎಲ್ಲ ಜನರು ಭೋಳೇಜನರಿರುವರೆಂದು ನಿಮ್ಮ ತಿಳ ವಳಿಕೆಯುಂಟೇನು? ಯಾರಿಗೂ ನಿಮ್ಮ ಗುರುತು ಹತ್ತಿರುವಲ್ಲೆಂದು ನಿಮ್ಮ ಮನವರಿಕೆಯಾಗಿರುವದೇನು? ಹಾಗೆ ಯಾಕೆ ತಿಳಕೊಂಡಿರುವಿರಿ? ಇನ್ನೂವರೆಗೆ ನಿಮ್ಮ ಗುರುತು ಯಾಂಗೂ ಹತ್ತಿಲ್ಲೆಂದು ನಿಮ್ಮ ತಿಳುವಳಿಕೆಯಿರುವದೇನು? ನನ್ನನ್ನು ಯಾರೂ ಗೊತ್ತುಹಿಡಿಯುಲಿಕ್ಕಿಲ್ಲೆಂಬ ನಂಬಿಗೆಯಿಂದ ನೀವು ನಮ್ಮ ಛಾವಣಿಯಲ್ಲಿ ಪ್ರವೇಶಮಾಡಿದ್ದು ಹೆಚ್ಚಿನ ಧೈರ್ಯವು. ಈ ನಿಮ್ಮ ಧೈರ್ಯವನ್ನು ಎಷ್ಟು ವರ್ಣಿಸಿದರೂ ಕಡಿಮೆಯೇ ಸರಿ. ಈ ಮೇರೆಗೆ ಪೂರ್ಣವಾಗಿ ವಿಚಾರ ಮಾಡದೆ ಸಾಹಸವನ್ನು ಮಾಡಿದರೆ, ಅಕಸ್ಮಾತ್ತಾಗಿ ಘಾತವಾಗಲಿಕ್ಕಿಲ್ಲವೆ? ಈ ಪ್ರಶ್ನವು ನಿಮ್ಮ ಮನಸಿನಲ್ಲಿ ಮುಂಚೆ ಬಂದಿದ್ದರೆ ನಿಮ್ಮಿಂದ ಇಂಥ ಸಾಹಸದ ಕೆಲಸವಾಗುತ್ತಿದ್ದಿಲ್ಲ ನೀವು ನಿಮ್ಮ ವೇಷದಿಂದ ನಮ್ಮನ್ನು ಮೋಸಗೊಳಿಸಲು ಯತ್ನಿಸಿದಿರಿ. ಆದರೆ ನಾನು ನಿಮ್ಮನ್ನು ಅನುಸರಿಸಿ ನಡೆದು ನಿಮಗೆ ಮೋಸಮಾಡ ಲಿಲ್ಲವೆ? ನೀವು ನನ್ನ ಮೇಲೆ ಪೂರ್ಣವಾಗಿ ವಿಶ್ವಾಸವಿಡುವಂತೆ ಮಾಡಿಕೊಂಡು, ನಿಮ್ಮಿಂದ ಪತ್ರವನ್ನು ತೆಗೆದುಕೊಂಡೆನೋ ಇಲ್ಲವೋ? ನಿಮ್ಮ ಗುರುತು ಹಿಡಿದು ನೀವು ಯಾವ ಉದ್ದೇಶದಿಂದ ನಮ್ಮ ಛಾವಣಿಯುಲ್ಲಿ ಸೇರಿರುವಿರೆಂಬದನ್ನು ಅರಿತು ನಿಮ್ಮ ಹೊಟ್ಟೆಯಲ್ಲಿ ಹೊಕ್ಕು ನೀವು ಕಳಿಸುವ ಗುಪ್ತಪತ್ರವನ್ನು ತಕ್ಕೊಳ್ಳುವ ದಕ್ಕಾಗಿಯೇ ಜಯಸಿಂಗ ಮಹಾರಾಜರು ನನ್ನ ಯೋಜನೆಯನ್ನು ಮಾಡಿರು

ವರು. ಇದನ್ನು ನೀವು ಯಾಕೆ ತಿಳಿಯಲಿಲ್ಲ? ಈ ಸಂಶಯವು ನಿಮ್ಮ ಮನಸಿನಲ್ಲಿ ಯಾಕೆ ಬರಲಿಲ್ಲ?

ಈ ಪ್ರಕಾರ ಆ ಎರಡನೇ ಗೃಹಸ್ಥನು ಮಾತಾಡುತ್ತಿರುವಾಗ ಮೊದಲನೇ ಗೃಹಸ್ಥನು ಒಳ್ಳೇ ಚಕಿತನಾಗಿ, ಆ ಗೃಹಸ್ಥನ ಮೋರೆಯನ್ನು ಮಿಕಿ ಮಿಕಿ ನೋಡುತ್ತ ಸುಮ್ಮನೆ ನಿಂತುಕೊಂಡನು. ಅವನ ಮಾತಿನೊಳಗಿನ ಪ್ರತಿಯೊಂದು ಶಬ್ದವು ನಿಜವಿರುವದೆಂದು ಅವನ ಮನವರಿಕೆಯಾಯಿತು. ಒಂದು ಶಬ್ದವು ಕೂಡ ಅವನ ಬಾಯಿಂದ ಹೊರಡಲಿಲ್ಲ. ಏನು ಉತ್ತರಕೊಡಬೇಕೆಂದು ಅವನಿಗೆ ಸೂಚಿಸಲೊಲ್ಲದು. ಇದನ್ನೆಲ್ಲ ಕಂಡು, ಆ ಗೃಹಸ್ಥನಿಗೆ ಬಹಳ ನಗೆ ಬಂತು; ಆಗ ಆ ಗೃಹಸ್ಥನು ಅವನನ್ನು ಕುರಿತು—ಯಾಕೆ? ಸುಮ್ಮನಾದಿರಿ. ಏನೂ ಮಾತಾಡುವದಿಲ್ಲ? ಈಗ ನಿಮಗೆ ನಾನು ಇಷ್ಟು ಹೇಗೆ ಕುರುಡನಂತೆ ನಡೆದೆನೆಂದು ಆಶ್ಚರ್ಯವೆನಿಸುತ್ತಿರಬಹುದಲ್ಲವೆ? ಒಳ್ಳೇದು, ನಿಜವಾಗಿ ಹೇಳಿರಿ; ನೋಡುಗರಾದ ಜನರಿಗೆ ತಿಳಿಯದಂತೆ ಕಣ್ಣುಮುಸುಕು ಮಾಡಿದನೆಂಬ ನಿಮ್ಮ ಭ್ರಾಂತಿಯು ದೂರಾಯಿತೆಂದು ಆಶ್ಚರ್ಯಪಡುತ್ತಿರುವಿರೋ ಅಥವಾ ನನ್ನಂಥ ಪರಕೀಯ ಮನುಷ್ಯನು ನಿಮ್ಮ ಹೊಟ್ಟೆಯಲ್ಲಿ ಹೊಕ್ಕು, ನಿಮ್ಮ ನಂಬಿಗೆಯನ್ನು ಪಡೆದು, ನೀವು ನಿಮ್ಮ ಮಹಾರಾಜರಿಗೆ ಬರೆದ ಗುಪ್ತಪತ್ರವು ಕೈಗೆ ಬೀಳುವ ತನಕ-ಇಷ್ಟೇ ಅಲ್ಲ ಇನ್ನೂ ತನಕ-ನಾನು ಯಾರೆಂಬದನ್ನು ನಿಮಗೆ ತಿಳಿಯಗೊಟ್ಟಿಲ್ಲೆಂಬ ಬಗ್ಗೆ ಆಶ್ಚರ್ಯಪಡುತ್ತೀರೋ? ಯಾವ ಕಾರಣದಿಂದ ನೀವು ಇಷ್ಟು ಚಕಿತರಾಗಿ ಮೌನವನ್ನು ಧರಿಸಿರುವಿರಿ? ನಿಜವಾಗಿ ಹೇಳಿರಿ.

ಈ ಎಲ್ಲ ಮಾತುಗಳು ಆ ಮೊದಲನೇ ಗೃಹಸ್ಥನಿಗೆ ಗಾಯದಮೇಲೆ ಬರೆ ಕೊಟ್ಟಹಾಗೆ ಹೆಚ್ಚೆಚ್ಚು ನೋಯಿಸುತ್ತಿದ್ದವು. ಎರಡನೇ ಗೃಹಸ್ಥನು ಎಷ್ಟು ಮಾತಾಡಿದರೂ ಆತನು ಒಂದು ತುಟಿ ಎರಡು ಮಾಡಲಿಲ್ಲ. ಯಾವನೊಬ್ಬ ಯಕ್ಷನಾಗಲಿ, ರಾಕ್ಷಸನಾಗಲಿ ಒಬ್ಬಾನೊಬ್ಬ ಮನುಷ್ಯನ ಮೇಲೆ ಮೋಹಿನೀ ಮಂತ್ರವನ್ನು ಹಾಕಿದರೆ ಅವನ ಅವಸ್ಥೆಯು ಹ್ಯಾಗಾಗುವದೋ ಹಾಗೆ ಆತನ ಗತಿಯಾಯಿತು. ಇನ್ನು ಮುಂದೆ ಏನು ಮಾಡಬೇಕೆಂಬದು ಅವನಿಗೆ ಬಗಿಹರಿಯದಾಯಿತು. ಆಗ ಅವನು ಮನಸಿನಲ್ಲಿ—ನನ್ನ ಕೂಡ ಮಾತಾಡುವ ಈ ಗೃಹಸ್ಥನು ನಿಜವಾಗಿ ಯಾರಿರಬಹುದು? ಈಗ ನಾನು ಈ ಗೃಹಸ್ಥನ ಮೇಲೆ ಶಾರೀರಿಕ ಬಲದ ಉಪಯೋಗ ಮಾಡಬೇಕೆಂದರೆ ಅದು ಸಹ ಸಾಧಿಸುವಂತಿಲ್ಲ. ಯಾಕಂದರೆ ಈತನು ನನಗಿಂತ ಒಳ್ಳೇ ಕಸುವುಳ್ಳವನಾಗಿರುವನು; ಮತ್ತು ಇವನು

ಶಸ್ತ್ರಾಸ್ತ್ರಗಳಲ್ಲಿ ಒಳ್ಳೇ ನಿಪುಣನಿರಲಿಕ್ಕೆಬೇಕೆಂಬದು ನನಗೆ ತಿಳಿದಿರುವದು. ಆದ್ದರಿಂದ ಈಗ ಏನು ಮಾಡಲಿ? ಎಂದು ಯೋಚಿಸಹತ್ತಿದನು.

ಹೀಗೆ ಈ ಗೃಹಸ್ಥನು ಮಾತಾಡದೆ ಮೌನಧಾರಣ ಮಾಡಿದ್ದನ್ನು ಕಂಡು, ಉದ್ದವಾದ ಕಫನಿಯನ್ನು ತೊಟ್ಟ ಆ ಗೃಹಸ್ಥನು ಅವನನ್ನು ಕುರಿತು—"ನಿಮ್ಮ ಜ್ಯೋತಿಷಜ್ಞಾನದ ಕೀರ್ತಿಯು ಜಯಸಿಂಗರಾಯನಿಗೆ ತಿಳಿದಾಗಲೇ ಅವರಿಗೆ ಸಂಶಯವು ಹುಟ್ಟಿತು. ಆ ವಿಷಯದಲ್ಲಿ ಅವರ ಮನಸ್ಸು ಬಹಳ. ಆದ್ದರಿಂದ ಅವರು ನಿಮಗೆ ಪ್ರತ್ಯಕ್ಷವಾಗಿ ಭೆಟ್ಟಿಯಾಗಲಿಕ್ಕೆ ವೇಳೆಯು ಇಲ್ಲೆಂದು ಹೇಳಿದಾಗ್ಯೂ ನಿಮ್ಮಲ್ಲಿರುವ ವಿದ್ಯೆಯನ್ನು ಅರಿತುಕೊಳ್ಳುವದಕ್ಕಾಗಿ ನಿಮ್ಮ ಸುತ್ತು ಮುತ್ತು ನೆರೆಯುವ ಜನರೊಳಗೆ ವೇಷಾಂತರದಿಂದ ಕೂಡಿಕೊಂಡು ನಿಮ್ಮ ಚರಿತ್ರವನ್ನು ಅರಿತುಕೊಂಡಿರುವರು. ಮೊದಲನೇ ಸರತಿಗೇ ಅವರು ನಿಮ್ಮನ್ನು ಕಂಡುಹಿಡಿದರು. ನೀವು ನಿಜವಾದ ಜೋಯಿಸರಲ್ಲೆಂತಲೂ, ನಮ್ಮ ಛಾವಣಿಯಲ್ಲಿ ಸೇರಿ ಗುಪ್ತವಾದ ಸಂಗತಿಗಳನ್ನು ತಿಳಕೊಳ್ಳುವದಕ್ಕಾಗಿ ಯಾರಕಡೆಯಿಂದಾದರೂ ಬಂದ ವೇಷಧಾರಿಯಾದ ಜೋಯಿಸರೆಂತಲೂ ಅವರು ನಿಶ್ಚಯಿಸಿದರು. ನೀವು ಅವರನ್ನು ಮೋಸಗೊಳಿಸಲಿಕ್ಕೆ ಬಂದಿರಿ; ಆದರೆ ಅವರು ನಿಮ್ಮನ್ನೇ ಮೋಸಗೊಳಿಸಬೇಕೆಂದು ಆಲೋಚಿಸಿ ನನಗೆ—ಇವರು ಯಾರು? ಯಾರಕಡೆಯಿಂದ ಬಂದಿರುವರು? ಇತ್ಯಾದಿ ಸಂಗತಿಗಳನ್ನು ಇವರ ಹೊಟ್ಟೆಯಲ್ಲಿ ಹೊಕ್ಕು ಅರಿತುಕೋ, ಎಂದು ಆಜ್ಞಾಪಿಸಿದರು. ನಿಮ್ಮ ಸಂಗಡ ನಾನು ಅತಿ ಪರಿಚಯವನ್ನಿಟ್ಟು ನಿಮ್ಮ ಪ್ರಸಾದದ ಅಪೇಕ್ಷೆಯನ್ನು ತೋರಿಸಿದಂದಿನಿಂದ ಪ್ರತಿದಿವಸ ಒಂದು ಸಾರೆ ಅವರ ಬಳಿಗೆ ಹೋಗಿ ನಡೆದ ಸಂಗತಿಗಳನ್ನೆಲ್ಲ ಅವರಿಗೆ ಹೇಳುತ್ತಿದ್ದೆನು. ಅದನ್ನು ಕೇಳಿ ಅವರಿಗೆ ಮಿತಿಮೀರಿ ನಗೆ ಬರುತ್ತಿತ್ತು. ಆಗ ಅವರು ನನ್ನನ್ನು ಕುರಿತು—ನೀನು ನಮ್ಮಿಂದ ಒಡೆದು ಹೋದವನಂತೆ ನಟಿಸಿ ಅವರ ಪೂರ್ಣವಿಶ್ವಾಸವನ್ನು ಪಡೆದು ಅವರು ಒಪ್ಪಿಸಿದ ಕೆಲಸವನ್ನು ಮಾಡು. ಶತ್ರುಗಳಿಂದ ಪ್ರೇರಿತನಾಗಿ ನಮ್ಮ ಛಾವಣಿಯಲ್ಲಿ ಜೋಯಿಸನ ವೇಷದಿಂದ ಹೊಕ್ಕು ಗುಪ್ತಸಂಗತಿಗಳನ್ನು ದೊರಕಿಸಲು ಬಂದ ಎದೆಗಾರನು ಏನೇನು ಮಾಡುತ್ತಾನೆಂಬದನ್ನು ಕಡೆತನಕ ನೋಡು; ನೀನು ಒಳ್ಳೇ ನಂಬಿಗಸ್ಥನೆಂದು ತಿಳಿದು ಅವನು ನಿನಗೆ ಗುಪ್ತಪತ್ರವನ್ನು ಒಯ್ಯಲಿಕ್ಕೆ ಹೇಳಿದರೆ, ಒಪ್ಪಿಕೋ ಹೊರಡಲಿಕ್ಕೆ ಸಿದ್ಧನಾಗು. ಪತ್ರವನ್ನು ಕೈಯಲ್ಲಿ ತೆಗೆದುಕೊಂಡ ಬಳಿಕ ನಮ್ಮ ನಿಜಸ್ವರೂಪವನ್ನು ಅವರಿಗೆ ತೋರಿಸೋಣ, ಅಥವಾ ಹೀಗೆನ್ನುವದಕ್ಕಿಂತ ಅವನ

ನಿಜಸ್ವರೂಪವನ್ನೇ ಅವನಿಗೆ ತೋರಿಸೋಣ, ಇತ್ಯಾದಿ ಸಂಗತಿಗಳನ್ನು ಹೇಳಿದ್ದರು. ತಿಳಿಯಿತೆ? ಇನ್ನೇನು ಬೇಕು ಹೇಳಿರಿ? ಇದೇ ಈಗ ನೀವು ನನ್ನ ಕಡೆಗೆ ಕೊಟ್ಟ ಪತ್ರವು, ನಿಶ್ಚಯವಾಗಿ ಮಹಾರಾಜರ ಕೈಗೆ ಬೀಳುವದು. ಆದರೆ ಅದು ನಿಮ್ಮ ಮಹಾರಾಜರ ಕೈಗೆ ಬೀಳುವದೋ ಇಲ್ಲವೋ ಎಂಬ ಸಂಶಯವು ನಿಮಗೆ ಇರಬಹುದಲ್ಲವೆ?

ಈ ಇಬ್ಬರು ಗೃಹಸ್ಥರಲ್ಲಿ ಒಬ್ಬನು ಜಯಸಿಂಗರಾಜನ ಛಾವಣಿಯಲ್ಲಿ ಸೇರಿದ ಶ್ರೀಧರಸ್ವಾಮಿ ಜೋಯಿಸ ಎಂಬದನ್ನು ನಮ್ಮ ಚಾಣಾಕ್ಷ ವಾಚಕರು ತರ್ಕಿಸಿರಬಹುದು? ಅವನು ಜಯಸಿಂಗನ ಜನರಲ್ಲಿ ಸೇರಿದ ಬಳಿಕ ಅಲ್ಲಿ ತನ್ನ ವರ್ಚಸ್ಸು ಚೆನ್ನಾಗಿ ನೆಲೆಗೊಂಡಿದ್ದನ್ನು ಕಂಡು ತನಗೆ ಅನುಕೂಲನಾಗುವ ಒಬ್ಬ ಮನುಷ್ಯನನ್ನು ಆರಿಸಿ ಅವನ ಕೂಡ ಕೆಲವು ಪತ್ರಗಳನ್ನು ಕೊಟ್ಟು, ದಕ್ಷಿಣಕ್ಕೆ ಮಹಾರಾಜರ ಕಡೆಗೆ ಕಳಿಸಬೇಕೆಂದು ಆಲೋಚನೆ ಮಾಡಿದನು. ಅವನು ಪ್ರಮುಖರಾದ ಕೆಲವು ರಜಪೂತ ಶಿಪಾಯಿಗಳು ತನ್ನ ಕಡೆಗೆ ಬಂದಹೊತ್ತು ಸಾಧಿಸಿ:— ನೋಡಿರಿ? ನಮ್ಮ ಜನರು ಎಂಥ ಮೂರ್ಖರು, ತಾವು ವೈದಿಕಧರ್ಮಾಭಿಮಾನಿಗಳಿದ್ದೇವೆಂಬದನ್ನು ಪೂರಾ ಮರೆತು ಮೊಗಲರ ಸೇವೆಯನ್ನು ಕೈಕೊಂಡು ವೈದಿಕ ಧರ್ಮದ ಸಂರಕ್ಷಣೆಯನ್ನು ಮಾಡಲೆತ್ನಿಸುವವರ ಶಾಸನವನ್ನು ಮಾಡಲಿಕ್ಕೆ ಹೊರಟಿರುವರು; ಇವರಿಗೆ ಏನನ್ನಬೇಕು? ಹೀಗೆ ಒಂದೆರಡು ಮಾತುಗಳನ್ನು ಆಡಿ ಅವನಿಂದ ಏನು ಉತ್ತರ ಹೊರಡುವದೆಂಬದನ್ನು ಪರೀಕ್ಷಿಸುತ್ತಿದ್ದನು. ಅವರಲ್ಲಿ ಒಬ್ಬ ಮನುಷ್ಯನು ತನ್ನ ಮಾತಿಗೆ ಒಪ್ಪಿಕೊಳ್ಳುವವನೂ, ಸಹಾನುಭೂತಿಯನ್ನು ತೋರಿಸುವವನೂ ಹೊರಟನು. ಕೂಡಲೆ ಜೋಯಿಸನು ಅವನ ಕೂಡ ಆಪ್ತಾಲೋಚನೆಗಳನ್ನು ಮಾಡಹತ್ತಿದನು. ಅವನ ಸಂಭಾಷಣದಲ್ಲಿ ಕೆಲವು ಗುಪ್ತಸಂಗತಿಗಳು ತಿಳಿದವು. ಜೋಯಿಸನು ಕೇಳಿದ ಪ್ರಶ್ನೆಗಳಿಗೆಲ್ಲ ಅವನು ಸವಿಸ್ತಾರವಾಗಿ ಉತ್ತರ ಹೇಳುತ್ತಿದ್ದನು. ಆದರಿಂದ ಜೋಯಿಸನಿಗೆ ಬಹಳ ಆನಂದವಾಯಿತು. ಬಳಿಕ ತನಗೆ ಗೊತ್ತಿದ್ದ ಕೆಲವು ಗುಪ್ತಸಂಗತಿಗಳ ಒಂದು ಪತ್ರವನ್ನು ಬರೆದು ಅದನ್ನು ಮಹಾರಾಜರಿಗೆ (ಶಿವಾಜಿಮಹಾರಾಜರಿಗೆ) ಮುಟ್ಟಿಸುವದಕ್ಕಾಗಿ ಆ ರಜಪೂತ ಶಿಪಾಯಿಯ ಸಹಾಯವನ್ನು ಬೇಡಿದನು. ಆ ಶಿಪಾಯಿಯು ಎರಡನೇ ಮಾತಾಡದೆ ಆ ಪತ್ರವನ್ನು ನಾನೇ ತೆಗೆದುಕೊಂಡು ಹೋಗುತ್ತೇನೆಂದು ಹೇಳಿದನು; ಮತ್ತು ಅವನು:—"ನನಗೆ ಮೊಗಲರ ಸೇವೆಯು ಬೇಸರಾಗಿರುವದು. ಶಿವಾಜಿಮಹಾರಾಜರನ್ನು ಕೂಡಿಕೊಳ್ಳಬೇಕೆಂದು ನಾನು

ನಿಶ್ಚಯಿಸಿದ್ದೇನೆ'' ಇನ್ನು ಇಂತಿಷ್ಟು ದಿವಸಗಳಮೇಲೆ ಈ ಭಾವಣಿಯನ್ನು ಬಿಟ್ಟು ಹೊರಡೋಣವೆಂದು ಸಹ ಅವನು ನಿಶ್ಚಯವಾಗಿ ಆಡಿತೋರಿಸಿದನು. ಅದರಿಂದ ಸ್ವಾಭಾವಿಕವಾಗಿಯೇ ಜೋಯಿಸನಿಗೆ ಬಹಳ ಆನಂದವಾಯಿತು. ಮುಂದೆ ಗೊತ್ತಾದ ವೇಳೆಗೆ ಪೋಷಾಕು ಹಾಕಿಕೊಂಡು ಅವನು ಜೋಯಿಸನ ಕಡೆಗೆ ಬಂದನು. ಇವನೇ ಆ ಎರಡನೇ ಗೃಹಸ್ಥನು. ಅವರಿಬ್ಬರೂ ಕೂಡಿ ಒಳ್ಳೇ ಎಚ್ಚರಿಕೆಯಿಂದ ಭಾವಣಿಯೊಳಗಿಂದ ಹೊರಟಬಳಿಕ ಮುಂದೆ ಅವರ ಸಂಭಾಷಣವು ಏನಾಯಿತೆಂಬದು ವಾಚಕರಿಗೆ ಗೊತ್ತೇ ಇರುವದು.

"ಈ ರಜಪೂತ ಶಿಪಾಯಿಯು ನನ್ನನ್ನು ಮೋಸಗೊಳಿಸಿದನು. ನಾನು ತೀರ ಹುಚ್ಚನಂತೆ ಈತನನ್ನು ನಂಬಿದೆನು. ನನ್ನ ವೇಷಕ್ಕೆ ಮರುಳಾದರೆಂಬ ಭರದಲ್ಲಿ ನಾನು ಕುರುಡನಾದೆನು.'' ಎಂದು ಜೋಯಿಸನು ಮನಸಿನಲ್ಲಿಯೇ, ಬಹಳ ಪಶ್ಚಾತ್ತಾಪ ಪಡಹತ್ತಿದನು. ಇನ್ನುಮೇಲೆ ಈ ಶಿಪಾಯಿಗೆ ಯೋಗ್ಯ ಶಾಸನವನ್ನು ಮಾಡಿ ಅವನ ಒಳಿಗೆ ಕೊಟ್ಟ ಪತ್ರವನ್ನು ತಿರುಗಿ ತಕ್ಕೊಂಡು ನಾನು ಇಲ್ಲಿಂದ ಹೊರಟುಹೋಗಬೇಕು, ಎಂದು ಅವನ ಮನಸಿನಲ್ಲಿ ವಿಚಾರಗಳು ಬರಹತ್ತಿದವು. ಅವನ ಮೈಮೇಲೆ ಬೀಳುವದಕ್ಕೂ, ಅವನ ಮೇಲೆ ಶಸ್ತ್ರಪ್ರಯೋಗಮಾಡಲಿಕ್ಕೂ ಅವನ ಬಾಹುಗಳು ಸ್ಫುರಣಹೊಂದಹತ್ತಿದವು. ಈ ಭ್ರಾಂತಿಯ ಭರದಲ್ಲಿ ಅವನು ಒಮ್ಮೆಲೆ ಆ ಶಿಪಾಯಿಯ ಮೈಮೇಲೆ ಏರಿಹೋಗಿ ತನ್ನ ಟೊಂಕದಲ್ಲಿದ್ದ ಶಸ್ತ್ರವನ್ನು ಹಿರಿದು ತೆಗೆದನು.

ಆಗ ರಜಪೂತನು ಶಾಂತ ಮನಸ್ಸಿನಿಂದ ಅವನ ಕೈ ಹಿಡಿದು ಈ ಪ್ರಸಂಗದಲ್ಲಿ ನಿಮ್ಮ ಮನಸ್ಸಿನೊಳಗೆ ಇಂಥ ವಿಚಾರಗಳು ಬರುವದು ಸ್ವಾಭಾವಿಕವು. ಆದರೆ ನಿಮ್ಮ ಮನಸ್ಸಿನಲ್ಲಿ ಈ ತರದ ವಿಚಾರಗಳು ಬರಬಹುದೆಂಬ ಕಲ್ಪನೆಯು ನನ್ನ ಮನಸ್ಸಿನಲ್ಲಿ ಬಂದಿರಲಿಕ್ಕಿಲ್ಲೆಂದು ಮಾತ್ರ ತಿಳಿಯಬೇಡಿರಿ. ನಾನು ಮನುಷ್ಯಸ್ವಭಾವವನ್ನು ಒಲ್ಲೆನು. ಈಗ ನಾನೂ ನೀವೂ ಒಡಿದಾಟಕ್ಕೆ ನಿಲ್ಲುವದೇನು ಬುದ್ಧಿವಂತರ ಕೆಲಸವಲ್ಲ. ನನ್ನನ್ನು ಕೊಂದು ನೀವು ಈ ಪತ್ರವನ್ನು ತಕ್ಕೊಂಡು ಹೋದಿರೆಂದು ತಿಳಿಯಿರಿ. ಅದರಿಂದ ಪ್ರಯೋಜನವೇನು? ಈ ಪತ್ರದಲ್ಲಿ ನಿಮ್ಮ ಮಹಾರಾಜರಿಗೆ ಉಪಯೋಗವಾಗುವ ಅದಾವ ಹೆಚ್ಚಿನ ಸಂಗತಿಯಿರುವದು? ನಾವು ಇಂಥ ಇಂಥ ಸರದಾರರನ್ನು ಒಡಕೊಂಡಿದ್ದೇವೆ ಅವರು ಜಯಸಿಂಗರಾಜರಿಗೆ ಅಂತರಂಗದಲ್ಲಿ ವಿರೋಧವನ್ನು ಮಾಡಿ ನಿಮಗೆ ಗುಪ್ತವಾಗಿ ಸಹಾಯವನ್ನು ಮಾಡುತ್ತೇವೆಂದು ವಚನ ಕೊಟ್ಟಿರುತ್ತಾರೆ; ಅಥವಾ ಜಯಸಿಂಗರಾಜನ

ದಂಡು ಇಂಥ ವಿಶಿಷ್ಟ ಸ್ಥಳಕ್ಕೆ ಬಂದ ಕೂಡಲೆ ಅದರ ಮೇಲೆ ನೀವು ಹಲ್ಲಾ ಮಾಡಿರಿ; ಅಂದರೆ ಅದು ಸಂಪೂರ್ಣವಾಗಿ ನಾಶಹೊಂದುವದು. ಇಂಥ ಮಹತ್ವದ ಸಂಗತಿಗಳನ್ನೇನಾದರೂ ಬರೆದಿರುವಿರೇನು? ಹೇಳಿರಿ. ಹಾಗೇನೂ ಇರದಿದ್ದರೆ ನಿಷ್ಕಾರಣವಾಗಿ ನನ್ನ ಮೇಲೆ ಶಸ್ತ್ರವನ್ನು ಎತ್ತಿ ಪತ್ರವನ್ನು ಕಸಕೊಳ್ಳುವದರಲ್ಲಿ ಲಾಭವೇನು? ಈಗ ನಿಮ್ಮ ಪತ್ರದಲ್ಲಿ ಬರೆದ ಸಂಗತಿಗಳನ್ನು ನಾನು ಹೇಳುತ್ತೇನೆ, ಕೇಳಿರಿ. "ಈವೊತ್ತಿನ ತನಕ ಆದ ಸಂಗತಿಗಳಂತೆಯೇ ಇನ್ನು ಮುಂದಿನ ಸಂಗತಿಗಳೆಂದು ತಿಳಿಯಬೇಡಿರಿ." ಇಷ್ಟೇ ಅಲ್ಲವೇ ನೀವು ಬರೆದದ್ದು, ಇದಕ್ಕೂ ಹೆಚ್ಚಿನದೇನಾದರೂ ಇರುವದೋ? ಒಳ್ಳೇದು. ಮತ್ತೊಂದು ಸಂಗತಿಯನ್ನು ವಿಚಾರ ಮಾಡಿರಿ. ನಾನು ಹೊರಗೆ ಹೊರಡಬೇಕಾದರೆ ಕೇವಲ ನಿಶ್ಶಸ್ತ್ರನಾಗಿ ಹೊರಟಿರುವೆನೆಂದು ತಿಳಿಯುತ್ತೀರೋ? ನನ್ನ ಮೇಲೆ ಏನಾದರೂ ಕೆಟ್ಟ ಪ್ರಸಂಗವು ಒದಗಿದರೆ ನಾನು ಸುಮ್ಮನೆ ಕೂಡ್ರತಕ್ಕವನೇ? ಇದರಿಂದ ನೀವು ಇನ್ನೂ ಕಚ್ಚಾಸ್ಥಿತಿಯಲ್ಲಿರುವಂತೆ ತೋರುತ್ತದೆ. ಆದರೂ ನಿಮ್ಮ ಉದ್ದೇಶಗಳು ಚೆನ್ನಾಗಿರುವದರಿಂದ ನಿಮ್ಮನ್ನು ಕಂಡು ನನಗೆ ಸಮಾಧಾನವೆನಿಸುತ್ತದೆ. ನೀವು ನನಗೆ ಕೊಟ್ಟ ಪತ್ರವು ನಿಮಗೆ ಬೇಕಾಗಿದ್ದರೆ ಈ ಪತ್ರದಲ್ಲಿ ಅದೆ ಏನು ಹುರಳು, ತಕ್ಕೊಳ್ಳಿರಿ. ಅದರಲ್ಲಿದ್ದ ಸಂಗತಿಗಳೆಲ್ಲ ಜಯಸಿಂಗರಾಜರಿಗೆ ಮೊದಲೇ ತಿಳಿದಿರುವವು. ನನ್ನಂಥ ಕೆಲವು ಜನರನ್ನು ನಿಮ್ಮ ಕಡೆಗೆ ಕಳುಹಿಸಿ ಅವರೇ ನಿಮ್ಮನ್ನು ಪೂರ್ಣವಾಗಿ ಮೋಸಗೊಳಿಸಿರುವರು. ಅಂದಬಳಿಕ ಈಗ ನೀವು ನನ್ನ ಮೇಲೆ ಕತ್ತಿಯನ್ನು ಹಿರಿದರೆ ಏನಾಗುವದು?

ಈ ಮಾತುಗಳನ್ನು ಕೇಳಿ ವೇಷಧಾರಿಯಾದ ಜೋಯಿಸನು ನಾಚಿ ಮೋರೆಯನ್ನು ತಗ್ಗಿಸಿದನು. ಇಷ್ಟು ಹೊತ್ತಿನವರೆಗೆ ನಾನು ಒಳ್ಳೇ ಪೌರುಷವನ್ನು ಮಾಡಿದೆನೆಂದು ಅವನ ಮನಸ್ಸಿನಲ್ಲಿ ಹುಟ್ಟಿದ ಅಭಿಮಾನವು ಈಗ ಪೂರ್ಣವಾಗಿ ನಷ್ಟವಾಯಿತು ಕಟ್ಟಕಡೆಗೆ ಆ ಮನುಷ್ಯನಿಗೆ ತನ್ನ ಪರಾಕ್ರಮವನ್ನಾದರೂ ತೋರಿಸಬೇಕೆನ್ನುವಷ್ಟರಲ್ಲಿ ಅವನು ಕೂಡಲೆ ಈ ಘೋರಣವನ್ನರಿತು ಈ ವಿಷಯದಲ್ಲಿಯೂ ತಾನು ಮೋರೆ ಕೆಳಗೆ ಹಾಕುವಂತೆ ಮಾಡಿಬಿಟ್ಟನು. ಇನ್ನು ಏನೂ ಶಕ್ಯವಿಲ್ಲ. ಇಲ್ಲಿಂದ ಸುಮ್ಮನೆ ಹೊರಟು ಹೋಗುವದೊಂದೇ ಒಂದು ಉಪಾಯವುಳಿಯಿತು, ಎಂದು ಮನಸ್ಸಿನಲ್ಲಿ ಆಲೋಚಿಸುತ್ತ ಸುಮ್ಮನೆ ನಿಂತುಕೊಂಡನು.

ಈಗ ಈ ಗೃಹಸ್ಥನಿಗೆ ತನ್ನ ಮೂರ್ಖತನವು ಪೂರ್ಣವಾಗಿ ಮನವರಿಕೆಯಾಗಿರುವದು. ಇದಕ್ಕೂ ಹೆಚ್ಚಾಗಿ ಇವನ ಮನಸ್ಸನ್ನು ನೋಯಿಸುವದು

ಸರಿಯಲ್ಲ, ಎಂದು ಆಲೋಚಿಸಿ ಆ ರಜಪೂತ ಸಿಪಾಯಿಯು ಜೋಯಿಸನನ್ನು ಕುರಿತು—"ನಾನು ಮೋಸಹೋದೆನೆಂದು ಖಿನ್ನರಾಗಬೇಡಿರಿ. ನಿಮ್ಮನ್ನು ಮೋಸಗೊಳಿಸಿದ ಮನುಷ್ಯನು ನಿಮ್ಮ ಶತ್ರುವೆಂದು ತಿಳಿಯಬೇಡಿರಿ. ನಿಮ್ಮ ಮಿತ್ರರೊಳಗಿನವನೇ ಇರುವನು. ಅವನ ಮನಸ್ಸಿನಲ್ಲಿ ನಿಮ್ಮ ವಿಷಯವಾಗಿ ದುರ್ಬುದ್ಧಿಯು ಇಲ್ಲ; ಸದ್ಬುದ್ಧಿಯೇ ಇರುವದು. ನೀವು ಅಷ್ಟೇನೂ ನಾಚಿಕೊಳ್ಳುವ ಕಾರಣವಿಲ್ಲ. ನಿಮ್ಮ ಮಹಾರಾಜರ ವಿಷಯವಾಗಿ ಆದರಯುಕ್ತವಾದ ಪ್ರೇಮವುಳ್ಳ ಕೆಲವು ತರುಣ ರಜಪೂತರು ಇರುವರು; ನಾನು ಅವರೊಳಗಿನವನೊಬ್ಬನು. ನಿಮ್ಮ ಮಹಾರಾಜರ ಸಂಗಡ ಯಾವಾಗಲೂ ಪತ್ರವ್ಯವಹಾರವನ್ನು ಮಾಡುತ್ತಿರುವ ರಾಮಸಿಂಗನು ನನಗೆ ಒಳ್ಳೇ ಸ್ನೇಹಿತನಾಗಿರುವನು. ನಿಮ್ಮ ಸ್ವಾರಿಯು ಕಾಲಕ್ಕೆ ಮಹಾರಾಜರಿಗೆ ತಿಳಿಸತಕ್ಕ ಸಂಗತಿಯೇನಾದರೂ ಒದಗಿದರೆ ಕೂಡಲೆ ಪತ್ರದ್ವಾರದಿಂದ ತಿಳಿಸೆಂದು ರಾಮಸಿಂಗನು ಯಾವನಿಗೆ ಹೇಳಿರುವನೋ, ಮತ್ತು ಹೀಗೆ ಹೇಳಿದ್ದೇನೆಂದು ಅವನು ತನ್ನ ಹಿಂದಿನ ಪತ್ರದಲ್ಲಿ ಯಾವಾತನ ವಿಷಯವಾಗಿ ಬರೆದಿದ್ದನೋ, ಆತನೇ ನಾನು. ನನ್ನ ಹೆಸರು ಕೀರ್ತಿಸಿಂಹ. ಇನ್ನುಮೇಲೆ ನೀವು ಮನಸಿಗೆ ಹಚ್ಚಿಕೊಳ್ಳುವ ಕಾರಣವಿಲ್ಲವಷ್ಟೇ? ಇಷ್ಟೊತ್ತಿನವರೆಗೆ ನಾನು ಮಾತಾಡಿದ ಕೆಲವು ಮಾತುಗಳನ್ನು ಕೇವಲ ನಿಮ್ಮ ಪರೀಕ್ಷಾರ್ಥವಾಗಿಯೇ ಮಾತಾಡಿದ್ದೇನೆ. ಕೆಲವು ಸಂಗತಿಗಳು ಜಯಸಿಂಗರಾಜನ ಕಿವಿಯತನಕ ಹೋಗಿರುವವು. ಆದರೆ ನಿಮ್ಮ ಪತ್ರವು ಅವರ ಕಡೆಗೆ ಹೋಗಲಿಕ್ಕಿಲ್ಲ. ನಾನು ಚೇಷ್ಟೆಗಾಗಿ ಹಾಗೆ ಅಂದೆನು.

ನಿಮ್ಮ ವಿಷಯವಾಗಿ ಜಯಸಿಂಗರಾಜರಿಗೆ ಸಂಶಯವು ತಟ್ಟಿರುವದೇನೊ ನಿಜವು. ಅವರು ನಿಮ್ಮ ವರ್ತನದ ಮೇಲೆ ಕಣ್ಣಿಡುವದಕ್ಕಾಗಿ ನನಗೆ ಹೇಳಿದ್ದೂ ನಿಜವು; ಆದರೆ ನಾನು ಅವರಿಗೆ ಹೇಳತಕ್ಕ ಸಂಗತಿಗಳನ್ನಷ್ಟೇ ಹೇಳಿರುವೆನು. ಹೆಚ್ಚಿಗೇನೂ ಹೇಳಿರುವದಿಲ್ಲ. ಇನ್ನೂವರೆಗೆ ನಿಮ್ಮ ವಿಷಯವಾಗಿ ಅವರ ಮನಸು ಕಲುಷಿತವಾಗಿರುವದಿಲ್ಲ. ಹೀಗಿದ್ದು ನೀವು ಈಗಿಂದೀಗಲೇ ಹೊರಟು ಹೋಗಬೇಕೆಂದು ವಿಚಾರ ಮಾಡುತ್ತಿರುವಿರಿ. ಇದು ನಿಮ್ಮ ಮುಖಮುದ್ರೆಯಿಂದ ಸ್ಪಷ್ಟವಾಗಿ ತಿಳಿಯುವದು. ನೀವು ಈ ವಿಚಾರವನ್ನು ಬಿಟ್ಟುಬಿಡಿರಿ. ಔರಂಗಾಬಾದಕ್ಕೆ ಹೋದಮೇಲೆ ಬೇಕಾದರೆ ಹೋಗಿರಿ ಆಗ ನಿಮಗೆ ಬೇಡೆಂದು ಅನ್ನುವವರು ಯಾರು? ಈಗ ಮಾತ್ರ ಹೋಗಬೇಡಿರಿ. ಹ್ಯಾಗಾದರೂ ಛಾವಣಿಯಲ್ಲಿ ಹೊಕ್ಕಿರುವಿರಿ. ಕಡೆತನಕ ಉಳಿಯಿರಿ. ನಿಮ್ಮ ನಿಜ

ಸ್ವರೂಪವು ನನ್ನೊಬ್ಬನಿಗೇ ಗೊತ್ತಾಗಿರುವದು. ನನ್ನ ಹೊರತು ಇನ್ನೊಬ್ಬನಿಗೆ ತಿಳಿದೀತೆಂದು ಮನಸ್ಸಿನಲ್ಲಿ ಸಹ ತರಬೇಡಿರಿ. ನಾನು ನಿಮ್ಮ ವ್ಯವಸ್ಥೆಯನ್ನು ಯಥಾಪ್ರಕಾರವಾಗಿ ಇಡುವೆನು. ಮಹಾರಾಜರಿಗೆ ಅವಶ್ಯವಾಗಿ ತಿಳಿಯತಕ್ಕ ಸಂಗತಿಗಳು ಅವರಿಗೆ ಗುಪ್ತವಾಗಿ ತಿಳಿಯುವಂತೆ ವ್ಯವಸ್ಥೆ ಮಾಡೋಣ. ಈ ವಿಷಯವಾಗಿ ನೀವು ಚಿಂತೆಮಾಡಬೇಡಿರಿ; ಮತ್ತು ಇಲ್ಲಿಂದ ಹೋಗಬೇಡಿರಿ. ಮಹಾರಾಜರ ವಿಷಯವಾಗಿ ನನ್ನ ಮನಸ್ಸಿನಲ್ಲಿ ಬಹಳ ಆದರವುಂಟು. ನೀವಂತೂ ಅವರ ಸಹವಾಸದಲ್ಲಿಯೇ ಇರುವಿರಿ ನಿಮ್ಮ ಬಾಯಿಂದ ಅವರ ವಿಷಯವಾಗಿ ಕೆಲ ಸಂಗತಿಗಳನ್ನು ಅರಿತುಕೊಳ್ಳಬೇಕೆಂದು ನನಗೆ ಉತ್ಕಂಠವಾದ ಇಚ್ಛೆ ಇರುವದು. ಎರಡನೇ ಯಾವ ಕಾರಣದ ಸಲುವಾಗಿಯೂ ನಿಮಗೆ ನಾನು ಉಳಿಯುಲಿಕ್ಕೆ ಹೇಳುವದಿಲ್ಲ. ಈ ಕಾರಣದ ಸಲುವಾಗಿಯೇ ಉಳಿಯಿರಿ; ಮತ್ತು ನನ್ನ ಇಚ್ಛೆಯನ್ನು ಪೂರ್ಣಮಾಡಿರಿ. ಇದರಿಂದ ನಿಮಗೇನೂ ಅಡ್ಡಿಯಾಗುವದಿಲ್ಲ. ನಿಮ್ಮ ಕೂದಲಿಗೆ ಸಹ ಧಕ್ಕಿಹತ್ತಲಿಕ್ಕಿಲ್ಲೆಂದು ನಿಶ್ಚಯವಾಗಿ ತಿಳಿಯಿರಿ.''

"ಛೇ-ಛೇ, ಹಾಗೇನೂ ಇಲ್ಲ ನನಗೆ ಏನಾದರೂ ಧಕ್ಕಿತಗಲೀತೆಂದು ನಾನು ಇಲ್ಲಿಂದ ಹೋಗಲಿಕ್ಕೆ ಅಪೇಕ್ಷಿಸುತ್ತೇನೆಂದು ತಿಳಿಯಬೇಡಿರಿ. ಇನ್ನು ಇಲ್ಲಿ ಉಳಿಯುವ ಕಾರಣವಿಲ್ಲೆಂದು ಹೋಗಲಿಕ್ಕೆ ಅಪೇಕ್ಷಿಸುತ್ತಿದ್ದೆನು; ಆದರೆ ನೀವು ನನಗೆ ಸೇರಿಗೆ ಸವ್ವಾಸೇರು ಗಂಟುಬಿದ್ದಿರಿ; ನನ್ನ ನಿಜಸ್ವರೂಪವನ್ನು ಕಂಡು ಹಿಡಿದ ನನ್ನನ್ನು ಮೋಸಗೊಳಿಸಬೇಕೆಂದು ನನ್ನ ಕಡೆಗೆ ಬಂದಿರಿ. ಜ್ಯೋತಿಷ್ಯದ ಪ್ರಶ್ನಗಳನ್ನು ಕೇಳುವ ನೆವದಿಂದ ಮಹಾರಾಜರ ವಿಷಯವಾಗಿ ಮಾತಾಡಿ ಅವರ ಪ್ರಸಿದ್ಧಿಯನ್ನು ಹೇಳಿ ನನ್ನ ಚಿತ್ತವನ್ನು ನಿಮ್ಮ ಕಡೆಗೆ ಎಳೆದುಕೊಂಡಿರಿ. ನನ್ನ ವಿಶ್ವಾಸವು ಕೂಡುವಂತೆ ನನ್ನ ಕೂಡ ಆಚರಿಸಿ ನನ್ನಲ್ಲಿ ನಂಬಿಗೆಯನ್ನು ಹುಟ್ಟಿಸಿಕೊಂಡಿರಿ. ಈ ಎಲ್ಲ ಸಂಗತಿಗಳಿಂದ ಈ ಕಾರ್ಯದಲ್ಲಿ ನಿಮಗಿದ್ದ ಕೌಶಲ್ಯವನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ಸರಿ. ಈ ತರದ ಚತುರಮನುಷ್ಯರೊಳಗೆ ಇದ್ದರೆ ನನಗೆ ಪ್ರಯೋಜನವಾಗುವದಿಲ್ಲೆಂಬದನ್ನು ತಿಳಿದು, ಇಲ್ಲಿಂದ ಹೊರಡುವ ಆಲೋಚನೆಯುನ್ನು ಮಾಡುತ್ತಿದ್ದೆನು. ನೀವು ಅದನ್ನು ಸಹ ನಿಮ್ಮ ವಿಲಕ್ಷಣವಾದ ತರ್ಕಶಕ್ತಿಯಿಂದ ಕಂಡು ಹಿಡಿದಿರಿ. ನೀವು ಯಾರೆಂಬದು ನನಗೆ ಗೊತ್ತಾಗುವದಕ್ಕಿಂತಲೂ ಮುಂಚಿತವಾಗಿಯೇ ನಾನು ಆಡಿತೋರಿಸಿದಂತೆ ನಿಮ್ಮಂಥ ಚತುರರಾದ ಮುತ್ಸದ್ದಿಗಳು ಮೊಗಲರ ಸೇನೆಯಲ್ಲಿ ಇರುವರೆಂತಲೇ ಅವರ ರಾಜ್ಯಗಳು ನಷ್ಟವಿರುವವೆಂಬದಕ್ಕೆ ಸಂದೇಹವಿಲ್ಲ.

ಇರಲಿ; ನೀವು ನಿಜವಾಗಿ ಕೀರ್ತಿಸಿಂಗರಿರುವಿರೋ? ಅಥವಾ ನನಗೆ ಮೋಸಮಾಡ ಲಿಕ್ಕೆಂದು ಕೀರ್ತಿಸಿಂಗನ ಹೆಸರು ತಕ್ಕೊಂಡಿರುವಿರೋ? ನಿಜವಾಗಿ ಹೇಳಿರಿ.''

ಕೀರ್ತಿಸಿಂಗ:—ಛೀ-ಛೀ, ಇಷ್ಟು ನಾನು ನಿಮ್ಮನ್ನು ಮೋಸಗೊಳಿಸುವ ದಿಲ್ಲ. ನಾನೇ ಕೀರ್ತಿಸಿಂಗನು; ರಾಮಸಿಂಗನ ಗೆಳೆಯನು; ಅವನು ನಿಮ್ಮ ಮಹಾರಾಜರ ಪತ್ರದಲ್ಲಿ ಯಾವಾತನ ಹೆಸರನ್ನು ಬರೆದಿರುವನೋ ಆ ಕೀರ್ತಿ ಸಿಂಗನೇ ನಾನು. ಮನಸ್ಸಿನಲ್ಲಿ ಸಂಶಯವನ್ನು ತಕ್ಕೊಳ್ಳಬೇಡಿರಿ. ಇನ್ನು ಮೇಲೆ ನಾನೂ ನೀವೂ ಬೇರೆ ಬೇರೆ ಎಂದು ತಿಳಿಯಬೇಡಿರಿ. ಆದರೆ ನನ್ನಿಂದ ನಿಮಗೆ ಸಹಾಯವು ಮಾತ್ರ ದೊರೆಯಲಾರದು; ಮತ್ತು ಹಿಂದಿನಂತೆ ಈ ಸಾರೆ ನಿಮಗೆ ಕೀರ್ತಿಯೂ ಸಿಗಲಾರದು. ಹಿಂದೆ ಬಂದ ಸರದಾರರಿಗೂ ನಮ್ಮ ಜಯ ಸಿಂಗರಾಜರಿಗೂ ಬಹಳ ಹೆಚ್ಚು ಕಡಿಮೆ ಅದೆ. ನೀವು ಅನ್ಯವಿಚಾರಗಳನ್ನು ಮನಸ್ಸಿನಲ್ಲಿ ತಾರದೆ ಸಾಮೋಪಚಾರದಿಂದ ಒಲಿಸಿಕೊಂಡರೆ ಜಯಸಿಂಗರಾಜನು ನಿಮಗೆ ಎಂದೂ ದುಷ್ಟನಾಗಿ ಕಾಣಲಿಕ್ಕಿಲ್ಲ. ಅವನಿಂದ ನಿಮಗೆ ತೊಂದರೆಯು ಸಂಭವಿಸಲಿಕ್ಕಿಲ್ಲ. ಆದಕ್ಕಾಗಿಯೇ ನಾನು ನಿಮಗೆ ಅವರಂಗಾಬಾದದ ತನಕ ನಮ್ಮ ಛಾವಣಿಯ ಸಂಗಡ ಉಳಿಯಿರೆಂದು ಹೇಳುತ್ತೇನೆ. ಅವರಂಗಾಬಾದ ವೆನ್ನಲಿಕ್ಕೆ ಅದಾದರೂ ಎಷ್ಟು ದೂರವಿರುವದು? ಇಲ್ಲಿಂದ ನಾಲ್ಕೇದಿನ ಪ್ರಯಾಣ ಮಾಡಿದರೆ ಅವರಂಗಾಬಾದವು. ಅಲ್ಲಿಂದ ಮುಂದೆ ನೀವು ಬೇಕಾದಲ್ಲಿಗೆ ಹೋ ಗಿರಿ. ಅಲ್ಲಿಯತನಕ ಮಾತ್ರ ನಿಮ್ಮನ್ನು ಹೋಗಗೊಡಬಾರದೆಂದು ನನ್ನ ಮನ ಸ್ಸಿನಲ್ಲಿ ಅದೆ. ಇದಲ್ಲದೆ ಶಿವಾಜಿಮಹಾರಾಜರಿಗೆ ಒಯ್ದುಕೊಡತಕ್ಕ ಕೆಲವು ಗುಪ್ತಪತ್ರಗಳನ್ನು ನಾನು ನನ್ನ ನಂಬಿಗೆಯ ಆಳಿನ ಕೂಡ ಕಳಿಸುತ್ತೇನೆ. ಮತ್ತೇನು ಬೇಕು, ಹೇಳಿರಿ. ಇದಲ್ಲದೆ ನಿಮಗೆ ತಿಳಿದಷ್ಟಕ್ಕಿಂತ ಹೆಚ್ಚಿಗೆ ನಾಲ್ಕುಹೊಸ ಸಂಗತಿಗಳನ್ನು ಹೇಳುತ್ತೇನೆ. ಅವುಗಳನ್ನು ನಿಮ್ಮ ಈ ಪತ್ರದಲ್ಲಿ ಬರೆಯಿರಿ.

ಜಯಸಿಂಗರಾಜರು ನಿಮ್ಮ ಪ್ರಾಂತದಲ್ಲಿ ಯಾರಾರಿಗೆ ತಮ್ಮ ಸಹಾಯಕ್ಕೆ ಬರಬೇಕೆಂದು ಆಜ್ಞಾಪತ್ರಗಳನ್ನು ಬರೆದಿರುವರೆಂಬದು ನಿಮಗೆ ಗೊತ್ತದೆಯೋ? ಶಿವಾಜಿಮಹಾರಾಜರ ವಿಷಯವಾಗಿ ಯಾರ ಯಾರ ಮನಸಿನಲ್ಲಿ ಅಲ್ಪಸ್ವಲ್ಪ ದ್ವೇಷಬುದ್ಧಿಯು ಇರುವದೋ ಆ ಪ್ರತಿಯೊಬ್ಬರಿಗೆ ಬಂದಿಲ್ಲೊಂದು ಲಾಭದ ಆಶೆಯನ್ನು ತೋರಿಸಿ ಅವರನ್ನು ಮೊಗಲಸೈನ್ಯದ ಸಹಾಯಕ್ಕೆ ಕರೆದಿರುತ್ತಾರೆ. ಯಾವ ಘೋರ್ಪಡೆಯ ಮನೆತನವನ್ನು ಬೇರು ಸಹಿತವಾಗಿ ಕಿತ್ತುಚಲ್ಲಬೇಕೆಂದು

ಶಿವಾಜಿಮಹಾರಾಜರು ಬದ್ಧಕಂಕಣರಾಗಿದ್ದರೋ ಆ ಘೋರ್ಪಡೆಯವರಿಗೆ ಪತ್ರಗಳು ಹೋಗಿರುವವು. ಜಾವಳೀಕರರಿಗೆ ಪತ್ರಗಳು ಬರೆಯಲ್ಪಟ್ಟಿರುವವು. ಅಫಝುಲ್‌ಖಾನನ ಮಗನಿಗೆ ಒಂದು ಚಿಕ್ಕ ದಂಡುಕೊಟ್ಟು ಸ್ವತಂತ್ರವಾಗಿ ಸ್ವಾರೀ ಮಾಡಲಿಕ್ಕೆ ಹೇಳತಕ್ಕವರುತ್ತಾರೆ. ಅವನ ತಂದೆಯನ್ನು ಕೊಂದಿದ್ದರ ಸೇಡು ತೀರಿಸಿಕೊಳ್ಳಲಿಕ್ಕೆ ತಕ್ಕ ಸಂಧಿಯನ್ನು ಅವನಿಗೆ ಒದಗಿಸಿಕೊಡುವ ನಿರ್ಣಯವಾಗಿಯೇ ಈ ಪತ್ರವು ಅವನಿಗೆ ಬರೆಯಲ್ಪಟ್ಟಿರುವದು. ಕರ್ನಾಟಕ ಪ್ರಾಂತದಲ್ಲಿ ನಿಮ್ಮ ಮಹಾರಾಜರಿಗೆ ತೊಂದರೆಕೊಡುವದಕ್ಕಾಗಿ ಇಲ್ಲಿಂದ ಕೆಲವು ಜನರು ಕರ್ನಾಟಕಕ್ಕೆ ಹೋಗಿರುವರು ಇದಲ್ಲದೆ ಮಹಾರಾಜರ ಆಧೀನದಲ್ಲಿರುವ ದುರ್ಗಕೋಟೆಗಳ ಮೇಲೆ ಇರುವ ಅಧಿಕಾರಿಗಳಿಗೆ ಜಹಾಗೀರ, ಇನಾಮು, ಸರದಾರಿಕೆ ಮೊದಲಾದವುಗಳ ಆಶೆಹಚ್ಚಿ ತಮ್ಮ ಪಕ್ಷಕ್ಕೆ ಒಡಕೊಳ್ಳುವ ಬಗ್ಗೆ ಪತ್ರಗಳು ಬರೆಯಲ್ಪಟ್ಟಿರುವವು. ಸ್ವಾರರು ಈ ಎಲ್ಲ ಪತ್ರಗಳನ್ನು ತೆಗೆದುಕೊಂಡು ಹೋದದ್ದು ನಿಮಗೆ ಗೊತ್ತು ಅದೆಯೋ? ಇಲ್ಲ. ನಿಮಗೆ ಹೇಗೆ ಗೊತ್ತಾಗಬೇಕು? ನಾನು ಈಗ ನಿಮಗೆ ಹೇಳಿದ ಸಂಗತಿಗಳನ್ನೆಲ್ಲ ನಿಮ್ಮ ಮಹಾರಾಜರ ಪತ್ರದಲ್ಲಿ ಬರೆಯಿರಿ ಇವೆಲ್ಲ ಪತ್ರಗಳು ಬರ್ಹಾಣಪುರದಿಂದಲೇ ಹೋಗಿರುವವು. ಇತ್ತ ಬಾದಶಹನಿಗೆ ತಾನು ಕೊಡಲೊಪ್ಪಿದ ಜಹಾಗೀರುಗಳನ್ನೂ ಇನಾಮುಗಳನ್ನೂ ಮಂಜೂರವಾಡಿ ಸನದುಗಳನ್ನು ತಯಾರಿಸಿ ಕಳಿಸಬೇಕೆಂದು ಜಯಸಿಂಗನ ವಿನಂತಿಪತ್ರವು ಹೋಗಿರುವದು. ಸಾರಾಂಶ,—ಜಯಸಿಂಗನು ಒಮ್ಮೆ ಒಂದು ಕೆಲಸಕ್ಕೆ ಕೈಹಚ್ಚಿದನೆಂದರೆ ತೀರಿತು. ಅದರಲ್ಲಿ ಆಲಸ್ಯ-ಅಜಾಗ್ರತೆತನ ಇವುಗಳ ಹೆಸರು ಸಹ ಕೇಳಬೇಡಿರಿ. ಒಮ್ಮೆ ಕೆಲಸಕ್ಕೆ ಪ್ರಾರಂಭಿಸಿದ ಮೇಲೆ ಅದು ಮುಗಿಯುವತನಕ ವಿಶ್ರಾಂತಿಯು ಹೇಗಿರುವದೆಂಬದು ಅವನಿಗೆ ಗೊತ್ತಿರುವದಿಲ್ಲ. ಹಗಲಿರುಳು ಹಿಡಿದ ಕಾರ್ಯವು ಹೇಗೆ ಕೈಗೂಡೀತೆಂಬದೊಂದೇ ವಿಚಾರವು ಅವನ ತಲೆಯಲ್ಲಿರುವದು. ಹೀಗೆ ಕಾರ್ಯಸಿದ್ಧಿಯ ವಿಚಾರ ಮಾಡುತ್ತಿರುವಾಗ ಒಂದು ಒಳ್ಳೇ ವಿಚಾರವು, ಅಥವಾ ಉಪಾಯವು ತಲೆದೋರಿದ ಕೂಡಲೆ ಅದರಂತೆ ಕೆಲಸ ಮಾಡಲಿಕ್ಕೆ ಅವನು ಎಂದೂ ವಿಲಂಬ ಮಾಡುವದಿಲ್ಲ. ಈ ಮೇರೆಗೆ ಅವನ ಗುಣಗಳನ್ನು ಎಷ್ಟು ಹೇಳಿದರೂ ತೀರದು. ಅವುಗಳನ್ನು ಎಷ್ಟೆಂದು ಬರೆಯುವಿರಿ! ದುಡ್ಡಿನ ಸಂಬಂಧದಿಂದ ಔರಂಗಜೇಬನು ಅವನಿಗೆ ಪೂರ್ಣಸ್ವಾತಂತ್ರ್ಯವನ್ನು ಕೊಟ್ಟಿರುವನು. ತನ್ನ ಹತ್ತಿರಿದ್ದ ದುಡ್ಡು ತೀರಿದ ಕೂಡಲೆ ಪುನಃ ತರಿಸಿಕೊಳ್ಳಬೇಕು. ದುಡ್ಡಿನ ಕೊರತೆಯನ್ನು ಮಾಡಿಕೊಳ್ಳ

ಲಾಗದು, ಎಂದು ಬಾದಶಹನ ಅಪ್ಪಣೆಯಾಗಿರುತ್ತದೆ. ಗುಜರಾಥದ ದಕ್ಷಿಣದಲ್ಲಿ ಫಿರಂಗಿಗಳು ನಿಮ್ಮ ಹಡಗುಪಡೆಯಮೇಲೆ ಬೀಳಬೇಕೆಂದು ಬಾದಶಹನು ತನ್ನ ಪ್ರೀತಿಯ ಗೆಳೆಯರಾದ ಫ್ರಾನ್ಸಿಸ್ ಹಾಗು ಡ್ರೇಕ ಎಂಬ ಇಬ್ಬರು ಫಿರಂಗಿಗಳನ್ನು ಅತ್ತ ಕಡೆಗೆ ಕಳಿಸಿರುವನು ಅಲ್ಲಿ ಅವರ ಉಪದ್ವ್ಯಾಪವು ನಡೆದಿರುವದು. ಇವೆಲ್ಲ ಸಂಗತಿಗಳು ನೀವು ಒರೇ ಜೋಯಿಸನ ಸೋಗುಹಾಕಿಕೊಂಡು ನಮ್ಮ ಛಾವಣಿಯಲ್ಲಿ ಜ್ಯೋತಿಷ್ಯವನ್ನು ಹೇಳುತ್ತ ಕುಳಿತಮಾತ್ರದಿಂದ ತಿಳಿಯುವವೋ? ಇನ್ನು ನೀವು ಸ್ವತಃ ಹೋಗುವದಕ್ಕಿಂತ ಇಲ್ಲಿಯೇ ಉಳಿದು ಇವೆಲ್ಲ ಸಂಗತಿಗಳ ಸವಿಸ್ತರ ಪತ್ರವನ್ನು ಬರೆದರೆ ಉಪಯೋಗವಾಗಬಹುದು ಆ ಪತ್ರದಿಂದ ಮಹಾರಾಜರು ತಮ್ಮೊಳಗಿನ ಎಷ್ಟು ಜನರು ಒಡೆದು ಮೊಗಲರಿಗೆ ಕೂಡಿಕೊಳ್ಳುವರೆಂಬದನ್ನು ತಿಳಕೊಳ್ಳಲಿಕ್ಕೆ ಯತ್ನಿಸುವರು. ಈ ಸಂಗತಿಗಳು ಅವರಿಗೆ ಗೊತ್ತಾಗದಿದ್ದರೆ ಆಯತ ಸಮಯದಲ್ಲಿ ಘಾತವಾದೀತು ಇದರಿಂದ ಯಾವನೊಬ್ಬ ಕಿಲ್ಲೇದಾರನಿಗೆ ಮಹಾರಾಜರು ಒಂದು ಹುಕುಂ ಕೊಟ್ಟರೆ ಅದನ್ನು ಅವನು ಲೆಕ್ಕಿಸದೆ ಶತ್ರುಗಳಿಗೆ ಲಾಭವನ್ನು ಮಾಡಿಕೊಡುವ ಪ್ರಸಂಗವು ಅವನಿಂದ ಸಂಭವಿಸಿದರೂ ಸಂಭವಿಸಬಹುದು. ಈ ಪ್ರಕಾರ ಅವರ ಸಂಭಾಷಣವಾಗಿ ಕಟ್ಟಕಡೆಗೆ ಜೋಯಿಸರು ಮಹಾರಾಜರಿಗೆ ಒಂದು ಪತ್ರವನ್ನು ಬರೆಯಬೇಕೆಂತಲೂ, ಅದರಲ್ಲಿ ಮೇಲೆ ಕಾಣಿಸಿದ ಸಂಗತಿಗಳನ್ನು ಬರೆಯ ಬೇಕೆಂತಲೂ, ಆ ಪತ್ರವು ಮಹಾರಾಜರಿಗೆ ಮುಟ್ಟುವಂತೆ ಕೀರ್ತಿಸಿಂಗನು ವ್ಯವಸ್ಥೆ ಮಾಡಬೇಕೆಂತಲೂ ನಿರ್ಣಯವಾಯಿತು. ಆ ಬಳಿಕ ಉಭಯತರು ತಿರುಗಿ ಛಾವಣಿಗೆ ಬಂದರು. ಜೋಯಿಸರು ಕೀರ್ತಿಸಿಂಗನ ಚಾತುರ್ಯವನ್ನು ಮನಸಿನಲ್ಲಿ ಶ್ಲಾಘಿಸುತ್ತ ಮುಂದಿನ ಉದ್ಯೋಗವನ್ನು ಮಾಡತೊಡಗಿದರು.

---

## ೭:—ವ್ಯೂಹ ರಚನೆ.

—೩ ೦ ೩—

ಹಿಂದಿನ ಪ್ರಕರಣದಲ್ಲಿ ಹೇಳಿದ ಸಂಗತಿಯು ವರ್ತಿಸಿದ ನಾಲ್ಕು ದಿವಸಗಳಲ್ಲಿ ಸೈನಿಕರೆಲ್ಲರು ಔರಂಗಾಬಾದಕ್ಕೆ ಬಂದರು. ಪಟ್ಟಣದ ಹೊರಭಾಗದಲ್ಲಿ ಈ ಅದ್ಭುತವಾದ ದಂಡು ತಳಊರಿತು. ಔರಂಗಾಬಾದದಲ್ಲಿ ಶಹಾಜಾದಾ ಮುಅಜೀಮನು ಇದ್ದನೆಂತಲೇ ಇಲ್ಲಿ ತಳಊರಬೇಕಾಯಿತೆಂದು ಜಯಸಿಂಗ ರಾಜನು ಅನ್ನುತ್ತಿದ್ದನು. ಇಲ್ಲಿ ಮೂರುದಿವಸ ವಸ್ತೀಮಾಡತಕ್ಕದ್ದೆಂದು

ಗೊತ್ತಾಗಿತ್ತು. ಜಯಸಿಂಗರಾಜನು ಆಗ್ರಾಪಟ್ಟಣದಿಂದ ಔರಂಗಜೇಬನ ಅಪ್ಪಣೆಯನ್ನು ತಕ್ಕೊಂಡು, ಹೊರಟಮೇಲೆ ಅವನಿಗೆ ಒಂದೇಪತ್ರವನ್ನು ಬರೆದಿದ್ದನು. ಆ ಪತ್ರದಲ್ಲಿ ಬರೆದ ಸಂಗತಿಗಳಿಂದ ಅವನು ಎಷ್ಟು ಧೂರ್ತನಾದ ಮುತ್ಸದ್ದಿಯಾಗಿದ್ದನೆಂಬದು ತಿಳಿಯುವಂತಿರುವದು. ಆ ಪತ್ರದ ಸಾರಾಂಶವನ್ನು ನಮ್ಮ ವಾಚಕರಿಗಾಗಿ ಇದರಡಿಯಲ್ಲಿ ಕೊಡುವೆವು. ಮೊದಲು ಸಾಂಪ್ರದಾಯಕ್ಕನುಸಾರ ಒಕ್ಕಣಿಕೆಯನ್ನು ಬರೆದು, ಅದರ ಕೆಳಗೆ:—

"ಖಾವಿಂದ, ಪರದೇಶಗಳಮೇಲೆ ದೌಡು ಮಾಡಿ ಜಯಸಂಪಾದಿಸುವ ಸೇನಾಪತಿಯ ಕೈಯಲ್ಲಿ ತನ್ನ ಸೈನ್ಯಕ್ಕೆ ಇನಾಮಿನ ಅಥವಾ ಅಧಿಕಾರದ ಆಶೆ ತೋರಿಸಿ ಅನುಗ್ರಹಮಾಡುವ ಅಧಿಕಾರವೂ, ಭಯವನ್ನು ತೋರಿಸಿ ನಿಗ್ರಹಿಸುವ ಅಧಿಕಾರವೂ ಇರಲಿಕ್ಕೆ ಬೇಕು. ಶೌರ್ಯವನ್ನು ತೋರಿಸಿದವರಿಗೆ ಇನಾಮುಗಳನ್ನು ಕೊಡುವದಕ್ಕೂ, ಮೈ ಉಳಿಸಿಕೊಂಡು ಹಿಂಜರಿಯುವವರಿಗೆ ತಕ್ಕ ಶಾಸನವನ್ನು ಮಾಡುವದಕ್ಕೂ ಪೂರ್ಣ ಸ್ವಾತಂತ್ರ್ಯವಿರಬೇಕು. ಸಂಬಳವನ್ನು ಹೆಚ್ಚಿಸುವ ಹಾಗು ಕಡಿಮೆಮಾಡುವ ವಿಷಯದಲ್ಲಿ ಸೇನಾಪತಿಯು ಪರರ ಮೋರೆಯನ್ನು ನೋಡುತ್ತ ಕೂಡ್ರುವ ಪ್ರಸಂಗಗಳು ಬರುತ್ತಿದ್ದರೆ ಏನು ಪ್ರಯೋಜನವಾಗುವದು? ಶಾಸ್ತೇಖಾನನ ತರುವಾಯ ಈ ಸಂಬಂಧದ ಎಲ್ಲ ಅಧಿಕಾರಗಳನ್ನು ಔರಂಗಾಬಾದದ ಕಾರಕೂನರ ಕೈಯಲ್ಲಿ ಕೊಟ್ಟಂತೆ ಆಗಿರುವದು. ಯಾವನೊಬ್ಬ ಶಿಪಾಯಿಯು ಪೌರುಷವನ್ನು ತೋರಿಸಿದರೆ ತತ್ಕಾಲಕ್ಕೆ ಅವನಿಗೆ ಇನಾಮು ಕೊಡುವದು ನಮ್ಮ ಕೈಯಲ್ಲಿಲ್ಲ. ನಾವು ಈ ಒಗ್ಗೆ ಶಹಾಜಾದಾ ಮುಅಜೀಮನ ಕಡೆಗೆ ಶಿಫಾರಸ್ಸು ಮಾತ್ರ ಮಾಡಿದರೆ ತೀರಿತು. ಅವರಿಗೆ ಸಂದ್ಗೋರಿದರೆ ಅವರು ನಮ್ಮ ಶಿಫಾರಸಿಗೆ ಮಾನಕೊಡತಕ್ಕವರು; ಇಲ್ಲದಿದ್ದರೆ ಇಲ್ಲ. ಈ ಸ್ಥಿತಿಯು ಒಳಿತಲ್ಲ. ಸೇನಾಪತಿಯ ಅಪ್ಪಣೆಗಳನ್ನು ಶಿಪಾಯಿಗಳು ಮನ್ನಿಸಬೇಕಾದರೆ ತಮ್ಮ ಹಿತಾಹಿತಗಳನ್ನು ಮಾಡುವ ಪೂರ್ಣವಾದ ಅಧಿಕಾರವು ಸೇನಾಪತಿಯ ಕೈಯಲ್ಲಿರುವದೆಂಬದು ಅವರಿಗೆ ಮನವರಿಕೆಯಾಗಿರಲಿಕ್ಕೆ ಬೇಕು. ಈ ತರದ ವ್ಯವಸ್ಥೆಯನ್ನು ಮಾಡಿದರೆ ಒಳ್ಳೇದಾಗುವದು; ಇಲ್ಲದಿದ್ದರೆ ನಮ್ಮ ಕಾರ್ಯಗಳು ಈಡೇರುವವೆಂದು ಖಂಡಿತವಾಗಿ ಹೇಳಲಿಕ್ಕಾಗದು. ನನ್ನ ಅಭಿಪ್ರಾಯವು ನಿಮಗೆ ಒಪ್ಪಿಗೆಯಾದರೆ ಈಗ ನನ್ನ ಕೈಕೆಳಗೆ ಕೊಟ್ಟ ಜನರಿಗೆ ಜಹಾಗೀರುಗಳನ್ನು ಹಾಕಿಕೊಡಲಿಕ್ಕೂ, ಕಸಕೊಳ್ಳಲಿಕ್ಕೂ, ಸಂಬಳವನ್ನು ಹೆಚ್ಚುಮಾಡಲಿಕ್ಕೂ, ಕಡಿಮೆಮಾಡಲಿಕ್ಕೂ ನನಗೆ ಸಂಪೂರ್ಣ ಅಧಿಕಾರ

ವನ್ನು ಕೊಡಬೇಕು. ಈ ಜನರಲ್ಲಿ ಯಾರು ಯಾವ ಪ್ರಸಂಗದಲ್ಲಿ ಹೇಗೆ ನಡೆಯುವರೆಂಬದನ್ನು ಪರೀಕ್ಷಿಸುವ ಸಂಧಿಗಳು ನನಗೆ ದೊರೆಯುವಷ್ಟು ಬೇರೆಯವರಿಗೆ ಹೇಗೆ ದೊರೆಯುವವು? ಇಂಥ ಸಂಗತಿಗಳನ್ನು ಶಹಾಜಾದನಾದರೂ ಸ್ವತಃ ಎಲ್ಲಿ ನೋಡುವನು? ಔರಂಗಾಬಾದದ ಕಚೇರಿಯೊಳಗಿನ ಕಾರಕೂನರೇ ನೋಡಿ ನಿರ್ಣಯುವಮಾಡತಕ್ಕವರು. ಈ ತರದ ವ್ಯವಸ್ಥೆಯಿಂದ ನಮ್ಮ ಅಧಿಕಾರದ ವರ್ಚಸ್ಸೆಲ್ಲವೂ ಈ ಕಾರಕೂನರ ಕೈಯಲ್ಲಿ ಉಳಿದಿರುವದು. ನಾವು ಮಾಡಿದ ಶಿಫಾರಸುಗಳಿಗೆ ಅವರು ಒಪ್ಪಿದರೆ ದಂಡಾಳುಗಳು ನಮ್ಮನ್ನು ಮನ್ನಿಸುವರು; ಹಾಗು ಹೆದರಿಕೊಂಡು ನಡೆಯುವರು. ಇಲ್ಲವಿದ್ದರೆ ಅವರು ನಮ್ಮನ್ನು ಕೇಳರು. ಯುದ್ಧ ಪ್ರಸಂಗಗಳು ಒದಗಿದಾಗ ಈ ತರದ ವ್ಯವಸ್ಥೆಯು ತೀರ ಅಯೋಗ್ಯವೆಂಬದು ತಮ್ಮ ಅನುಭವಕ್ಕೆ ಬಾರದೆ ಇರಲಾರದು. ಆದಕಾರಣ ಖಾವಿಂದರವರು ಈ ಬಗ್ಗೆ ಸಂಪೂರ್ಣವಾಗಿ ವಿಚಾರಮಾಡಿ ನನ್ನ ಬರಹದ ಪ್ರಕಾರ ಅಧಿಕಾರವನ್ನೂ, ಖಜಾನೆಯನ್ನೂ ನನ್ನ ಆಧೀನಕ್ಕೆ ಕೊಡುವ ವ್ಯವಸ್ಥೆ ಮಾಡಬೇಕು. ಯುದ್ಧವು ಮುಗಿದು ನಾವು ಪುನಃ ರಾಜಧಾನಿಗೆ ಬಂದ ಬಳಿಕ ಯಥಾಪ್ರಕಾರವಾಗಿ ಅವರವರ ಅಧಿಕಾರಗಳನ್ನು ಅವರವರಿಗೆ ತಿರುಗಿ ಕೊಡಲಿಕ್ಕೆ ನನ್ನದೇನೂ ಅಡ್ಡಿಯಿಲ್ಲ ಈ ನನ್ನ ವಿಜ್ಞಾಪನೆಯ ವಿಷಯವಾಗಿ ಅನುಕೂಲ ವಿಚಾರವಾದರಂತೂ ಒಳ್ಳೇದೇ ಸರಿ. ಒಂದುವೇಳೆ ಖಾವಿಂದರವರಿಗೆ ಈ ಆಲೋಚನೆಯು ಸರಿದೋರದಿದ್ದರೆ, ಈ ಮಾತನ್ನು ಬೈಲಿಗೆಳೆಯಬಾರದೆಂದು ವಿಜ್ಞಾಪಿಸುವೆನು; ಯಾಕಂದರೆ ಇಂಥ ಸಂಗತಿಗಳ ಬೊಬ್ಬಾಟವಾದರೆ ಮತ್ತಿಷ್ಟು ನನ್ನ ನಗೆಗೇಡಾಗುವ ಸಂಭವವುಂಟು. ಈ ಎಲ್ಲ ಸಂಗತಿಗಳನ್ನು ವಿಚಾರ ಮಾಡಿ, ಯೋಗ್ಯ ಕಂಡ ಮೇರೆಗೆ ಹುಕುಮು ಕೊಡುವದಕ್ಕೆ ಖಾವಿಂದರವರು ಸಮರ್ಥರೇ ಇರುವಿರಿ''

ಔರಂಗಜೇಬನು ಬಹಳ ಸಂಶಯದ ಸ್ವಭಾವದವನು; ಅವನಿಗೆ ಮಾತ್ಸರ್ಯವು ಬಹಳ. ಆದರೂ ಈ ಪತ್ರವನ್ನು ಓದಿದ ಕೂಡಲೆ ಇದರಲ್ಲಿ ಬರೆದ ಬೇಡಿಕೆಗಳು ಎಷ್ಟು ನ್ಯಾಯವಾಗಿರುವವೆಂಬದು ಅವನ ಲಕ್ಷಕ್ಕೆ ಬಂದಿತು. ಕೂಡಲೆ ಅವನು ಔರಂಗಾಬಾದಕ್ಕೆ ''ಇನ್ನು ಮುಂದೆ ಜಯಸಿಂಗರಾಜನು ಬೇಡಿದಷ್ಟು ಹಣವನ್ನು ತತ್ಕಾಲಕ್ಕೆ ಕೊಟ್ಟುಬಿಡಬೇಕು. ಆ ಹಣದ ವ್ಯವಸ್ಥೆಯನ್ನು ಅವನು ತನಗೆ ಯೋಗ್ಯಕಂಡ ಮೇರೆಗೆ ಮಾಡಬಹುದು,'' ಎಂದು ಹುಕುಮು ಬರೆದನು ಇದೇ ಪ್ರಕಾರ ಜಯಸಿಂಗರಾಜನು ಕಳಿಸಿದ ಸಾಮಾನುಗಳನ್ನೂ

ಸೆರೆಯಾಳುಗಳನ್ನೂ ಯಾವತ್ತು ಕಿಲ್ಲೇದಾರರು ಇಟ್ಟುಕೊಳ್ಳಲಿಕ್ಕೇ ಬೇಕೆಂದು ಅವರವರಿಗೆ ಬೇರೆ ಬೇರೆಯಾಗಿ ಹುಕುಮುಗಳು ಕೊಡಲ್ಪಟ್ಟವು. ಇದರಿಂದ ಜಯಸಿಂಗನ ಇಚ್ಛೆಯ ಮೇರೆಗೆ ಎಲ್ಲ ಕಡೆಗೂ ವ್ಯವಸ್ಥೆಯಾಯಿತು. ತನ್ನ ಮನಸಿನಂತೆ ವ್ಯವಸ್ಥೆಯಾದ ಮೇಲೆ ತನ್ನ ದೌಡು ಯಶಸ್ವಿಯಾಗುವಂತೆ ಮಾಡಲಿಕ್ಕೆ ಅವನ ಉಲ್ಲಾಸವು ಇಮ್ಮಡಿಸಿತೆಂದು ಬೇರೆ ಹೇಳುವ ಕಾರಣವಿಲ್ಲ. ಅವನು ಒಂದು ಲಕ್ಷ ರೂಪಾಯಿಗಳನ್ನು ಸಂಗಡ ತಕ್ಕೊಂಡು ಪುಣೆಗೆ ಬಂದು ಕುಳಿತುಕೊಂಡನು. ಯಾವ ಉದ್ದೇಶವನ್ನು ಸಾಧಿಸುವದಕ್ಕಾಗಿ ಇಷ್ಟೆಲ್ಲ ಪ್ರಯತ್ನಗಳು ಮಾಡಲ್ಪಟ್ಟವೋ ಅದನ್ನು ಕೊನೆಗಾಣಿಸುವದಕ್ಕಾಗಿ ಯುದ್ಧದ ಪ್ರಾರಂಭದಲ್ಲಿ ಜಯಸಿಂಗನು ಮೊದಲು ತನ್ನ ಮನಸಿನಲ್ಲಿ ಯಾವ ಯಾವ ಆಯಕಟ್ಟಿನ ಸ್ಥಳಗಳನ್ನು ಹಿಡಕೊಂಡರೆ ತಮ್ಮ ಇಚ್ಛಿತ ಕಾರ್ಯವು ನೆರವೇರುವದಕ್ಕೆ ಸುಲಭವಾಗುವದು? ಎಂದು ಆಲೋಚಿಸಿದನು. ಯುದ್ಧಕ್ಕೆ ಪ್ರಾರಂಭಮಾಡುವದಕ್ಕೂ ಹಗೆಗಳನ್ನು ಇಕ್ಕಟ್ಟಿನಲ್ಲಿ ಹಿಡಿಯುವದಕ್ಕೂ ದೇಶದೊಳಗಿನ ಆಯಕಟ್ಟಿನ ಸ್ಥಳಗಳನ್ನು ಹಿಡಕೊಳ್ಳುವದೇ ಮುಖ್ಯ ಉಪಾಯವಾಗಿರುತ್ತದೆ. ಹೀಗೆ ಮಾಡುವದರಿಂದ ಶತ್ರುವಿನ ಮೂಗು ಹಿಡಿದಂತಾಗುವದು. ಇಂಥ ಆಯಕಟ್ಟಿನ ಸ್ಥಳಗಳು ಕೈಸೇರಿದವೆಂದರೆ, ನೂರಕ್ಕೆ ತೊಂಬತ್ತೊಂಬತ್ತು ಪಾಲು ಕಾರ್ಯವು ಜರಗಿತೆಂದು ತಿಳಿಯತಕ್ಕದ್ದು. ಇದಕ್ಕಾಗಿಯೇ ದೊಡ್ಡ ದೊಡ್ಡ ಸೇನಾಪತಿಗಳು ಎಲ್ಲಕ್ಕೂ ಮೊದಲು ರಣಭೂಮಿಯ ಪ್ರದೇಶವನ್ನು ನಿರೀಕ್ಷಣ ಮಾಡುವರು. ಆ ಪ್ರಕಾರ ಜಯಸಿಂಗನೂ ಮೊದಲು ರಣಭೂಮಿಯನ್ನು ಚೆನ್ನಾಗಿ ನಿರೀಕ್ಷಿಸಿ ತನ್ನ ಸೈನ್ಯದ ವ್ಯವಸ್ಥೆಯನ್ನು ಮಾಡಿದನು.

ಉತ್ತರದಿಕ್ಕಿನಲ್ಲಿ ಜುನ್ನರ ಪ್ರಾಂತವನ್ನು ಹಿಡಿದು, ಕೊಂಕಣಪಟ್ಟಿಯ ಕೆಳಭಾಗದ ವರೆಗಿನ ಪ್ರದೇಶವನ್ನು ಮುಖ್ಯ ರಣಕ್ಷೇತ್ರವನ್ನಾಗಿ ಮಾಡಿದನು. ಈ ಕೆಲಸದ ಮೇಲೆ ಕುತುಬಖಾನನ ಯೋಜನೆಯನ್ನು ಮಾಡಿ, ಅವನ ಕೈಕೆಳಗೆ ಏಳುಸಾವಿರ ಸೈನ್ಯವನ್ನು ಕೊಟ್ಟನು. ಅದರಲ್ಲಿ ಮೂರುಸಾವಿರ ಜನರದೊಂದು ಪಥಕವನ್ನು ಲೋಹಗಡದ ಎದುರಿಗೆ ನಿಲ್ಲಿಸಿ ಉಳಿದ ದಂಡಾಳುಗಳಿಗೆ ಬೇರೆ ಬೇರೆ ಮಾರ್ಗಗಳನ್ನು ಸುಲಿಯಲಿಕ್ಕೆ ಆಜ್ಞಾಪಿಸಿದನು ಮತ್ತೊಂದು ಪಥಕವನ್ನು ದಾಭಾಡೆಯ ತಳೇಗಾವದ ಹತ್ತರ ಇಟ್ಟನು. ಹತಿಶಾಮಖಾನನ ಕೈಯಲ್ಲಿ ನಾಲ್ಕುಸಾವಿರ ದಂಡಾಳುಗಳನ್ನು ಕೊಟ್ಟು ಅವನಿಗೆ ಪುಣೆಯನ್ನೂ ಅದರ ಸುತ್ತುಮುತ್ತಲಿನ ಪ್ರದೇಶವನ್ನೂ ಸಂರಕ್ಷಿಸಲಿಕ್ಕೆ ಅಪ್ಪಣೆ ಮಾಡಿದನು. ಲೋಹ

ಗಡಕ್ಕೂ ಪುಣೆಗೂ ನಡುವೆ ಇರುವ ಸೀಮೆಯು ಬಹಳ ದುರ್ಗಮವಾದದ್ದು. ಆ ಪ್ರಾಂತವನ್ನು ತನ್ನ ಅಂಕೆಯಲ್ಲಿಟ್ಟುಕೊಳ್ಳುವದಕ್ಕಾಗಿ ಅಲ್ಲಿ ಎರಡುಸಾವಿರ ರಾಹುತರು ಇಡಲ್ಪಟ್ಟರು. ಶಿರವಳದ ಠಾಣ್ಯವು ಮೂರನೇ ಮಹತ್ವದ ಪ್ರಾಂತವು. ಪುರಂದರ ಕೋಟೆಗೆ ದಕ್ಷಿಣದಿಕ್ಕಿನಿಂದ ಸಹಾಯವನ್ನು ತಂದು ಒದಗಿಸಲಿಕ್ಕೆ ಅನುಕೂಲವಾಗಬಾರದೆಂದು, ಈ ಪ್ರಾಂತವು ಆಕ್ರಮಿಸಲ್ಪಟ್ಟಿತು. ಮೊಗಲರಿಗೆ ಬಂದು ಕೂಡಿದ ಛತ್ರಪತಿಮಹಾರಾಜರ ಕೆಲವು ಶತ್ರುಗಳು ಈ ಭಾಗದ ದಂಡಿನಲ್ಲಿ ಸಯ್ಯದ ಅಬದುಲ್ ಅಜೀಜನ ಕೈಕೆಳಗೆ ಇದ್ದರು. ಈ ಜನರು ಯಾರೆಂಬದು ಮುಂದೆ ತಿಳಿಯುವದು. ಇದೇ ಪ್ರಕಾರ ಸಯ್ಯದ ಮುನವರಖಾನನೆಂಬವನ ಸುಪೆಯು ಠಾಣ್ಯದ ಮೇಲೆ ನಿಯಮಿಸಲ್ಪಟ್ಟಿದ್ದನು.

ಈ ಮೇರೆಗೆ ಜಯಸಿಂಗರಾಜನು ವ್ಯೂಹವನ್ನು ರಚಿಸಿ ಶಿವಾಜಿಮಹಾರಾಜರ ಮೇಲೆ ಯಾವ ದಿಕ್ಕಿನಿಂದ ಏರಿಹೋಗಬೇಕೆಂಬದನ್ನು ಆಲೋಚನೆ ಮಾಡಹತ್ತಿದನು. ಬಹಳ ವಿಚಾರಮಾಡಿ ಪುರಂದರಕೋಟೆಯಮೇಲೆ ಮೊದಲು ಸ್ವಾರೀಮಾಡಬೇಕೆಂಬದನ್ನು ನಿಶ್ಚಯಿಸಿ ಇನ್ನು ಪುಣೆಯನ್ನು ಬಿಟ್ಟು ಹೊರಡುವ ವಿಚಾರದಲ್ಲಿದ್ದನು. ಅಷ್ಟರಲ್ಲಿ ಶಿವಾಜಿಯ ಕಡೆಯಸುದ್ದಿಯು ಬಂದಿತು; "ಕುತುಬುದ್ದೀನಖಾನನು ಜುನ್ನರಕ್ಕೆ ಆಹಾರ ಸಾಮುಗ್ರಿಗಳನ್ನು ಕೊಡಲಿಕ್ಕೆ ಹೋಗಿದ್ದಾನೆಂಬದನ್ನೂ, ನಾವು ಪುಣೆಯನ್ನು ಬಿಟ್ಟು ಪುರಂದರದ ಕಡೆಗೆ ಹೊರಟಿರುವೆವೆಂಬದನ್ನೂ ಕೇಳಿ, ಶಿವಾಜಿ ಮಹಾರಾಜರು ಲೋಹಗಡದಲ್ಲಿ ಠಾಣ್ಯವನ್ನು ಹಾಕಿಕೊಂಡು ಕುಳಿತಿರುವರು; ನಾವು ಇತ್ತ ಪುಣೆಯನ್ನು ಬಿಟ್ಟು ಹೊರಟ ಕೂಡಲೆ, ಅತ್ತ ಅವರು ಮೊಗಲರ ಸೀಮೆಯಲ್ಲಿ ಹೊಕ್ಕು ತಮ್ಮ ಕಾಯಕವನ್ನು ನಡೆಯಿಸತಕ್ಕವರು" ಎಂಬ ಸಂಗತಿಯು ತಿಳಿದಕೂಡಲೆ ಜಯಸಿಂಗರಾಜನು, ಕುತುಬಖಾನನನ್ನು ತಿರುಗಿ ಕರೆಯಿಸಿದ್ದಲ್ಲದೆ ತಾನೂ ತನ್ನ ಮೋರ್ಜೆಯನ್ನು ತಿರುಗಿಸಿದನು. ಈ ಕಾಲಕ್ಕೆ ಅವನು ಶಿವಾಜಿ ಮಹಾರಾಜರ ಚಲನವಲನದ ಕಡೆಗೆ ಪೂರ್ಣವಾಗಿ ಲಕ್ಷಕೊಡಬೇಕಾಗಿತ್ತು. ಸ್ವಾರೀಮಾಡಲಿಕ್ಕೆ ಆರಂಭ ಮಾಡುವದೆಂದರೆ, ಕೋಟೆಗಳನ್ನು ಹಿಡಕೊಳ್ಳುವದೆಂಬದು ಸ್ಪಷ್ಟವದೆ. ಮೊದಲನೇ ಹೊಡತಕ್ಕೆ ಪುರಂದರಕೋಟೆಯನ್ನು ಹಿಡಕೊಳ್ಳಬೇಕೆಂದು ಅವನ ಮನಸಿನಲ್ಲಿ ಇತ್ತು. ಅದಕ್ಕಾಗಿ ಅವನು ಕುತುಬುದ್ದೀನನನ್ನು ಕರೆಯಿಸಿದನು. ಕುತುಬುದ್ದೀನನು ಬಂದನೆಂಬ ಸುದ್ದಿಯು ತಿಳಿದ ಕೂಡಲೆ ಪುರಂದರಕೋಟೆಯ ಮೇಲೆ ಸ್ವಾರೀಮಾಡುವದನ್ನು ನಿಶ್ಚಯಿಸಿದನು.

## ೮—ಮೂಕನು ಮಾತಾಡಿದನು.

ಶಿವಾಜಿ ಮಹಾರಾಜರು ಇಂದಿನವರೆಗೆ ಮೊಗಲ ಸರದಾರರಿಗೆ ತೋರಿಸಿದ ಧೈರ್ಯ, ಸಾಹಸ, ಮೋಸಗಾರಿಕೆ ಮೊದಲಾದವುಗಳನ್ನು ಅರಿತ ಜಯಸಿಂಗ ರಾಜನು ಈ ಸಾರೆ ತನ್ನ ಧೋರಣವನ್ನು ಒದಲುಮಾಡಿದನು. "ನಾವು ದಕ್ಷಿಣ ದೇಶಕ್ಕೆ ಬಾದಶಹನ ಹುಕುಮಿನಿಂದ ಈ ಸಾರೆ ದಂಡೆತ್ತಿ ಬಂದದ್ದು, ಹಿಂದಿನಂತೆ ಕೇವಲ ಮೋಸಹೊಂದಿ ಹೋಗಲಿಕ್ಕೆ ಅಲ್ಲ ಶಿವಾಜಿಯ ಸೊಕ್ಕು ಮುರಿದು ಇಲ್ಲಿ ನಾಲ್ಕೂ ಕಡೆಗೆ ಪುನಃ ಬಾದಶಹನ ಅಮಲು ಕೂಡ್ರಿಸಬೇಕೆಂದು ಬಂದಿರುವೆವು" ಎಂಬರ್ಥದ ಈ ಮಾತನ್ನು ಜಯಸಿಂಗನು ಬಾಯಿಂದ ಆಡದಿದ್ದರೂ ಅವನ ಆಚರಣೆಯಿಂದ ವ್ಯಕ್ತವಾಗುತ್ತಿತ್ತು. ಈ ಮೇರೆಗೆ "ತನ್ನ ದರ್ಪದಿಂದಲೂ, ಆಡಂಬರದಿಂದಲೂ ವೈರಿಗಳನ್ನು ಬೆದರಿಸಿ, ಅರ್ಥ-ಪ್ರಾಣಹಾನಿಗಳೇನೂ ಆಗದಂತೆಯೂ, ರಾಜ್ಯವನ್ನು ಹಾಳುಗೆಡವದಂತೆಯೂ ಒಳ್ಳೇ ಚಾತುರ್ಯದಿಂದ ಕಾರ್ಯವನ್ನು ಸಾಧಿಸಬೇಕೆಂ"ಬದೇ ಜಯಸಿಂಗರಾಜನ ಧೋರಣವಾಗಿತ್ತು. ಈ ಧೋರಣವು ಸಾಧಿಸದಿದ್ದರೆ, ಪ್ರತ್ಯಕ್ಷವಾಗಿ ಯುದ್ಧವನ್ನು ಮಾಡಲಿಕೆ ಶೌರ್ಯ ಧೈರ್ಯಾದಿಗಳೂ, ಸೈನ್ಯಬಲವೂ ಜಯಸಿಂಗರಾಜನ ಬಳಿಯಲ್ಲಿದ್ದಿಲ್ಲೆಂಬಂತೆ ಇಲ್ಲ; ಆದರೆ ನಿಷ್ಕಾರಣವಾಗಿ ಪ್ರಾಣಹಾನಿಯಾಗದೆ ಇಷ್ಟಹೇತುವು ಸಾಧಿಸುವಂತಿದ್ದರೆ ಯಾರಿಗೆ ಬೇಡ? ಇಲ್ಲಿಯುವರೆಗೆ ಆದ ಕಾರ್ಯದಿಂದ ಶತ್ರುಗಳ ಮೇಲೆ ನಮ್ಮ ವರ್ಚಸ್ಸು ಚನ್ನಾಗಿ ಬಿದ್ದಿರುವದೆಂದು ಜಯಸಿಂಗರಾಜನ ಮನವರಿಕೆಯಾಗಿತ್ತು. ಅದರಿಂದ ಅವನು ಮೇಲೆ ಹೇಳಿದಂತೆ ಆಯಕಟ್ಟಿನ ಸ್ಥಳಗಳನ್ನು ಹಿಡಕೊಂಡು ವ್ಯವಸ್ಥೆಯನ್ನು ಮಾಡಿದನು. ತಾನು ಸಿಂಹಗಡಕ್ಕೆ ಮುತ್ತಿಗೆ ಹಾಕಿಕೊಂಡು ಕುಳಿತನು; ದಿಲೇರಖಾನನಿಗೆ ಪುರಂದರ ಕೋಟೆಗೆ ಮುತ್ತಿಗೆ ಹಾಕಲಿಕ್ಕೆ ಹೇಳಿದನು. ಈ ಪ್ರಸಂಗದಲ್ಲಿ ಎಲ್ಲಕ್ಕೂ ಮೊದಲು ಜಯಸಿಂಗರಾಜನು ದಿಲೇರಖಾನನನ್ನು ಒತ್ತಟ್ಟಿಗೆ ಕರೆದು—"ಮಹಾರಾಷ್ಟ್ರರ ಸಂಗಡ ಯುದ್ಧಮಾಡಿ ಕೋಟೆಗಳನ್ನು ಗೆದ್ದುಕೊಳ್ಳುವದೆಂದರೆ ಸಾಧಾರಣ ಕೆಲಸವಲ್ಲ. ಬಹುಜನರ ಪ್ರಾಣಹಾನಿಯಾಗದೆ ಕಾರ್ಯವು ಸಾಧಿಸುವದಿಲ್ಲ. ಪ್ರಸಂಗವು ಬಹಳ ಕಠಿಣವಾದದ್ದಿರುವದು. ನಾವು ಈ ಪ್ರಸಂಗದಲ್ಲಿ ಕೆಲಮಟ್ಟಿಗೆ ದರ್ಪದಿಂದಲೂ, ಕೆಲಮಟ್ಟಿಗೆ ಸಾಮೋಪಚಾರದಿಂದಲೂ, ಕೆಲಮಟ್ಟಿಗೆ ನಮ್ಮ ಕರ್ತೃತ್ವವನ್ನು ತೋರಿಸಿಯೂ ಕಾರ್ಯವನ್ನು ಸಾಧಿಸೋಣ. ಹೀಗೆ ಮಾಡುವದರಿಂದ ಸೈನವು ನಾಶವಾಗದೆ,

ಇಷ್ಟು ಉದ್ದೇಶವು ಕೊನೆಗಾಣುವದು, ಕೇವಲ ಬಾಹುಬಲದಿಂದಲೇ ಕೋಟೆಗಳನ್ನು ಗೆಲ್ಲುವದೆಂದರೆ ಸಿಂಹನ ದವಡಿಗಳಲ್ಲಿ ಕೈಹಾಕಿ ಅದರ ಕೋರೆಯಹಲ್ಲುಗಳನ್ನು ಕಿತ್ತಲಿಕ್ಕೆ ಪ್ರಯತ್ನಮಾಡಿದಂತೆ ಭಯಂಕರವಾದ ಕೆಲಸವಾಗುವದು. ಕೋರೆಯ ಹಲ್ಲುಗಳು ಕಿತ್ತಿ ಬರುವವೋ, ಅದರ ದವಡಿಯಲ್ಲಿ ಸಿಕ್ಕು ನಾವೇ ಪ್ರಾಣವನ್ನು ಕಳಕೊಳ್ಳುವೆವೋ ನಿಯಮವಿಲ್ಲ'' ಎಂದು ಹೇಳಿದನು.

ಜಯಸಿಂಗರಾಜನ ಈ ಮಾತು ದಿಲೇರಖಾನನ ಮನಸ್ಸಿಗೆ ಬರಲಿಲ್ಲ. ಅವನಿಗೆ ತೋಳತಿಂಡಿಯು ಬಹಳ. ಅವನು, ಶಿವಾಜಿಯು ಇಂದಿನ ತನಕ ಎಷ್ಟು ಮಂದಿ ಮುಸಲ್ಮಾನ ಸರದಾರರನ್ನು ಸೋಲಿಸಿರುವನೋ ಅವರೆಲ್ಲರ ಸೇಡು ತೀರಿಸಿಕೊಂಡು, ಅವನಿಗೆ ಒಮ್ಮೆ ಚನ್ನಾಗಿ ಕೈ ತೋರಿಸಬೇಕೆಂದು ಆಲೋಚನೆ ಮಾಡಿದ್ದನು. ಜಯಸಿಂಗರಾಜನ ರಾಜನೀತಿ ಕೌಶಲ್ಯದ ಈ ಮಾತುಗಳ ರಹಸ್ಯವನ್ನು ಅರಿಯದೆ, ಇವು ಅಂಜುಬುರುಕತನದಿಂದಾಗಲಿ, ಫಿತೂರಿಯಿಂದಾಗಲಿ ಆಡುವ ಮಾತುಗಳೆಂದು ತಿಳಕೊಂಡನು. ಆ ಪ್ರಕಾರ ಅವನು ಆಡಿಸಹ ತೋರಿಸಿದನು. ಅದರಿಂದ ಜಯಸಿಂಗರಾಜನಿಗೆ ಸಿಟ್ಟು ಬಂತು; ಆದರೆ ಮಾಡುವದೇನು? ಮುಸಲ್ಮಾನ ಸರದಾರನು ಒಂದುವೇಳೆ ರಜಪೂತ ಸರದಾರನ ಕೈಕೆಳಗಿನವನಾಗಿ ನಿಯಮಿಸಲ್ಪಟ್ಟಿದ್ದರೂ, ರಜಪೂತ ಸರದಾರನ ಕೂಡ ಅವನು ಬೇಕಾದ ಹಾಗೆ ಉದ್ದಾಮತನದಿಂದ ನಡಕೊಂಡರೂ, ಎದುರುತ್ತರಗಳನ್ನು ಕೊಟ್ಟರೂ ಅದನ್ನೆಲ್ಲ ಸುಮ್ಮನೆ ಸಹನ ಮಾಡಿಕೊಂಡಿರುವದು ಆ ಕಾಲಕ್ಕೆ ಆ ರಜಪೂತ ಸರದಾರರಿಗೆ ವ್ಯೆಯವಾಗಿಹೋಗಿತ್ತು. ಅದೇ ಪ್ರಕಾರ ಈ ಕಾಲಕ್ಕೆ ಜಯಸಿಂಗನು ದಿಲೇರಖಾನನಿಗೆ ಏನೂ ಉತ್ತರವನ್ನು ಕೊಡದೆ, ಅವನು ಕೊಟ್ಟ ಅಪಮಾನಕಾರಕವಾದ ಉತ್ತರವನ್ನು ಮಾತ್ರ ಸಹನಮಾಡಿಕೊಂಡು ಸುಮ್ಮನೆ ಇದ್ದನು. ಬಹಳ ಹೊತ್ತಿನ ಮೇಲೆ ದಿಲೇರಖಾನನಿಗೆ "ನಾನು ಆಡುವ ಮಾತಿನ ಅನುಭವವು ನಿಮಗೆ ಬಂದ ಮೇಲೆ ನನ್ನ ವಿಚಾರದಂತೆಯೇ ನಡೆಯಬೇಕೆಂದು ನಿಮಗಾದರೂ ಅನಿಸಬಹುದು. ಸದ್ಯಕ್ಕೆ ನಿಮ್ಮ ವಿಚಾರದಂತೆ ನಡೆಯಿರಿ'' ಎಂದು ಹೇಳಿದನು. ಆಗ ದಿಲೇರಖಾನನು ಒಳ್ಳೇ ಡೌಲಿನಿಂದ ಸುತ್ತುಮುತ್ತಲು ನಿಂತ ಸೇವಕರನ್ನು ನೋಡಿ ಸ್ವಲ್ಪ ನಕ್ಕು ವಿನೋದದ ಆವಿರ್ಭಾವವನ್ನು ತೋರಿಸಿದನು. ಇದರಿಂದಂತೂ ಜಯಸಿಂಗನ ಸಿಟ್ಟು ಮತ್ತಿಷ್ಟು ತಲೆಗೇರಿತು ಆದರೂ ಅವನು ಒಂದುಸಾರೆ ನಿಟ್ಟುಸಿರು ಬಿಡುವದಕ್ಕಿಂತ ಹೆಚ್ಚಿಗೇನೂ ಮಾಡಲಿಲ್ಲ. ಸ್ವಲ್ಪ ಹೊತ್ತಿನ ತರುವಾಯ ದಿಲೇರಖಾನನು ಅಲ್ಲಿಂದ ಎದ್ದು ಹೋದನು. ಜಯ

ಸಿಂಗನು ತೀರ ಖಿನ್ನನಾಗಿ ಕುಳಿತುಕೊಂಡಿದ್ದನು. ಅಷ್ಟರಲ್ಲಿ ದ್ವಾರಪಾಲಕನು ಒಳಗೆ ಬಂದು ಜಯಸಿಂಗರಾಜರಿಗೆ—ಸರಕಾರ, ಮದ್ರಾಸೀ ಕೊಂಗರವನ ವೇಷ ದಿಂದ ಬಂದು ನಮ್ಮ ಸೈನ್ಯದಲ್ಲಿ ಸೇರಿಕೊಂಡಿದ್ದ ಒಬ್ಬ ಮನುಷ್ಯನನ್ನು ಗುಪ್ತ ಚಾರನೆಂಬ ಸಂಶಯದಿಂದ ಕಿರಾತಸಿಂಗನು ಹಿಡಿದಿರುವನು; ಆದರೆ ಮುಂದೆ ಏನು ಮಾಡಬೇಕೆಂಬದನ್ನು ಸನ್ನಿಧಿಗೆ ಅರಿಕೆ ಮಾಡಿಕೊಳ್ಳುವದಕ್ಕಾಗಿ ಇಲ್ಲಿಗೆ ಬಂದಿದ್ದಾನೆ" ಎಂದು ವಿನಂತಿ ಮಾಡಿಕೊಂಡನು.

ಈ ಮಾತುಕೇಳಿ ಜಯುಸಿಂಗರಾಜನು ಮೋರೆಯನ್ನು ಗಂಟಿಕ್ಕಿ ಸ್ವಲ್ಪ ಹೊತ್ತು ಸುಮ್ಮನೆ ಕುಳಿತು ವಿಚಾರಮಾಡಿ, ಆ ಬಳಿಕ:—ಅವನನ್ನು ಒಳಗೆ ಕರ ಕೊಂಡು ಬಾ, ಎಂದು ಆಜ್ಞಾಪಿಸಿದನು. ಕಿರಾತಸಿಂಗನು ಒಳಗೆ ಬರುವದ ರೊಳಗೇ ಜಯಸಿಂಗನ ಮುಖಮುದ್ರೆಯು ಮೊದಲಿನಂತೆ ಆಗಿತ್ತು. ಇದಕ್ಕೂ ಸ್ವಲ್ಪಹೊತ್ತಿನ ಮೊದಲು ಇವನ ಮನಸಿಗೆ ತಾಪವಾಗಿ ಸಿಟ್ಟುಬಂದಿತ್ತೆಂಬದರ ಲಕ್ಷಣವು ಮುಖಮುದ್ರೆಯ ಮೇಲೆ ಸ್ವಲ್ಪಾದರೂ ತೋರುವಂತಿದ್ದಿಲ್ಲ. ಕಿರಾತ ಸಿಂಗನು ಒಳಗೆ ಬಂದಕೂಡಲೆ ಜಯಸಿಂಗನಿಗೆ ಕೈಮುಗಿದು ನಮಸ್ಕಾರಮಾಡಿ— ಮಹಾರಾಜರೇ, ತಮ್ಮ ದಂಡಿನ ಛಾವಣಿಯನ್ನು ನೋಡುತ್ತ ಸುಮ್ಮನೆ ಅಡ್ಡಾ ಡುತ್ತಿರುವಾಗ ವಿಲಕ್ಷಣವಾದ ಒಬ್ಬ ಮನುಷ್ಯನು ನನ್ನ ದೃಷ್ಟಿಗೆ ಬಿದ್ದನು. ಪೋಷಾಕಿನಿಂದಲೂ ಬೇರೆ ಲಕ್ಷಣಗಳಿಂದಲೂ ಈತನು ಮದ್ರಾಸದ ಕಡೆಯ ಕೊಂಗರವನಂತೆಕಾಣುತ್ತಾನೆ. ಆದರೆ ನಿಜವಾಗಿ ಇವನು ಕೊಂಗನಲ್ಲ; ಸಿಂಹಗಡ ದಿಂದಾಗಲಿ, ರಾಜಗಡದಿಂದಾಗಲಿ ಗುಪ್ತಚಾರರ ವೇಷದಿಂದ ನಮ್ಮ ಸೈನ್ಯವನ್ನು ಹೊಕ್ಕ ಒಬ್ಬ ಮರಾಟಾಸಾಹಸಿಗನಾಗಿರಬಹುದೆಂಬಂತೆ ನನಗೆ ತೋರುತ್ತದೆ. ಈತನನ್ನು ನೋಡಿದ ಕೂಡಲೆ ಅಲ್ಲಿಯೇ ಕೈಯೊಳಗಿನ ಕತ್ತಿಯಿಂದ ಹೊಡೆದು ಕೊಂದುಬಿಡಬೇಕೆಂದು ನನ್ನ ಮನಸಿನಲ್ಲಿ ಬಂತು; ಆದರೆ ಪುನಃ ವಿಚಾರಮಾಡಲು ಅದು ಸರಿದೋರಲಿಲ್ಲ. ಸನ್ನಿಧಿಯ ಮುಂದೆ ತಂದು ನಿಲ್ಲಿಸಿಬಿಟ್ಟರೆ ತಾವು ತಮ್ಮ ಮನಸಿಗೆ ಬಂದಂತೆ ಇವನ ವ್ಯವಸ್ಥೆಯನ್ನು ಮಾಡೇಮಾಡುವಿರಿ, ಎಂದು ಆಲೋ ಚಿಸಿ ಇಲ್ಲಿಗೆ ಕರಕೊಂಡು ಬಂದೆನು. ಈ ಗೃಹಸ್ಥನು ಬಹುಶಃ ಶಿವಾಜಿಯಾಗಲಿ ಶಿವಾಜಿಯ ಅತ್ಯಂತ ನಂಬಿಗೆಯ ಮನುಷ್ಯನಾಗಲಿ ಇರಬಹುದೆಂದು ನನಗೆ ಸಂಶಯ ಬರುತ್ತದೆ, ಎಂದು ಹೇಳಿದನು

ಜಯಸಿಂಗರಾಜನು ಈ ಮಾತುಕೇಳಿ ಸ್ವಲ್ಪಹೊತ್ತು ವಿಚಾರಮಾಡಿ, ನಕ್ಕು ಕಿರಾತಸಿಂಗನನ್ನು ಕುರಿತು:—ಶಿವಾಜಿಯು ಬಹಳ ಸಾಹಸಿಗನೆಂಬದು

ನಿಜವು; ಆದರೆ ಅವನ ಸುತ್ತುಮುತ್ತಲಿನ ಜನರು ಅವನಿಗೆ ಇಂಥ ಸಾಹಸದ ಕೆಲಸವನ್ನು ಮಾಡಗೊಟ್ಟರೆ ಅವನಿಂದ ರಾಜ್ಯಸ್ಥಾಪನೆಯ ಕೆಲಸವು ಹೇಗಾದೀತು? ಶಿವಾಜಿಯ ಸಲುವಾಗಿ, ಬಹಳವೇಕೆ, ಅವನ ಬಾಯಿಂದ ಹೊರಟ ಶಬ್ದದ ಸಲುವಾಗಿ ತಮ್ಮ ಪ್ರಾಣವನ್ನಾದರೂ ಕೊಡುವ ನೂರಾರು ತರುಣ ಸರದಾರರು ಅವನ ಒಳಿಯಲ್ಲಿರುವರು. ಈತನು ಅವರೊಳಗಿನವನೊಬ್ಬನಿರಬಹುದು. ನೀನು ಇವನನ್ನು ಹಿಡಿದಕೂಡಲೆ ಕೊಲ್ಲದೆ ಬಿಟ್ಟದ್ದು ಬಹಳ ಒಳ್ಳೇದಾಯಿತು. ಇಂಥ ಧೈರ್ಯಶಾಲಿಗಳಾದ ತರುಣರನ್ನು ಹೊಡೆದು ಕೊಲ್ಲದೆ ಸಂರಕ್ಷಿಸಲಿಕ್ಕೆಬೇಕು. ಅವನನ್ನು ಇತ್ತ ಕರಕೊಂಡು ಬಾ. ನಾನು ನೋಡುತ್ತೇನೆ; ಅವನ ಅಂಬೋಣವಾದರೂ ಏನಿರುವದು? ಕೇಳೋಣ. ಅವನ ಮಾತು ಕಥೆಗಳಿಂದಲೂ, ಹಾವಭಾವಗಳಿಂದಲೂ ನಿಜವಾದ ಸಂಗತಿಯು ಹೊರಗೆ ಬಂದೇಬರುವದು.

"ಅವನು ಮಾತೇ ಆಡುವದಿಲ್ಲ; ಮೂಕರ ಸೋಗುಹಾಕಿರುವನು; ಅಥವಾ ತಾನು ಶತ್ರುಗಳ ಕೈಯಲ್ಲಿ ಸಿಕ್ಕಿರುವದರಿಂದ ಯಾರೆಂಬದನ್ನು ಗೊತ್ತು ಹತ್ತಗೊಡಬಾರದೆಂದು ಅವನ ವಿಚಾರವಿರಬಹುದು. ನಾನು ಪರಿಪರಿಯಿಂದ ಅವನನ್ನು ಮಾತಾಡಿಸಿ ನೋಡಿದೆನು. ಒಂದಕ್ಕೂ ಅವನು ಉತ್ತರವನ್ನು ಕೊಡಲಿಲ್ಲ. ಕಡೆಗೆ ನಾನು ಮರಣದ ಭಯವನ್ನು ತೋರಿಸಿದೆನು. ನಾನಾಪ್ರಕಾರವಾಗಿ ಗೋಳಾಡಿಸಿ ಕೊಲ್ಲುವೆನೆಂದು ಅಂಜಿಕೆ ಹಾಕಿದೆನು. ಏನು ಹೇಳಿದರೂ ಅವನು ತನಗೆ ಮಾತುಗಳೇ ಬರುವದಿಲ್ಲೆಂಬ ಭಾವದಿಂದ ನಡೆಯಹತ್ತಿದ್ದಾನೆ."

ಜಯಸಿಂಗನು ಅದನ್ನೆಲ್ಲ ಕೇಳಿಕೊಂಡು ಪುನಃ ಸ್ವಲ್ಪ ಸ್ವಸ್ಥವಾಗಿ ಕುಳಿತುಕೊಂಡು:—"ಒಳ್ಳೇದು ಆ ವ್ಯಕ್ತಿಯನ್ನು ಒಮ್ಮೆ ಕಣ್ಣಿನಿಂದಾದರೂ ನೋಡೋಣ! ಅವನು ಯಾರು, ಅವನ ಮನಸಿನಲ್ಲಿ ಹೇತುಗಳೇನಿರುವವು? ಇದನ್ನು ಶೋಧಿಸಿ ತೆಗೆಯೋಣ. ಎಲಾ, ಯಾರೋ ಅಲ್ಲಿ? ಆ ಸೆರೆಯಾಳನ್ನು ಬೇಗನೆ ಒಳಗೆ ಕರಕೊಂಡು ಬರ್ರಿ. ಅವನನ್ನು ಒಮ್ಮೆ ಚೆನ್ನಾಗಿ ನೋಡೋಣ. ಒಂದೆರಡು ಹುಸಿಗುಂಡು ಹಾರಿಸಿದರೆ ಸಾಕು. ಇದ್ದದ್ದೆಲ್ಲ ಹೂರಣವು ಹೊರಬೀಳುವದು. ಹದಿನಾಲ್ಕನೇ ರತ್ನವಂತು ಇಂಥವರಿಗೆ ಬಹಳ ಉಪಯುಕ್ತವಾದದ್ದು" ಅಂದನು. ಅಷ್ಟರಲ್ಲಿ ಆ ಮುಪ್ರಾಸೀಗೃಹಸ್ಥನನ್ನು ಒಳಗೆ ಕರಕೊಂಡು ಬಂದರು. ಜಯಸಿಂಗನು ಹುಬ್ಬುಗಂಟಿಕ್ಕಿ ಗಡ್ಡದಮೇಲೆ ಕೈಯಾಡಿಸಿ ಸೂಕ್ಷ್ಮದೃಷ್ಟಿಯಿಂದ ಅವನನ್ನು ನೋಡಿದನು. ಅವನ ಪೋಷಾಕು ವಿಲಕ್ಷಣವಾಗಿದದ್ದಿತ್ತು. ಒಂದು ೬-೭ ಮೊಳದ ಧೋತರವನ್ನು ಉಟ್ಟಿದ್ದನು. ಅಂಥದೇ ಒಂದು ಅರಿವೆ

ಯನ್ನು ಹೊತ್ತಿದ್ದನು. ಇದರ ಹೊರತು ಮೈಮೇಲೆ ಒಂದು ನೂಲೆಳೆಯೂ ಇದ್ದಿಲ್ಲ. ತಲೆಯಮೇಲೆ ಬಹಳ ಕೂದಲುಗಳು ಇದ್ದವು. ಚಂಡಿಕೆಗೆ ದೊಡ್ಡ ದೊಂದು ಗಂಟುಹಾಕಿದ್ದನು; ಅದು ಹೆಗಲಮೇಲೆ ಬಿದ್ದಿತ್ತು. ಹಣೆಯಮೇಲೆ ತ್ರಿಪುಂಡ್ರ ನಾಮವು ಒಡೆದು ಕಾಣುತ್ತಿತ್ತು. ಜಯಸಿಂಗನ ಹತ್ತರ ಕರ ಕೊಂಡು ಹೋದಕೂಡಲೆ ಮೊದಲು ಅವನು ಹುಚ್ಚನಂತೆ ಅತ್ತ ಇತ್ತ ನೋಡ ಹತ್ತಿದನು. ಜಯಸಿಂಗನು ಆತನನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ ತರುವಾಯ-- ಅವನನ್ನು ಮುಂದೆ ಕರೆದು ಹಿಂದುಸ್ತಾನೀಭಾಷೆಯಲ್ಲಿ ಏನೇನೋ ಕೇಳಿದನು. ಅದಕ್ಕೆ ಅವನು ಜಯಸಿಂಗನ ಮೋರೆಯ ಕಡೆಗೆ ನೋಡಿ ಸುಮ್ಮನೆ ನಗಹತ್ತಿದನು. ಮತ್ತು ನನಗೆ ಮಾತಾಡಲಿಕ್ಕೆ ಬರುವದಿಲ್ಲೆಂತಲೂ, ಕಿವಿಗಳು ಕೇಳುವದಿಲ್ಲೆಂ- ತಲೂ ಸನ್ನೆ ಮಾಡಹತ್ತಿದನು. ಜಯಸಿಂಗನು ಅವನ್ನು ನೋಡಿ ನಗಹತ್ತಿದನು; ಹಾಗು ಅವನ ಕಡೆಗೆ ಮೋರೆಮಾಡಿ—ವಾಹವ್ವಾ! ವೇಷವು ಮಾತ್ರ ಬಹಳ ಚೆನ್ನಾಗಿ ಸಾಧಿಸಿರುವದು. ಆದರೆ ನಾನು ಮಾತ್ರ ಇಂಥ ವೇಷಗಳಿಗೆ ಮೋಸ ಹೋಗುವ ಮನುಷ್ಯನಲ್ಲ ಕಂಡಿಯಾ? ನೀನು ನಿಜವಾಗಿ ಮದ್ರಾಸೀಗೃಹಸ್ಥ ನಲ್ಲ; ಮೂಕನೂ ಅಲ್ಲ; ನಿನಗೆ ಚೆನ್ನಾಗಿ ಮಾತಾಡಲಿಕ್ಕೆ ಬರುವದು. ಮೋಸ ದಿಂದ ನಮ್ಮ ಛಾವಣಿಯಲ್ಲಿ ಹೊಕ್ಕು ಗುಪ್ತಚಾರರ ಕೆಲಸವನ್ನು ಮಾಡಲಿಕ್ಕೆ ಬಂದಿರುವೆ. ನಿನ್ನ ಮೋಸವು ಬೈಲಿಗೆ ಬಾರದೆ ಉಳಿಯಲಿಕ್ಕಿಲ್ಲ. ನಿಜವಾದ ಸಂಗತಿಯನ್ನು ಇದ್ದಕ್ಕಿದ್ದಂತೆ ಹೇಳಿಬಿಡು. ನಿನ್ನ ತಪ್ಪನ್ನು ನಾನು ಕ್ಷಮಿಸಿ ಬಿಡುವೆನು.

ಜಯಸಿಂಗನು ಸಾಮಾನ್ಯ ಮನುಷ್ಯನಲ್ಲ; ಬಹಳ ಧೂರ್ತನು. ಅವನು ತಾನು ಆಡುವ ಮಾತುಗಳನ್ನೆಲ್ಲ ಸುಲಭವಾದ ಉರ್ದೂಭಾಷೆಯಲ್ಲಿ ಆಡುತ್ತಿ ದ್ದನು. ಈ ಮಾತುಗಳನ್ನು ಅವನು ಲಕ್ಷಗೊಟ್ಟು ಕೇಳುವನೋ ಹೇಗೆಂಬ ದನ್ನು ನೋಡುವದೇ ಅವನ ಮನಸ್ಸಿನೊಳಗಿನ ಹೇತುವಾಗಿತ್ತು. ಅವನ ಲಕ್ಷವು ತನ್ನ ಮಾತಿನ ಕಡೆಗೆ ಇದ್ದದ್ದು ಕಂಡುಬಂದರೆ ಅವನು ನಿಜವಾಗಿ ಮೋಸಗಾರ ನಿರಲಿಕ್ಕೆ ಬೇಕು. ಒಂದುವೇಳೆ ಲಕ್ಷವು ಇರದಿದ್ದರೆ ಅವನು ನಿಜವಾಗಿ ಮೂಕನೂ, ಕಿವುಡನೂ ಆಗಿರಲಿಕ್ಕೆಬೇಕು. ಮೊದಲಿನ ಐದಾರು ಶಬ್ದಗಳನ್ನು ಅವನು ಲಕ್ಷ ಪೂರ್ವಕವಾಗಿ ಕೇಳುತ್ತಿರುವಂತೆ ಜಯಸಿಂಗನಿಗೆ ಭಾಸವಾಯಿತು. ಮುಂದೆ ಅವನ ಲಕ್ಷವು ತನ್ನ ಮಾತಿನಕಡೆಗೆ ಇರದೆ ಅತ್ತ ಇತ್ತ ಭ್ರಾಂತಿಷ್ಟನಂತೆ ನೋಡು ತ್ತಿರುವ ಹಾಗೆ ಅವನಿಗೆ ಕಂಡುಬಂತು; ಆದರೆ ಅವನು ಬುದ್ಧಿಪೂರ್ವಕವಾಗಿ

ಹೀಗೆ ನಟಿಸುವನೋ ಅಥವಾ ನಿಜವಾಗಿಯೇ ಅವನು ಕಿವುಡನೂ, ಮೂಕನೂ ಆಗಿರುವನೋ ಎಂಬದು ಜಯಸಿಂಗನಿಗೆ ತಿಳಿಯದಂತಾಯಿತು. ಒಂದು ಸಾರೆ ಆಮಿಷವನ್ನು ಒಗೆಯಲು ಮೀನವು ಅದನ್ನು ಹಿಡಿಯಲಿಲ್ಲೆಂಬದು ಮಾತ್ರ ಅವನ ಮನವರಿಕೆಯಾಯಿತು. ಇಷ್ಟರಿಂದ ಕಾರ್ಯವು ನೆರವೇರಲಿಲ್ಲೆಂಬದು ಸ್ಪಷ್ಟ ವಾಯಿತು; ಆದರೆ ಇಷ್ಟಕ್ಕೇ ಮುಂದಿನ ಪ್ರಯತ್ನವನ್ನು ಬಿಡುವದು ಜಯಸಿಂಗನ ಸ್ವಭಾವವಾಗಿದ್ದಿಲ್ಲ. ಅವನು ಇನ್ನೊಂದು ಸಾರೆ ಮೀನವನ್ನು ಹಿಡಿಯುವದ ಕ್ಕಾಗಿ ಆಮಿಷವನ್ನು ಒಗೆದನು. ಅದಕ್ಕಾಗಿ ಅವನು ಈತನು ಮೋಸಗಾರನಿರು ವನೋ ನಿಜವಾಗಿ ಕಿವುಡನೂ ಮೂಕನೂ ಆಗಿರುವನೋ ನೋಡಬೇಕೆಂದು ಕಿರಾತಸಿಂಗನನ್ನು ಕುರಿತು—"ಉರ್ದೂಭಾಷೆಯಲ್ಲಿ ಮಾತಾಡಿ ನೋಡಿದನು. ಅದರಿಂದ ಇವನು ನಿಜವಾಗಿಯೇ ಕಿವುಡನೂ ಮೂಕನೂ ಆಗಿರುವನೆಂದು ಗೊತ್ತಾಯಿತು. ಸುಮ್ಮ ಸುಮ್ಮನೆ ನೀವು ಅವನ ಮೇಲೆ ಇಲ್ಲದ ಆರೋಪ ಗಳನ್ನು ಹೊರಿಸುತ್ತಿದ್ದಿರಿ. ನನ್ನ ಮುಂದೆ ಕರಕೊಂಡು ಬಂದದ್ದು ಒಳ್ಳೇದಾ ಯಿತು. ಇಲ್ಲದಿದ್ದರೆ ಒಬ್ಬ ನಿರಪರಾಧಿಯಾದ ಮನುಷ್ಯನನ್ನು ಕೊಂದ ಪಾಪವು ನಿಮಗೆ ಬರುತ್ತಿತ್ತು."

ಈ ಮಾತುಗಳನ್ನು ಆಡುವಾಗಲೂ ಜಯಸಿಂಗನ ಲಕ್ಷವು ಆ ಮನುಷ್ಯನ ಮುಖಮುದ್ರೆಯ ಕಡೆಗೇ ಇತ್ತು. ಮಾತಾಡಲಿಕ್ಕೆ ಪ್ರಾರಂಭಮಾಡಿದ ಕೂಡಲೆ ಮೊದಲಿನ ಮೂರು ನಾಲ್ಕು ಶಬ್ದಗಳನ್ನು ಆಡುವತನಕ ಆ ಮನುಷ್ಯನು ಚೆನ್ನಾಗಿ ಕಿವಿಗೊಟ್ಟು ಕೇಳುತ್ತಿದ್ದನೆಂಬ ದೃಢಸಂಶಯವು ಜಯಸಿಂಗನ ಮನ ಸ್ಸಿನಲ್ಲಿ ಹುಟ್ಟಿತು. ಇದೇ ಈಗ ಮಾತಾಡಿದಾಗ ಮನಸಿಗೆ ಭಾಸವಾದ ಸಂಗತಿಯು ಈಗ ದೃಢಸಂಶಯಕ್ಕೆ ಕಾರಣವಾಯಿತು. ಇನ್ನೊಂದು ಸಾರೆ ಪ್ರಯೋಗಮಾಡಿ ನೋಡಿದರೆ ಈ ಸಂಶಯವು ನಿವಾರಣವಾಗಿ ನಿಶ್ಚಯದ ಸ್ವರೂಪವು ಬರಬಹು ದೆಂದು ಜಯಸಿಂಗನು ಆಲೋಚಿಸಿದನು. ಆ ಬಳಿಕ ಅವನು ಕಿರಾತಸಿಂಗನನ್ನು ಕುರಿತು:—

ಇವನನ್ನು ನಾವು ದಾಸನೆಂದು ನಮ್ಮಲ್ಲಿ ಇಟ್ಟುಕೊಳ್ಳೋಣ; ನಾನು ಈತನನ್ನು ಬಿಟ್ಟುಬಿಡುತ್ತಿದ್ದೆನು; ಆದರೆ ಸೆರೆಸಿಕ್ಕ ಮನುಷ್ಯನನ್ನು ಯುದ್ಧವು ಮುಗಿಯುವವರೆಗೆ ಬಿಡಬಾರದೆಂದು ನಿಯಮವಿರುವದು. ಇದಲ್ಲದೆ ಬಾದ ಶಹನ ಅಂತಃಪುರದಲ್ಲಿ ಕಿವುಡರೂ, ಮೂಕರೂ, ಖೋಜ್ಜೇರೂ ಅನೇಕ ಜನರಿರು ವರು; ಅವರಂತೆ ಇವನಾದರೂ ಒಬ್ಬನೆಂದು ತಿಳಿದು ಇಟ್ಟುಕೊಳ್ಳೋಣ;

ಇವನು ಇಲ್ಲಿಯೇ ಕೂಡ್ರಲಿ. ಇವನು ಇರುವಾಗ ನಾವು ಯಾವ ರಾಜಕಾರಣದ ಮಾತುಗಳನ್ನು ಆಡಲಿಕ್ಕೂ ಅಡ್ಡಿಯಿಲ್ಲ. ಆ ಮಾತು ಹೊರಗೆ ಹೋದೀತೆಂಬ ಅಂಜಿಕೆಯಿಲ್ಲ. ಸಿಂಹಗಡ, ಪುರಂದರಕೋಟೆಯೊಳಗೆ ಅನ್ನಸಾಮುಗ್ರಿಗಳು ಹೋಗದಂತೆ ಕಟ್ಟುಮಾಡುವದೂ ಈ ಕೋಟೆಯ ಮೇಲಿನ ಜನರನ್ನು ಒಡಕೊಂಡು ನಮ್ಮ ಪಕ್ಷಕ್ಕೆ ಸೇರಿಸಿಕೊಳ್ಳುವದೂ ಬಹಳ ಕಠಿಣವಾಗಿಲ್ಲ. ಈ ಶಿವಾಜಿಯ ಜನರು ಒಳ್ಳೇ ಸ್ವಾಮಿಭಕ್ತರೂ, ಸ್ವರಾಜ್ಯಭಕ್ತರೂ ಆಗಿರುವರೆಂತಲೂ ಇವರಿಗೆ ತ್ರೈಲೋಕ್ಯದ ಆಧಿಪತ್ಯವನ್ನು ಕೊಟ್ಟರೂ ಕೂಡ ಇವರ ಮನಸ್ಸು ಕರಗುವದಿಲ್ಲೆಂತಲೂ ಮೊದಲು ನನ್ನ ತಿಳುವಳಿಕೆಯಿತ್ತು; ಆದರೆ ಈ ಮಾತಿನಲ್ಲಿ ಏನೂ ಅರ್ಥವಿಲ್ಲೆಂದು ಇತ್ತಿತ್ತಲಾಗಿ ಅನುಭವದಿಂದ ಗೊತ್ತಾಗಹತ್ತಿರುವದು. ಒಂದು ರಕ್ತದ ಬಿಂದುವನ್ನೂ ಕೂಡ ಕೆಡವದೆ ಕೇವಲ ಜನರನ್ನು ಒಡಕೊಂಡು ಎಲ್ಲ ಕೋಟೆಗಳನ್ನು ಶಿವಾಜಿಯಿಂದ ಕಸಕೊಳ್ಳಲಿಕ್ಕೆ ಏನೂ ಅಡ್ಡಿಯಾಗಲಾರದೆಂದು ಈಗ ನಾನು ಖಂಡಿತವಾಗಿ ಹೇಳುತ್ತೇನೆ.

ಈ ಸಿಂಹಗಡಕೋಟೆಯ ಠಾಣೇದಾರನ ಅವಸ್ಥೆಯನ್ನು ನೋಡಿರಿ. ಅವನು ತನಗೆ ಜಹಾಗೀರು ಸಿಕ್ಕರೆ, ಕೋಟೆಯನ್ನು ಜಯಸಿಂಗನ ಸ್ವಾಧೀನ ಮಾಡಲಿಕ್ಕೆ ಸಿದ್ಧನಿರುವೆನೆಂದು ಬರೆದಿದ್ದಾನೆ. ಶಿವಾಜಿಯ ಜನರು ಇಷ್ಟು ಅಪ್ರಾಮಾಣಿಕರಿರಬಹುದೆಂದು ನನ್ನ ಕಲ್ಪನೆಯಿದ್ದಿಲ್ಲ. ಈ ಜನರು ಸಣ್ಣ ಸಣ್ಣ ಜಹಾಗೀರುಗಳಿಗೆ ಆಶೆಪಟ್ಟು ಬೇಕಾದ ಕೆಲಸಗಳನ್ನು ಮಾಡಲಿಕ್ಕೆ ಸಿದ್ಧರಿರುವರೆಂದು, ಸ್ವಲ್ಪ ದಿವಸಗಳ ಅನುಭವದಿಂದ ನನ್ನ ಮನವರಿಕೆಯಾಗಿರುತ್ತದೆ. ಪುರಂದರಕೋಟೆಯ ಹಾಡಾದರೂ ಹೀಗೇ ಇರುವದು. ಮುರಾರ ಬಾಜಿಯ ಮನಸ್ಸು ಘಳಮೇಸ ಹತ್ತಿರುವದು. ಅವನು ನಮ್ಮ ಪಂತರ ಮುಂದೆ ಏನು ಮಾತಾಡಿದನು ಗೊತ್ತದೆಯೋ? ಅವನು:—"ಮೊದಲೇ ನಾವು ವಿಜಾಪುರದವರ ಆಶ್ರಿತರು; ಅವರನ್ನು ಬಿಟ್ಟು ಇತ್ತಕಡೆಗೆ ಬಂದು ಕೂಡಿಕೊಂಡಿರುವೆವು. ಇನ್ನು ಇಲ್ಲಿಂದ ಶಿವಾಜಿಯನ್ನು ಬಿಟ್ಟುಕೊಟ್ಟು ಮೊಗಲರನ್ನು ಕೂಡಿಕೊಳ್ಳುವೆವು. ಶಿವಾಜಿಯಾದರೂ ನಮಗೆ ಏನು ಕೊಟ್ಟನು? ಜಹಾಗೀರು ಹಾಕಿಕೊಟ್ಟಿರುವನೆ? ಅವನಸಲುವಾಗಿ ನಾವು ನಮ್ಮ ಪ್ರಾಣವನ್ನು ಕೊಟ್ಟು ನಮ್ಮ ಹೆಂಡಿರುಮಕ್ಕಳನ್ನು ಯಾಕೆ ಅನಾಥರನ್ನಾಗಿ ಮಾಡಬೇಕು? ಬಾದಶಹನು ನಮಗೆ ಈ ಕೋಟೆಯನ್ನೂ ಈ ಪ್ರಾಂತವನ್ನೂ ಇನಾಮಾಗಿ ಕೊಟ್ಟರೆ, ಇಪ್ಪತ್ತಾಲ್ಕು ತಾಸುಗಳಲ್ಲಿ ಎಲ್ಲ ಮಾವಳೆ ಜನರನ್ನು ಅವನ ಅಧೀನ ಮಾಡುವೆವು." ಕಿರಾತಸಿಂಗ, ನಾವು

ಇಂದಿನ ವರೆಗೆ ಕೇಳುತ್ತ ಬಂದ ಸಂಗತಿಗಳೆಲ್ಲ ನಿರರ್ಥಕವಾಗಿರುವವು. ಈ ಮಹಾರಾಷ್ಟ್ರ ಸ್ವರಾಜ್ಯರೂಪವೃಕ್ಷವು ಹೊರಗೆ ಕಾಣಿಸುವಷ್ಟು ಒಳಗೆ ಗಟ್ಟಿಯಾಗಿಲ್ಲ; ಸಾರಾಂಶ, ನಾನು ಒಳ್ಳೇ ಹೊತ್ತಿಗೆ ಬಂದಿರುವೆನು. ಈ ಸಾರೆ ಜಯಶಾಲಿಯಾಗಿಯೇ ಇಲ್ಲಿಂದ ಹೋಗುವೆನು; ಶಿವಾಜಿಯ ಕಪಟಕ್ಕೆ ಎಷ್ಟು ಮಾತ್ರವೂ ಆಸ್ಪದವನ್ನು ಕೊಡುವದಿಲ್ಲ. ಅವನ ಸವಿಮಾತುಗಳಿಗೂ ಒಡಂಬಡಿಕೆಯ ಸಂಧಾನಕ್ಕೂ ಮೋಸ ಹೋಗುವಂತಿಲ್ಲ. ಅಫಜುಲಖಾನ, ಶಾಹಿಸ್ತೆಖಾನ, ಚಂದ್ರರಾವ ಮೋರೆ ಮೊದಲಾದವರ ಹಾಗೆ ಮೋಸಹೊಂದದಂತೆ ಎಚ್ಚರಪಡಲಿಕ್ಕೆ ಬೇಕು. ನಮಗೆ ಈ ಶಿವಾಜಿಯಿಂದ ವಿಶ್ವಾಸಘಾತದ್ದೊಂದೇ ಅಂಜಿಕೆಯು. ಆ ಬಗ್ಗೆ ಎಚ್ಚರಪಟ್ಟರೆ ತೀರಿತು, ನಮ್ಮ ಉದ್ದೇಶವು ಈಡೇರಿತೆಂದು ತಿಳಿಯತಕ್ಕದ್ದು. ಇದರಲ್ಲೇನೂ ಸಂದೇಹವಿಲ್ಲ."

ಜಯಸಿಂಗನು ಈ ಮಾತುಗಳನ್ನು ಆಡುವಾಗ, ನಾಲ್ಕಾಲ್ಕು ಐದೈದು ಶಬ್ದಗಳಿಗೊಮ್ಮೆ ಆ ಮದ್ರಾಸೀ ದಾಸಯ್ಯನ ಕಡೆಗೆ ಸೂಕ್ಷ್ಮದೃಷ್ಟಿಯಿಂದ ನೋಡುತ್ತಿದ್ದನು. ತನ್ನ ಮಾತಿನೊಳಗಿನ ಪ್ರತಿಯೊಂದು ಶಬ್ದದಿಂದ ಆ ಮನುಷ್ಯನ ಮುಖಮುದ್ರೆಯಲ್ಲಿ ಯಾವ ಹೆಚ್ಚುಕಡಿಮೆಗಳು ಆಗುತ್ತಿದ್ದವೆಂಬದನ್ನು ನೋಡುವದೇ ಅವನ ಉದ್ದೇಶವಾಗಿತ್ತು. ಈ ತರದ ಹೆಚ್ಚುಕಡಿಮೆಗಳೇನೂ ಆಗದಿದ್ದರೆ ಮಾತ್ರ ಅವನು ನಿಜವಾಗಿ ಕಿವುಡನೂ ಮೂಕನೂ ಆಗಿರುವನು; ಆದರೆ ಹೆಚ್ಚು ಕಡಿಮೆಗಳು ತೋರಿದರೆ ಅವನು ಪಕ್ಕಾ ಮೋಸಗಾರನಿರಲಿಕ್ಕೆ ಬೇಕು. ಅವನು ಶಿವಾಜಿಯ ನಂಬಿಗೆಯ ಸೇವಕನಾಗಿದ್ದರೆ ನನ್ನ ಮಾತುಗಳನ್ನು ಕೇಳಿ ಅವನಿಗೆ ಒಳ್ಳೇ ಸಿಟ್ಟುಬಂದಿರಲಿಕ್ಕೆಬೇಕು. ಯಾಕಂದರೆ ಶಿವಾಜಿ ಮಹಾರಾಜರ ಎಲ್ಲ ಸರದಾರರೂ ಶಿಪಾಯಿಗಳೂ ಒಳ್ಳೇ ಸ್ವಾಮಿನಿಷ್ಠರೂ, ಜೀವಕ್ಕೆ ಜೀವ ಕೊಡುವಂಥವರೂ ಆಗಿರುವರೆಂಬದಕ್ಕೆ ಯಾರಿಗೂ ಸಂದೇಹವಿದ್ದಿಲ್ಲ. ಶಿವಾಜಿಯು ಪರಪಕ್ಷದ ಜನರನ್ನು ತನ್ನ ಕಡೆಗೆ ಒಡಕೊಳ್ಳುತ್ತಿದ್ದನು; ಆದರೆ ಅವನ ಜನರು ಯಾವ ಲೋಭಕ್ಕೂ ಒಳಗಾಗುವವರಲ್ಲ. ಇಂಥ ಜನರು ಅಧಿಕಾರಕ್ಕೂ ಜಹಾಗೀರಿಗೂ ಮರುಳಾಗಿ ಶಿವಾಜಿಯ ಪಕ್ಷವನ್ನು ಬಿಟ್ಟು ಮೊಗಲರನ್ನು ಕೂಡಿಕೊಳ್ಳುವರೆಂಬ ಸುಳ್ಳು ಸಂಗತಿಯನ್ನು ಇವನ ಮುಂದೆ ಆಡಲು ಇವನು ಅವುಗಳನ್ನು ಕೇಳಿ ಸಂತಾಪಗೊಳ್ಳದೆ ಎಂದೂ ಇರಲಿಕ್ಕಿಲ್ಲ. ಹೀಗೆ ಸಂತಾಪಗೊಂಡದ್ದು ನಮ್ಮ ದೃಷ್ಟಿಗೆ ಬಿದ್ದರೆ ತೀರಿತು ನಮ್ಮ ಕಾರ್ಯವಾಯಿತೆಂದು ತಿಳಿಯತಕ್ಕದ್ದು. ಏನೂ ನದ ಗಂಟಲಿಗೆ ಗಾಣವು ಬಿತ್ತೆಂದು ತಿಳಿಯ

ತಕ್ಕದ್ದು. ಎಂದು ತಿಳಿದೇ ಜಯುಸಿಂಗನು ಮೇಲೆ ಹೇಳಿದಂತೆ ಭಾಷಣಮಾಡಿದನು. ಮತ್ತು ಹೀಗೆ ಮಾಡುತ್ತ ಮಾಡುತ್ತ ಜಯುಸಿಂಗನು—ಹಿಂದೆ ಮಾಡಿದಂಥ ವಿಶ್ವಾಸಘಾತಗಳಿಗೆ ನಾನು ಮಾತ್ರ ಇನ್ನು ಬಲಿಬೀಳುವದಿಲ್ಲ ಮುಂದಿನವರು ಎಡವಲು ಹಿಂದಿನವರು ಕೂಡಲೆ ಎಚ್ಚರಪಡುವರು; ನನಗಿಂತ ಮೊದಲು ಇಬ್ಬರು ಮೂವರು ಈ ಶಿವಾಜಿಯು ಮೋಸಕ್ಕೆ ಒಳಗಾದರು. ಅವರಂತೆ ನನ್ನ ಅವಸ್ಥೆಯಾಗದಂತೆ ನಾನು ಎಚ್ಚರಪಡುವೆನು. ಶಿವಾಜಿಯು ಜನರು ಸಂತೋಷದಿಂದ ನಮ್ಮ ಕಡೆಗೆ ಬರುತ್ತಿದ್ದರೆ, ಅವರಿಗೆ ಅಧಿಕಾರಗಳನ್ನೂ ಜಹಾಗೀರುಗಳನ್ನೂ ಕೊಟ್ಟು ಕರಕೊಳ್ಳುವೆನು. ನೇತಾಜಿಪಾಲಕರ, ಪ್ರತಾಪರಾವ ಗುಜರ ಇವರಂಥ ಮನುಷ್ಯರು ನಮ್ಮ ಕಡೆಗೆ ಬಂದರೆ ನಮಗೆ ಇನ್ನೇನುಬೇಕು? ನಮ್ಮ ಕೆಲಸವೇ ಮುಗಿಯಿತು ಅವರಿಬ್ಬರು ನಮ್ಮ ಕಡೆಗೆ ಬಂದುಬಿಟ್ಟರೆ, ಶಿವಾಜಿಯು ಅರ್ಧ ಶಕ್ತಿಯು ಕಡಿಮೆಯಾದಂತಾಗುವದು. ಅವರು ನಿಶ್ಚಯವಾಗಿಯೇ ನಮ್ಮ ಕಡೆಗೆ ಬರುವರು. ಇದರಲ್ಲೇನೂ ಸಂದೇಹವಿಲ್ಲ. ಎಂದು ಪುನಃ ನುಡಿದನು. ಪ್ರಿಯ ವಾಚಕರೇ ಈಗ ಮಾತ್ರ ಜಯುಸಿಂಗನ ಬಯಕೆಯು ಕೈಗೂಡಿತು.

ಸುಳ್ಳು! ಸುಳ್ಳು!! ತೀರ ಸುಳ್ಳು!!! ಅವರಿಬ್ಬರು ಮಹಾರಾಜರ ಪೂರ್ಣ ನಂಬಿಗೆಯ ಸರದಾರರು ನೀವು ಇನನ್ನೇನು ಹೇಳುವಿರಿ?'' ಎಂದು ಆ ಮೂಕನ ಬಾಯಿಂದ ಒಮ್ಮೆಲೆ ಉದ್ಗಾರವು ಹೊರಟು ಹೋಯಿತು; ಮತ್ತು ಈ ಮಾತುಗಳನ್ನು ಆಡುವಾಗ ಅವನು ಹಲ್ಲುದವಡಿಗಳನ್ನು ಕಚ್ಚಿದ್ದನು. ಕಣ್ಣುಗಳು ಕೆಂಡದಂತೆ ಕೆಂಪಗಾಗಿದ್ದವು. ಕೈ-ಕಾಲುಗಳು ಥರ ಥರ ನಡುತ್ತಿದ್ದನ. ಈತನು ಇನ್ನು ಜಯುಸಿಂಗರಾಜನ ಮೈಮೇಲೆ ಹೋಗಿ ಹೊಡೆಯುತ್ತಾನೋ ಏನೋ ಎಂಬಂತೆ ತೋರುತ್ತಿದ್ದನು.

ಇದನ್ನೆಲ್ಲ ನೋಡುತ್ತಿದ್ದ ಕಿರಾತಸಿಂಗನು ಆಶ್ಚರ್ಯದಿಂದ ಚಕಿತನಾಗಿ ಆ ಕೊಂಗನನ್ನು ಮಿಕಿಮಿಕಿ ನೋಡಹತ್ತಿದನು. ಜಯುಸಿಂಗನು ನಕ್ಕು—ಓಹೋಹೋ! ಈ ಜಯುಸಿಂಗನ ಹತ್ತರ ಮೂಕರಿಗೆ ಮಾತುಗಲಿಸುವ ಹಾಗು ಕಿವುಡರಿಗೆ ಕೇಳಬರುವಂತೆ ಮಾಡುವ ವಿಲಕ್ಷಣವಾದ ಔಷಧವು ಉಂಟೆಂಬದು ಪಾಪ ನಿಮಗೆಲ್ಲಿ ಗೊತ್ತು!! ಇಷ್ಟೇ ಅಲ್ಲ, ಆ ಔಷಧದಿಂದ ಮದ್ರಾಸದ ಕಡೆಯ ಕೊಂಗರಿಗೆ ಸಹ ಉರ್ದೂಭಾಷೆಯು ತಿಳಿಯುವದು. ಎಲಾ ಹುಚ್ಚ ಗೃಹಸ್ಥಾ, ನಿಮಗೆ ಇಷ್ಟೇಕೆ ತಿಳಿಯುವದಿಲ್ಲ? ಇಂದಿಗೆ ಎಷ್ಟೋ ವರ್ಷಗಳಿಂದ ಹಗೆಗಳ

ಸಂಗಡ ಹೋರಾಡಹತ್ತಿರುವೆನು. ನಿಮ್ಮಂಥ ಮೋಸಗಾರರ ಅನುಭವವು ನನಗೆ ಸ್ವಲ್ಪಾದರೂ ಬಂದಿರಲಿಕ್ಕಿಲ್ಲವೇ? ನಾನು ನನ್ನ ಆಯುಷ್ಯವನ್ನು ವ್ಯರ್ಥವಾಗಿ ಕಳೆದಿರಬಹುದೇ? ನನ್ನ ತಲೆಯೊಳಗಿನ ಕೂದಲು ಬೆಳ್ಳಗಾದವು; ಶರೀರವು ಮುಪ್ಪಾಯಿತು. ಇವುಗಳ ಸಂಗಡ ನನ್ನ ಬುದ್ಧಿಯಾದರೂ ಪಕ್ವವಾಗಿರಬಹುದೆಂಬ ಕಲ್ಪನೆಯು ನಿಮ್ಮ ಮನಸ್ಸಿನಲ್ಲಿ ಬಾರದೆ ಇದ್ದದ್ದನ್ನು ಕಂಡು ನನಗೆ ಬಹಳ ಆಶ್ಚರ್ಯವಾಗುತ್ತದೆ. ಎಲಾ, ನಿನ್ನನ್ನು ನೋಡಿದ ಕೂಡಲೆ ನನ್ನ ಮನಸ್ಸಿನಲ್ಲಿ—ನೀನು ಶಿವಾಜಿಯ ಅತ್ಯಂತ ವಿಶ್ವಾಸದೊಳಗಿನವನೊಬ್ಬನಿರಬೇಕೆಂತಲೂ, ಗುಪ್ತಚಾರರ ಕೆಲಸವನ್ನು ಮಾಡಲಿಕ್ಕೆ ಬಂದಿರುವೆಯೆಂತಲೂ ಕಲ್ಪನೆಯು ಬಂದಿತು. ನೀವು ಇನ್ನೂ ಕಚ್ಚಾಸ್ಥಿತಿಯಲ್ಲಿರುವಿರಿ. ನಿಮ್ಮಂತೆ ಕಚ್ಚಾಸ್ಥಿತಿಯಲ್ಲಿರುವವರ ಮುಂದೆ ಮಾತ್ರ ನಮ್ಮ ಕರ್ತೃತ್ವಶಕ್ತಿಯ ಆಟವು ನಡೆಯುವದು. ಒಬ್ಬನು ನಮ್ಮ ಸೈನ್ಯದೊಳಗೆ ಹೊಕ್ಕು ತಾನೇನೋ ಒಳ್ಳೇ ವಿದ್ವಾಂಸಜ್ಯೋತಿಷಿಯೆಂದು ಕಂಡ ಕಂಡವರಿಗೆಲ್ಲ ವರ್ತಮಾನ-ಭೂತ-ಭವಿಷ್ಯತ್ಕಾಲದ ಸಂಗತಿಗಳನ್ನು ಹೇಳುತ್ತ ನಡೆದನು. ಮತ್ತೊಬ್ಬನು ತಾನೇನೋ ಮದ್ರಾಸದ ಕಡೆಯ ಕೊಂಗನಂತೆ ತಾನು ಕಿವುಡನಂತೆ ಮೂಕನಂತೆ ಭಾವಣೆಯಲ್ಲಿ ಹೊಕ್ಕು ಇಲ್ಲದ ಕಾರಭಾರವನ್ನು ಮಾಡುತ್ತ ನಡೆದಿರುವನು. ಇವರಿಗೆ ಇಲ್ಲಿ ತಮ್ಮ ಬೇಳೆ ಎಷ್ಟರ ಮಟ್ಟಿಗೆ ಬೆಂದೀತೆಂಬ ವಿಚಾರವು ಯಾಕೆ ಬಂದಿರಲಿಕ್ಕಿಲ್ಲ? ಏನೂ ಅಡ್ಡಿಯಿಲ್ಲ. ನೀವು ಇಂಥ ಸಾಹಸದ ಕೆಲಸಗಳನ್ನು ಮಾಡುವದೇ ಹೆಚ್ಚು. ನೀವು ಇನ್ನೂ ತರುಣರು. ನಿಮ್ಮಿಂದ ತಪ್ಪಾಗುವದು ಸ್ವಾಭಾವಿಕವು. ಮೇಲಾಗಿ ನೀವು ನಿಮ್ಮ ಸ್ವಾರ್ಥಕ್ಕಾಗಿ ಇಂಥ ಸಾಹಸದ ಕೆಲಸಗಳನ್ನು ಮಾಡುವದಿಲ್ಲ. ವೈದಿಕ ಧರ್ಮದ ರಕ್ಷಣಕ್ಕಾಗಿಯೂ, ಗೋಬ್ರಾಹ್ಮಣರ ಪ್ರತಿಪಾಲನಕ್ಕಾಗಿಯೂ ಮಾಡುತ್ತಿರುವಿರೆಂಬದು ನನಗೆ ಗೊತ್ತಾಗಿಲ್ಲವೆಂದು ಮಾತ್ರ ತಿಳಿಯಬೇಡಿರಿ; ಆದರೆ ನಾನು ನನ್ನ ಕರ್ತವ್ಯವನ್ನು ಮಾಡಲಿಕ್ಕೆ ಬೇಕಲ್ಲವೇ? ತಮ್ಮಾ ಈಗ ನಾನು ನಿನಗೆ ಇಲ್ಲಿಂದ ಹೋಗಗೊಡುವದಿಲ್ಲ. ಯುದ್ಧವು ಮುಗಿಯುವವರೆಗೆ ನೀನು ನಮ್ಮ ಅಧೀನದಲ್ಲಿಯೇ ಇರಬೇಕಾಗುವದು. ಯುದ್ಧವು ಮುಗಿದು ಒಡಂಬಡಿಕೆಯಾಗಿ ಪರಸ್ಪರರು ಪರಸ್ಪರರ ಸೆರೆಯಾಳುಗಳನ್ನು ಬಿಟ್ಟುಬಿಡಬೇಕೆಂದು ನಿರ್ಣಯವಾದಮೇಲೆ ನಿನಗೆ ಬಿಡುಗಡೆಯಾಗುವದು. ಅಲ್ಲಿಯವರೆಗೆ ನೀನು ಇಲ್ಲಿಯೇ ಇರತಕ್ಕದ್ದು. ಏನು ಕಿರಾತಸಿಂಗರೇ, ನಾನು ಮಾಡಿದ್ದು ವಿಹಿತವಾಗಿರುವದಷ್ಟೇ; ಹೀಗೆ ಮಾಡಿದರೆ ನಮ್ಮ ನಿಯಮಗಳು ಶತ್ರುಗಳಿಗೆ

ಗೊತ್ತಾಗಿ ಯುದ್ಧವನ್ನು ಬೇಗನೆ ಮುಗಿಸಲಿಕ್ಕೆ ಅವರೇ ಮುಂದೆ ಬರಬಹುದು. ಈಗ ಈ ಗೃಹಸ್ಥನು ತನ್ನ ಹೆಸರು ದೆಸೆ ಮುಂತಾದ್ದನ್ನು ಹೇಳಲಿಕ್ಕಿಲ್ಲ. ನಾವಾದರೂ ಅಬಗ್ಗೆ ಇವನಿಗೆ ತೊಂದರೆ ಕೊಡುವ ಕಾರಣವಿಲ್ಲ. ಹಾಗೆ ಮಾಡಿದರೆ ಗಾಯದ ಮೇಲೆ ಬರೆಕೊಟ್ಟು ಮತ್ತಿಷ್ಟು ನೋವು ಮಾಡಿದಂತೆ ಆಗುವದು. ಈಗ ನಾವು ಆ ಜೋಯಿಸನನ್ನು ಪ್ರತಿಬಂಧದಲ್ಲಿಟ್ಟಂತೆ ಈತನನ್ನೂ ಇಟ್ಟುಬಿಟ್ಟರಾಯಿತು. ಆ ಜೋಯಿಸನನ್ನು ಕೀರ್ತಿಸಿಂಗನ ವಶದಲ್ಲಿ ಕೊಟ್ಟಿರುವೆವು. ಬೇಕಾದರೆ ನೀವು ಈತನನ್ನು ನಿಮ್ಮ ವಶಕ್ಕೆ ತೆಗೆದುಕೊಳ್ಳಿರಿ.''

ಈ ಮೇರೆಗೆ ಜಯಸಿಂಗನು ಈ ಭಾಷಣವನ್ನು ವಿನೋದದಿಂದಲೂ, ಕುತ್ಸಿತತನದಿಂದಲೂ ಮಾತಾಡಿದನು. ಜಯಸಿಂಗರಾಜನ ಮಾತಿನೊಳಗಿನ ಪ್ರತಿಯೊಂದು ಶಬ್ದವು ಆ ಮದ್ರಾಸೀ ಗೃಹಸ್ಥನ ಹೃದಯದಲ್ಲಿ ಶಲ್ಯದಂತೆ ಚುಚ್ಚುತ್ತಿತ್ತೆಂಬದನ್ನು ಹೇಳಲವಶ್ಯವಿಲ್ಲ. ಆದರೆ ಅವನು ಮಾಡುತ್ತಾನೇನು? ಉಪಾಯವೇನೂ ಇದ್ದಿಲ್ಲ. ಈಗ ಅವನು ಸಂಪೂರ್ಣವಾಗಿ ಜಯಸಿಂಗರಾಜನ ಬಲೆಯಲ್ಲಿ ಸಿಕ್ಕಿಕೊಂಡಿದ್ದನು. ಇದನ್ನೆಲ್ಲ ನೋಡುತ್ತಿದ್ದ ಕಿರಾತಸಿಂಗನಂತು ಆಶ್ಚರ್ಯದಿಂದ ಚಕಿತನಾಗಿ ಆ ಕೊಂಗರವನನ್ನು ನೋಡುತ್ತ ಸುಮ್ಮನೆ ನಿಂತುಬಿಟ್ಟಿದ್ದನು.

ಈ ಕೊಂಗರವನು ಮೋಸಗಾರನಾಗಿರದೆ, ನಿಜವಾಗಿಯೇ ಕಿವುಡನೂ, ಮೂಕನೂ ಆಗಿದ್ದು, ಕೇವಲ ಭಿಕ್ಷೆಯ ನಿಮಿತ್ತವಾಗಿ ಛಾವಣಿಯಲ್ಲಿ ಸೇರಿಕೊಂಡಿರುವನು ಎಂದು ಅವನ ತಿಳುವಳಿಕೆಯಾಗಿತ್ತು. ಮೊದಮೊದಲು ಅವನಿಗಾದರೂ ಈತನು ಗುಪ್ತಚಾರನಿರಬಹುದೆಂಬ ಸಂಶಯವು ತಟ್ಟಿತ್ತು; ಮತ್ತು ಆ ಸಂಶಯದ ಮೂಲಕವಾಗಿಯೇ ಅವನನ್ನು ಹೊಡೆದು ಕೊಂದು ಬಿಡಬೇಕೆಂದು ಅವನು ಆಲೋಚಿಸಿದ್ದನು; ಆದರೆ ಎಷ್ಟು ಮಾತಾಡಿಸಿದರೂ, ಯಾವತರದ ಅಂಜಿಕೆಯನ್ನು ಹಾಕಿದರೂ ಅವನು ಏನೂ ಮಾತಾಡದೆ ಸುಮ್ಮನೆ ಇದ್ದು, ಹುಚ್ಚನಂತೆ ಅತ್ತಿತ್ತ ನೋಡುವದನ್ನು ಕಂಡು ತನ್ನ ಸಂಶಯವು ನಿರರ್ಥಕವಾಗಿರುವದು. ಈತನಿಗೆ ತಾನೇ ಶಿಕ್ಷೆಯನ್ನು ಕೊಡದೆ, ಸೇನಾಪತಿಯ ಮುಂದೆ ಒಯ್ದು ನಿಲ್ಲಿಸಿ ಬಿಡಬೇಕೆಂದು ಅವನು ಯೋಚಿಸಿದನು. ಜಯಸಿಂಗರಾಜರ ಮುಂದೆ ತಂದು ನಿಲ್ಲಿಸಿದ ಮೇಲೆಯೂ ಕೂಡ ಅವನು ನಿರಪರಾಧಿಯೆಂತಲೇ ಅವನಿಗೆ ಕಾಣಿಸಿದನು. ಅದರಿಂದ ಅವನನ್ನು ಕೊಲ್ಲಬೇಕೆಂದು ತಾನು ಮುಂಚೆ ಮಾಡಿದ ಆಲೋಚನೆಗೆ ಮನಸಿನಲ್ಲಿಯೇ ಬಹಳ ಹಳಹಳಿಸಿದನು. ಆ ತರುವಾಯ ಅವನ ಮೋಸವು ಬೈಲಿಗೆ ಬರಲು ಓಹೋ ಈತನು ನನ್ನನ್ನು ಮೋಸಗೊಳಿಸಿದ

ನಲ್ಲವೆ? ಎಂದು ಕಿರಾತಸಿಂಗನ ಮನಸಿಗೆ ಹತ್ತಿತು. ಮತ್ತು ಆ ಮಾನದಿಂದ ಅವನು ಆ ಮನುಷ್ಯನ ಮೇಲೆ ಸಿಟ್ಟಾದನು. ಕೂಡಲೆ ಅವನು ಜಯಸಿಂಗನನ್ನು ಕುರಿತು:—ಛೀ ಛೀ ಇಂಥ ಮನುಷ್ಯರನ್ನು ಸೆರೆಯಲ್ಲಿಡುವದರಲ್ಲಿ ಏನು ಅರ್ಥ ವಿದೆ? ಇಂಥ ಮೋಸಗಾರರನ್ನು ಒಮ್ಮೆಲೆ ಶೂಲಕ್ಕೇರಿಸಬೇಕು. ಅಂದರೆ ಇಂಥ ತಪ್ಪನ್ನು ಮತ್ತೆ ಯಾರೂ ಮಾಡಲಿಕ್ಕಿಲ್ಲ. ತಾವು ಆ ಜೋಯಿ ಸನ ಮೇಲೆಯೂ ಹೀಗೆ ಅಂತಃಕರಣವನ್ನು ತೋರಿಸಿದಿರಿ. ಆದರೆ ನನಗೆ ಅದ ರಿಂದೇನೂ ಪ್ರಯೋಜನವು ಕಾಣುವದಿಲ್ಲ. ನಾನು ಸ್ಪಷ್ಟ ಮಾತಾಡಿದ್ದಕ್ಕೆ ನನ್ನನ್ನು ಕ್ಷಮಿಸುವ ಮೆಹರಬಾನಗಿ ಆಗಬೇಕು. ಈ ಕಳ್ಳರು ನಮ್ಮ ಕಣ್ಣು ತಪ್ಪಿಸಿ ಇಲ್ಲಿಂದ ಓಡಿಹೋದರೆ ಎಷ್ಟು ಘಾತವಾದೀತು? ನಮ್ಮ ಗುಪ್ತ ಸಂಗತಿ ಗಳನ್ನೆಲ್ಲ ಇವರು ಬೈಲಿಗೆ ಹಾಕಿಬಿಟ್ಟಾರು.

"ಛೀ ಛೀ ಹಾಗಲ್ಲ! ನಮ್ಮ ಕಣ್ಣು ತಪ್ಪಿಸಿ ಓಡಿ ಹೋಗಲಿಕ್ಕೆ ಅವರಿಗೆ ಆಸ್ಪದವನ್ನು ಯಾಕೆ ಕೊಡಬೇಕು? ಒಬ್ಬಿಬ್ಬರನ್ನು ಏಕೆ, ಇಂಥ ನೂರಾರು ಸೆರೆಯಾಳುಗಳನ್ನು ಕಾಯಲಿಕ್ಕೆ ನಮಗೆ ಬರಬೇಕು. ಕಿರಾತಸಿಂಗ, ಎಷ್ಟೆಂದ ರೂ ನೀನು ಇನ್ನೂ ಹುಡುಗನು, ನಿನಗೆ ದೂರದೃಷ್ಟಿಯು ಕಡಿಮೆ. (ಅವನ ಕಿವಿಯ ಹತ್ತರ) ನಾವು ಈ ಜನರನ್ನು ಪ್ರೀತಿಯಿಂದ ನಡೆಯಿಸಿಕೊಂಡರೆ, ಹಾಗು ಇವರಿಗೆ ಇನಾಮುಗಳನ್ನೂ ಜಹಾಗೀರುಗಳನ್ನೂ ಕೊಡುತ್ತೇವೆಂದು ಆಶೆಹಚ್ಚಿ ದರೆ, ಇವರು ನಮ್ಮ ಆಧೀನದಲ್ಲಿ ಬರುವರು; ಆ ಬಳಿಕ ಶಿವಾಜಿಯು ಈ ಎಲ್ಲ ಪ್ರಾಂತವನ್ನು ಕೈವಶಮಾಡಿಕೊಳ್ಳಲಿಕ್ಕೆ ನಮಗೆ ನಾಲ್ಕು ದಿನ ಸಹ ಹತ್ತಲಿಕ್ಕಿಲ್ಲ. ಕಿರಾತಸಿಂಗ, ನಾವು ಮುದುಕರು; ಮಾಡುವದನ್ನು ವಿಚಾರಮಾಡಿಯೇ ಮಾಡು ತ್ತಿರುತ್ತೇವೆ. ನಮಗೆ ಬಹುದಿವಸ ಅನುಭವವಿರುತ್ತದೆ. ಆದಕಾರಣ ನಾವು ಯಥಾಯೋಗ್ಯವಾಗಿಯೇ ಮಾಡುತ್ತಿರುವೆವೆಂದು ತಿಳಿದು ನಡೆಯುತ್ತಿರು, ಅಂದರಾಯಿತು.

ಇದಕ್ಕೆ ಕಿರಾತಸಿಂಗನು ಹೆಚ್ಚಿಗೇನೂ ಮಾತಾಡದೆ ವಿಚಾರ ಮಾಡುತ್ತ ಸುಮ್ಮನೆ ಕುಳಿತುಕೊಂಡನು. ಸ್ವಲ್ಪ ಹೊತ್ತಿನ ಮೇಲೆ ಬೇರೆ ವಿಷಯಗಳನ್ನು ಕುರಿತು ನಾಲ್ಕು ಮಾತುಗಳನ್ನು ಆಡಿ ಅವನು ಅಲ್ಲಿಂದ ಹೊರಟು ನಡೆದನು. ಹೋಗುವಾಗ ಅವನ ಮನಸಿನಲ್ಲಿ, ಆ ಕೊಂಗರವನ ವಿಷಯವಾಗಿಯೇ ವಿಚಾ ರವು ನಡೆದಿತ್ತು. ಕಿರಾತಸಿಂಗನು ಯಾವ ತರದ ಮನಸ್ಥಿತಿಯಿಂದ ಇಲ್ಲಿಂದ ಹೊರಟು ಹೋದನೆಂಬದು ಜಯಸಿಂಗನಿಗೆ ಕೂಡಲೆ ತಿಳಿಯಿತು; ಆದರೆ ತರುಣ

ಜನರ ಮನಃಸ್ಥಿತಿಯು ಹೀಗೆಯೇ ಇರತಕ್ಕದೆಂದು ಅವನು ಅದರ ಕಡೆಗೆ ವಿಶೇಷ ಲಕ್ಷ್ಯಕೊಡಲಿಲ್ಲ. ಕಿರಾತಸಿಂಗನು ಹೊರಟು ಹೋದಮೇಲೆ, ಆ ಕೊಂಗರವ ನನ್ನು ಕುರಿತು—ಈವೊತ್ತು ನಿಮ್ಮ ಮನಸಿಗೆ ಬಹಳ ದುಃಖವಾಗಿರಬಹುದು. ಇನ್ನು ನಾಲ್ಕು ದಿವಸಗಳಾದ ಮೇಲೆ ಪರಸ್ಪರ ಭೆಟ್ಟಿಯಾಗೋಣ; ಆ ಹೊತ್ತು ನಿಮ್ಮನ್ನು ಇಲ್ಲಿಗೆ ಕರೆಯಿಸಿಕೊಳ್ಳುವೆನು. ಆ ಬಳಿಕ ಸಮಾಧಾನದಿಂದ ಮಾತಾಡ ತಕ್ಕದ್ದನ್ನು ಮಾತಾಡೋಣ. ಈಗ ನಿಮ್ಮನ್ನು ಒಬ್ಬ ಮನುಷ್ಯನ ವಶಕ್ಕೆ ಕೊಡುವೆನು. ಅವನ ಅಧೀನದೊಳಗೆ ನೀವು ಇರತಕ್ಕದ್ದು. ಇದಕ್ಕಿಂತ ಹೆಚ್ಚಿಗೇನೂ ತೊಂದರೆಯು ನಿಮಗೆ ಆಗಲಿಕ್ಕಿಲ್ಲ.

ಇಷ್ಟಾದ ಬಳಿಕ ಜಯಸಿಂಗರಾಜನು ಯಾವಾಗಲೂ ತನ್ನ ಹತ್ತರವೇ ಇರುವ ತನ್ನ ಕೈಕೆಳಗಿನ ಒಬ್ಬ ಸರದಾರನನ್ನು ಕರೆದು—ಈ ಗೃಹಸ್ಥನ ಸಲು ವಾಗಿ ಪ್ರತ್ಯೇಕವಾಗಿ ಒಂದು ಡೇರೆಯನ್ನು ಹೊಡೆಯತಕ್ಕದ್ದು, ಆ ಡೇರೆಯಲ್ಲಿ ದೊಡ್ಡ ಸರದಾರರಿಗೆ ತಕ್ಕಂತೆ ವ್ಯವಸ್ಥೆಯನ್ನಿಡಬೇಕು. ಅಲ್ಲಿ ಅವನಿಗೆ ಯಾವ ತರದ ಕೊರತೆಯೂ ಬೀಳಬಾರದು. ಆದರೆ ಅವನು ಯಾವ ಕಾರಣದಿಂದಲೂ ಡೇರೆಯ ಹೊರಗೆ ಹೋಗದಂತೆ ಎಚ್ಚರಪಡತಕ್ಕದ್ದು'' ಎಂದು ಅಜ್ಞಾಪಿಸಿದನು.

ಆ ಸರದಾರನು "ಜೀ, ಸರಕಾರ'' ಎಂದು ಹೇಳಿ ಆ ಮನುಷ್ಯನನ್ನು ಕರ ಕೊಂಡು ಹೊರಟುಹೋದನು. ಆ ಬಳಿಕ ಜಯಸಿಂಗರಾಜನು ಇಷ್ಟೊತ್ತಿನವರೆಗೆ ನಡೆದ ಸಂಗತಿಗಳಬಗ್ಗೆ ತನ್ನ ಮನಸಿನಲ್ಲಿಯೇ ಆಲೋಚಿಸುತ್ತ ಕುಳಿತುಕೊಂಡನು.

---

## ೯—ಸ್ವಾಮಿಕಾರ್ಯಸಾಧಕರ ಯುಕ್ತಿಗಳು.

೧೦೦ದಿನ ಪ್ರಕರಣದಲ್ಲಿ ಹೇಳಿದಂತೆ ಆ ವೇಷಧಾರಿಯಾದ ಕೊಂಗನ ವ್ಯವಸ್ಥೆಯು ಮಾಡಲ್ಪಟ್ಟ ಬಳಿಕ ಅವನ ಕೂಡ ಯಾರೂ ಮಾತಾಡಬಾರದೆಂತಲೂ, ತನ್ನ ಅಪ್ಪಣೆಯ ಹೊರತು ಯಾರೂ ಅವನ ಭೆಟ್ಟಿಯನ್ನು ತಕ್ಕೊಳ್ಳಬಾರದೆಂ-ತಲೂ ಜಯಸಿಂಗನು ಕಟ್ಟಪ್ಪಣೆಯನ್ನು ಮಾಡಿದನು. ಈತನು ಶಿವಾಜಿಮಹಾರಾಜರ ಅಂತರಂಗದೊಳಗಿನವನೊಬ್ಬನಿರುವನೆಂದು ಅವನ ಮನವರಿಕೆಯಾಯಿತು; ಆದರೆ ಅವನ ಹೆಸರು ತಿಳಕೊಳ್ಳಬೇಕೆಂದು ಹಲವು ಬಗೆಯಿಂದ ಯತ್ನಮಾಡಿದರೂ ಅದು ಜಯಸಿಂಗರಾಜನಿಗೆ ಸಾಧಿಸಲಿಲ್ಲ. ಒಮ್ಮೆ ಈ ಕೊಂಗನಿಗೂ, ಆ ಜೋಯಿಸನಿಗೂ ಯಾರೂ ಇಲ್ಲದ ಸ್ಥಳದಲ್ಲಿ ಅಕಸ್ಮಾತ್ತಾಗಿ ಭೆಟ್ಟಿಯಾಗುವಂತೆ

ಮಾಡಿದರೆ ಅವರಿಬ್ಬರ ಬಾಯಿಂದ ಪರಸ್ಪರರ ಹೆಸರುಗಳು ಒಂದುವೇಳೆ ಹೊರ ಬೀಳಬಹುದೆಂದು ಅವನು ತರ್ಕಿಸಿದನು. ಆ ಪ್ರಕಾರ ಯೋಜನೆಯನ್ನು ಹೇಗೆ ಮಾಡಬೇಕೆಂದು ಅವನು ಯೋಚಿಸುವಷ್ಟರಲ್ಲಿ ಆ ಕೊಂಗನು—"ನಾನು ತಮಗೆ ಭೆಟ್ಟಿಯಾಗಿ ಕೆಲವು ಸಂಗತಿಗಳನ್ನು ಹೇಳಬೇಕೆಂದು ಮಾಡಿರುವೆನು. ತಮಗೆ ಅನುಕೂಲವಾದ ವೇಳೆಯನ್ನು ಅರುಹಿ ಭೆಟ್ಟಿಯಾಗಲಿಕ್ಕೆ ಅಪ್ಪಣೆಯನ್ನು ದಯಪಾಲಿಸಬೇಕು'' ಎಂದು ಹೇಳಿಕಳಿಸಿದನು. ಅದಕ್ಕೆ ಜಯಸಿಂಗರಾಜನು ಒಂದು ಗಳಿಗೆ ಯೋಚಿಸಿ, "ಒಳ್ಳೇದು, ಭೆಟ್ಟಿಯಾಗಲಿಕ್ಕೇನೂ ಅಡ್ಡಿಯಿಲ್ಲ. ಸಿಂಹಗಡಕೋಟೆಯು ಇಂದೇ ನಮ್ಮ ಕೈವಶವಾದದ್ದರಿಂದಲೂ, ಪುರಂದರ ಕೋಟೆಯು ನಾಲ್ಕಾರುದಿವಸಗಳಲ್ಲಿ ನಮ್ಮ ಅಧೀನವಾಗತಕ್ಕದ್ದಿರುವದರಿಂದಲೂ ಈಗ ನನಗೆ ಸ್ವಲ್ಪ ಸಹ ಅವಕಾಶವಿಲ್ಲ. ಅವಕಾಶ ನೋಡಿ ನಿಮ್ಮನ್ನು ಕರೆ ಕಳುಹುವೆವು'' ಎಂದು ಪ್ರತ್ಯುತ್ತರರೂಪದಿಂದ ಹೇಳಿಕಳಿಸಿದನು.

ಈ ಸುದ್ದಿಯನ್ನು ಕೇಳಿ—ಅದರಲ್ಲಿಯೂ ಕಡೆಯ ಎರಡು ಮಾತುಗಳನ್ನು ಕೇಳಿಯಂತೂ ಆ ಕೊಂಗನ ಮನಸಿನಲ್ಲಿ ಒಂದರಹಿಂದೊಂದರಂತೆ ಅನೇಕ ವಿಚಾರಗಳೂ ವಿಕಾರಗಳೂ ಉದ್‌ಭವಿಸಿದವು. ಎಲಾ, ಇದೇನು ಆಶ್ಚರ್ಯವು!! ಯಾವಕೋಟೆಗಳು ಅಭೇದ್ಯವೆಂದು ನಾವು ನಂಬಿದ್ದೆವೋ, ಅವುಗಳನ್ನೇ ಇವರು ಮೊದಲನೇ ಹೊಡತಕ್ಕೇ ಕೈವಶಮಾಡಿಕೊಂಡರಲ್ಲ! ನಮ್ಮ ಮಹಾರಾಜರ ಪುಣ್ಯವು ತೀರಿರಲಿಕ್ಕಿಲ್ಲವಷ್ಟೆ? ಈ ಜಯಸಿಂಗರಾಜನ ಪುಣ್ಯವು ಒಳ್ಳೇ ಬಲವತ್ತರವಾಗಿದ್ದಂತೆ ತೋರುತ್ತದೆ. ಆಗಲಿ, ಇಷ್ಟರಿಂದಲೇ ತೀರಿತೆ? ಭವಾನಿ ಮಾತೆಯ ಅಂತಃಕರಣವಿದ್ದರೆ ಈ ಜಯಸಿಂಗನಿಗೆ ಚನ್ನಾಗಿ ಕೈತೋರಿಸದೆ ಬಿಡುವದಿಲ್ಲ. ಪ್ರಸಂಗವು ಮಾತ್ರ ಒಳ್ಳೇ ಕಠಿಣವಿರುವದು. ಹಂಚಿಕೆಮಾಡಲಿಕ್ಕೆ ಬೇಕು ಎಂದು ಆಲೋಚಿಸಹತ್ತಿದನು.

ಇತ್ತ ಜಯಸಿಂಗನು ಆ ಹೊತ್ತಿನ ದಿವಸವನ್ನು ಬಿಟ್ಟು ಮರುದಿವಸ ಮುಂಜಾನೆ ತನ್ನ ಡೇರೆಯಿಂದ ಹೊರಟು, ಕೊಂಗರವನ ಡೇರೆಗೆ ತಾನಾಗಿಯೇ ಬಂದು—"ನೀವು ನನಗೆ ಹೇಳಿಕಳಿಸಿದ ಮೇರೆಗೆ ನಿಮ್ಮನ್ನು ನಾನು ನಮ್ಮ ಡೇರೆಗೆ ಕರೆಯಿಸಿಕೊಳ್ಳತಕ್ಕವನಿದ್ದೆನು; ಆದರೆ ನೀವು ನನಗೆ ಹೇಳತಕ್ಕ ಸಂಗತಿಗಳು ಗುಪ್ತವಾಗಿರಬಹುದು. ನಾನೊಬ್ಬನೇ ಇದ್ದಾಗ ಆ ಮಾತುಗಳನ್ನು ಆಡುವದು ಒಳ್ಳೇದೆಂದು ತಿಳಿದು ನಾನಾಗಿಯೇ ನಿಮ್ಮ ಕಡೆಗೆ ಬಂದೆನು. ಈಗ ನೀವು ನಿಮ್ಮ ಮನಸಿನಲ್ಲಿದ್ದದ್ದನ್ನು ನಿರ್ಭೀತಿಯಿಂದ ಹೇಳಿರಿ'' ಎಂದು ಅಂದನು. ಅದಕ್ಕೆ

ಆ ಕೊಂಗನು ಸ್ವಲ್ಪಹೊತ್ತಿನವರೆಗೆ ಏನೂ ಮಾತಾಡದೆ ಸುಮ್ಮನಿದ್ದು ಆ ಬಳಿಕ--"ರಾಜಾಸಾಹೇಬರೆ, ನಾನು ಮನಸಿನಲ್ಲಿ ಒಂದು ಉದ್ದೇಶವನ್ನಿಟ್ಟುಕೊಂಡು, ಯಾವಸಂಗತಿಯನ್ನು ತಮಗೆ ಹೇಳಬೇಕೆಂದು ಆಲೋಚನೆ ಮಾಡಿದ್ದೆನೋ ಅದನ್ನು ಹೇಳಲಿಕ್ಕೆ ಈಗ ನನ್ನ ಮನಸ್ಸು ಒಡಂಬಡಲೊಲ್ಲದು; ಈ ದೇಹವು ಶಿವಾಜಿಮಹಾರಾಜರ ಅನ್ನದಿಂದಲೇ ಬೆಳೆದಿರುವದು; ಅವರು ಕೈಹಿಡಿದಿದ್ದರಿಂದಲೇ ನಾವು ಮುಂದಕ್ಕೆ ಬಂದಿರುವೆವು. ಹೀಗಿದ್ದು ಈ ಪ್ರಸಂಗದಲ್ಲಿ ಅವರ ಮೇಲೆಯೇ ತಿರುಗಿಬೀಳುವದು ಸರಿಯಲ್ಲ. ಏನೋ ಒಂದು ಕ್ಷಣಹೊತ್ತು ನನ್ನ ಮನಸಿನಲ್ಲಿ ಆ ಪಾಪವಿಚಾರಗಳು ಬಂದಿದ್ದವು. ಈಗ ನನ್ನ ಮನಸು ತಿರುಗಿತು. ತಮಗೆ ನಿಷ್ಕಾರಣವಾಗಿ ಶ್ರಮಕೊಟ್ಟದ್ದಕ್ಕಾಗಿ ನನ್ನನ್ನು ಕ್ಷಮಿಸಿರಿ. ಇನ್ನು ತಾವು"........

"ಓಹೋ! ಬೇಡ ಬೇಡ!! ನಿಮ್ಮ ಮನಸಿನೊಳಗಿನ ಉದ್ದೇಶವನ್ನು ನನ್ನ ಮುಂದೆ ಹೇಳಬೇಡಿರಿ. ನೀವು ಹೇಳಿ ಕಳಿಸಿದ ಕೂಡಲೆ ನಾನಾಗಿಯೇ ಇಲ್ಲಿಯತನಕ ಹೊರಟು ಬಂದ ಉದ್ದೇಶವು ಬೇರೆಯೇ ಇರುವದು. ನಿಮ್ಮ ಮುಖಾಂತರವಾಗಿ ಶಿವಾಜಿಯ ಸಂಗಡ ಸಾಮೋಪಚಾರದಿಂದ ಮಾತು-ಕಥೆಗಳಾಗಿ ಒಡಂಬಡಿಕೆಯಾಗುತ್ತಿದ್ದರೆ, ಮಾಡಿಕೊಂಡು ಬಿಡಬೇಕು. ನಿಷ್ಕಾರಣವಾಗಿ ಅರ್ಥಹಾನಿ-ಪ್ರಾಣಹಾನಿಗಳನ್ನು ಮಾಡಬಾರದು ಈ ಯುದ್ಧ ಪ್ರಸಂಗದಲ್ಲಿ ಜಯವಂತು ನಮ್ಮ ಪಾಲಿಗೆ ಕಟ್ಟಿಟ್ಟದ್ದೇ; ಇದರಲ್ಲೇನೂ ಸಂಶಯವಿಲ್ಲ. ಆದರೆ ಬಾದಶಹನ ಸೈನ್ಯಕ್ಕೂ-ಬೊಕ್ಕಸಕ್ಕೂ, ನಿಮ್ಮ ಸೈನ್ಯಕ್ಕೂ-ಬೊಕ್ಕಸಕ್ಕೂ ಇರತಕ್ಕ ಅಭ್ಯಂತರವನ್ನು ತಿಳಿದು ನಿಮಗೆ ಎಷ್ಟರಮಟ್ಟಿಗೆ ಯಶವು ದೊರಕೀತೆಂಬದನ್ನು ವಿಚಾರಮಾಡಿ, ನೀವು ಈ ಕಾಲಕ್ಕೆ ಹಿಂದಕ್ಕೆ ಸರಿದರೆ ಉಭಯ ಪಕ್ಷಕ್ಕೂ ಒಳಿತಾಗುವದು. ನಿಮ್ಮ ಶಿವಾಜಿ ರಾಜರಿಗೆ ಈ ಪ್ರಾಂತದ ಸುಭೇದಾರಿಯನ್ನು ಕೊಡಬೇಕೆಂದು ಬಾದಶಹನಿಗೆ ಚೆನ್ನಾಗಿ ಹೇಳಿದರೆ, ಅವನು ಅದರಂತೆ ಮಾಡುವನು; ಮತ್ತು ತನ್ನ ಜನಗನ್ನು ಹಿಂದಕ್ಕೆ ಕರೆಯಿಸಿಕೊಳ್ಳುವನು. ಆದರೆ ಈ ಎಲ್ಲ ಕೆಲಸಗಳನ್ನು ಒಳ್ಳೇ ಯುಕ್ತಿಯಿಂದಲೂ, ಸಾಮೋಪಚಾರದಿಂದಲೂ ಮಾಡಬೇಕಾಗಿದೆ. ನೀವೇನಾದರೂ ಇದರಲ್ಲಿ ಮನಸು ಹಾಕಿ ಪ್ರಯತ್ನ ಮಾಡುತ್ತಿದ್ದರೆ, ಹೇಳಿರಿ. ಸಾವಿರಾರು ಜನರು ನಿಮ್ಮ ಉಪಕಾರವನ್ನು ನೆನಿಸುವರು. ನನ್ನ ಈ ಮಾತಿಗೆ ನಿಮ್ಮ ಜನರು—ಯುದ್ಧದ ಸಿದ್ಧತೆಯು ಚೆನ್ನಾಗಿಲ್ಲದ ಮೂಲಕವಾಗಿಯೇ ಜಯಸಿಂಗನು ಒಡಂಬಡಿಕೆಯ ಸಂಧಾನವನ್ನು ಹಚ್ಚಿರುವನೆಂದು

ಅನ್ನಬಹುದು. ಆದರೆ ಹಾಗೆ ಮಾತ್ರ ತಿಳಿಯಬೇಡಿರಿ. ನೀವು ಬೇಕಾದಹಾಗೆ ಮಾತಾಡಿರಿ; ನಾನು ಕೈಕೊಂಡ ಕಾರ್ಯವನ್ನು ನನ್ನ ಮನಸಿನಲ್ಲಿ ಆಲೋಚನೆ ಮಾಡಿಟ್ಟುಕೊಂಡ ಮೇರೆಗೆ ನೆರವೇರಿಸದೆ ಎಂದೂ ಬಿಡುವದಿಲ್ಲ; ಸಾಮೋಪಾಯದಿಂದ ಒಡಂಬಡಿಕೆಯಾದರೆ ಆಗಲಿ; ಇಲ್ಲದಿದ್ದರೆ ದಂಡೋಪಾಯವು ಸಿದ್ಧವೇ ಇರುವದು.

ಜಯಸಿಂಗನ ಆತ್ಮಪೌರುಷದ ಮಾತನ್ನು ಕೇಳಿ, ಆ ವೇಷಧಾರಿಯಾದ ಗೃಹಸ್ಥನಿಗೆ ಅತಿಶಯ ಸಂತಾಪವಾಯಿತು. ಆದರೂ ಅವನು ಸಮಾಧಾನತಾಳಿ ನೀವು ಅನ್ನುವ ಮಾತು ನಿಜವು. ಈ ಬಗ್ಗೆ ನನಗೇನೂ ಸಂಶಯವಿಲ್ಲ. ನಾನು ಗುಪ್ತಚಾರನಾಗಿ ನಿಮ್ಮ ಸೈನ್ಯವನ್ನು ಹೊಕ್ಕು ನೋಡತಕ್ಕದ್ದನ್ನೆಲ್ಲ ನೋಡಿದೆನು. ನಿಮ್ಮ ದಂಡಿನ ವ್ಯವಸ್ಥೆಯನ್ನೂ, ಶಿಸ್ತನ್ನೂ ತಿಳಕೊಂಡೆನು. ಆದರಿಂದ ಇಂದಿನ ವರೆಗೆ ಆಗಿಹೋದ ಪ್ರಸಂಗಗಳಂತೆ ಈಗಿನ ಪ್ರಸಂಗವು ಇಲ್ಲೆಂದು ಮನಗಂಡಿರುವೆನು.! ಆದರೆ ಮಹಾರಾಜರು ಬಹಳ ದೃಢನಿಶ್ಚಯದವರು; ಯಾರು ಹೇಳಿದರೂ ಕೇಳುವವರಲ್ಲ. ಅವರ ಈ ತರದ ಸ್ವಭಾವದಿಂದ ನನಗಾದರೂ ತೊಂದರೆಯೆನಿಸುವದು; ಸಿಟ್ಟು ಬರುವದು. ಆದರೆ ಮಾಡತಕ್ಕದ್ದೇನು? ಸ್ವಾಮಿಭಕ್ತಿಯ ಮೂಲಕವಾಗಿ ನಾವು ಅದನ್ನೆಲ್ಲ ತಾಳಿಕೊಂಡು ಅವರನ್ನು ಹೊಂದಿಕೊಂಡೇ ಇರುವೆವು. ಮೇಲಾಗಿ ಅವರಾದರೂ ಇಂಥ ಕೆಲಸಗಳನ್ನು ನಮ್ಮ ಉದ್ಧಾರದ ಸಲುವಾಗಿಯೇ ಮಾಡುತ್ತಿರುವರಲ್ಲವೆ? ಇದೆಲ್ಲ ನಿಜವು; ಆದರೆ ಸದ್ಯಕ್ಕೆ ನಮ್ಮ ಮಹಾರಾಜರು ದಿಲ್ಲೀಬಾದಶಹನ ವಿರುದ್ಧವಾಗಿ ನಿಂತರೆ, ನಾವು ಕೈಕೊಂಡ ಕಾರ್ಯದಲ್ಲಿ ನಮ್ಮ ಪಾಲಿಗೆ ಯಶದೊರೆಯದೆ, ನಾವೇ ಪೂರ್ಣವಾಗಿ ನಷ್ಟವಾಗಬಹುದೆಂಬ ಸಂಗತಿಯು ನನಗೆ ತಿಳಿದಿರುತ್ತದೆ. ಇದಕ್ಕೆ ಬದಲಾಗಿ ನಾವು ಬಾದಶಹನಿಗೆ ಶರಣುಹೋಗಿ, ತಮ್ಮ ಧೋರಣದ ಪ್ರಕಾರ ನಡೆದರೆ ಮಾತ್ರ ನಮ್ಮ ಕಲ್ಯಾಣವಾಗುವದು. ಸ್ವರಾಜ್ಯಸ್ಥಾಪನೆಯ ಕಾರ್ಯವೂ ಕೈಗೂಡುವದು.

ಹೀಗೆ ಆ ಗೃಹಸ್ಥನು ಮಾತಾಡುತ್ತಿರುವಾಗ ಜಯಸಿಂಗನು ಆಶ್ಚರ್ಯದಿಂದ ಚಕಿತನಾಗಿ ಆ ಉದ್ಗಾರಗಳನ್ನು ಕೇಳುತ್ತಿದ್ದನು. ಈ ಮಾತುಗಳನ್ನು ಈ ಗೃಹಸ್ಥನು ಅಂತಃಕರಣಪೂರ್ವಕವಾಗಿ ಮಾತಾಡುತ್ತಿರುವನೋ ಅಥವಾ ತೋರಿಕೆಯ ಮಟ್ಟಿಗೆ ಮಾತಾಡುತ್ತಿರುವನೋ ಎಂಬದನ್ನು ಜಯಸಿಂಗನು ತನ್ನ ಮನಸಿನಲ್ಲಿ ಆಲೋಚನೆಮಾಡುತ್ತಿದ್ದನು. ಇಲ್ಲಿಯವರೆಗೆ ಆ ಗೃಹಸ್ಥನ ವಿಷಯದಲ್ಲಿ ತನಗೆ

ಬಂದ ಅನುಭವದಿಂದ ಈತನು ಸಾಮಾನ್ಯ ಮನುಷ್ಯನಲ್ಲ. ಶಿವಾಜಿಯ ರಹಸ್ಯದೊಳಗಿನವರಲ್ಲಿ ಒಬ್ಬನಾಗಿರುವನು; ಎಂಬ ಸಂಶಯವು ಅವನಿಗೆ ಬಂದಿತ್ತು. ಆದರೆ ಈಗ ಅಕಸ್ಮಾತ್ತಾಗಿ ಆ ಗೃಹಸ್ಥನ ಬಾಯಿಂದ ಹೊರಡುವ ಉದ್ಗಾರಗಳನ್ನು ಕೇಳಿ, ಜಯಸಿಂಗನಿಗೆ ಬಹಳ ಆಶ್ಚರ್ಯವೆನಿಸಿತು. ಈತನು ನನ್ನನ್ನು ಮೋಸಗೊಳಿಸುವ ಉದ್ದೇಶದಿಂದ ಹೀಗೆ ಮಾತಾಡುತ್ತಿರಬಹುದೆಂಬ ವಿಚಾರವು ಅವನಲ್ಲಿ ಬಂದಿತು. ಆದರೂ ಅವನು ಒಳ್ಳೇಧೂರ್ತನು; ತನ್ನ ಮನಸಿನಲ್ಲಿ ಬಂದದ್ದನ್ನು ಹೊರಗೆ ತೋರಗೊಡದೆ ಇನ್ನೂ ಏನೇನು ಉದ್ಗಾರಗಳು ಅವನ ಬಾಯಿಂದ ಹೊರಡುತ್ತವೆಯೋ ಕೇಳಬೇಕೆಂಬ ನಿಶ್ಚಯದಿಂದ:—"ನಮ್ಮಂತೆ ನಿಮಗಾದರೂ ಬಾದಶಹನಿಗೆ ಅನುಕೂಲವಾಗಿ ನಡೆಯುವದು ಯೋಗ್ಯವಾಗಿ ತೋರುವದಷ್ಟೇ? ಸೈ! ಸೈ!! ಅರ್ಧಕೆಲಸವಾಯಿತು! ಶಿವಾಜಿಯು ನಿಮ್ಮ ಅಭಿಪ್ರಾಯದ ಹೊರಗೆಲ್ಲಿರುವನು?"

"ಹೀಗೆ ಮಾತ್ರ ತಿಳಿಯಬೇಡಿರಿ; ನಾವು ಹೇಳುವ ಎಲ್ಲ ಮಾತುಗಳನ್ನು ಮಹಾರಾಜರು ಕೇಳುತ್ತಾರೆಂಬ ನಿಯಮವಿಲ್ಲ. ಕೇಳತಕ್ಕ ಮಾತುಗಳನ್ನಷ್ಟೇ ಕೇಳುವರು. ಇಲ್ಲದಿದ್ದರೆ:—"ನಾನು ಹೇಳಿದಂತೆ ನಡೆಯತಕ್ಕದ್ದು" ಎಂದು ಖಂಡಿತವಾಗಿ ಹೇಳಿಬಿಡುವರು. ನಾನಂತು ಅವರ ಸೇವೆಗೆ ಬೇಸತ್ತು ಹೋಗಿರುವೆನು. ಜೀವದ ಪರಿವೆಯಿಲ್ಲದೆ, ಇಷ್ಟು ದುಡಿದರೂ ನಮಗೆ ಅವರಿಂದ ಸಿಗತಕ್ಕದ್ದಾದರೂ ಏನು? ಅವರು ಇಂದಿನವರೆಗೆ ಒಂದು ಮಾರು ಭೂಮಿಯನ್ನು ಸಹ ಯಾರಿಗೂ ಇನಾಮಾಗಿ ಕೊಟ್ಟಿರುವದಿಲ್ಲ. ಸುಮ್ಮನೆ ದುಡಿದು ದುಡಿದು ಸಾಯಬೇಕು. ನಾನು ಅವರ ಸೇವೆಯನ್ನು ಬಿಟ್ಟುಕೊಟ್ಟು, ತಮ್ಮ ಸೇವೆಯನ್ನು ಮಾಡಬೇಕೆಂದು ಇಚ್ಛಿಸಿರುವೆನು. ನಿಮ್ಮ ಸೈನ್ಯದಲ್ಲಿ ಏನಾದರೂ ಪೌರುಷವನ್ನು ಮಾಡಿ ತೋರಿಸಿದರೆ, ತಾವು ದೊಡ್ಡ ಅಧಿಕಾರವನ್ನು ಕೊಡಿಸುವಿರಿ. ಅದರಿಂದ ಜಗತ್ತಿನಲ್ಲಿ ನಮ್ಮ ಕೀರ್ತಿಯಾಗುವದು. ಇಲ್ಲಿ ನಮ್ಮ ಪಾಲಿಗೆ ಕೀರ್ತಿಯೂ ಇಲ್ಲ, ವೈಭವವೂ ಇಲ್ಲ. ಕೇವಲ ಧರ್ಮಾಭಿಮಾನದ ಮರುಳತನದಿಂದ ಈ ತರದ ಸಾಹಸದ ಕೆಲಸಗಳನ್ನು ಮಾಡುತ್ತಿರುವೆವು. ಆದರೆ ಈಗ ನಿಮ್ಮ ಈ ವೈಭವವನ್ನು ನೋಡಿ, ನಾನಾದರೂ ಬಾದಶಹನ ಸೇವೆಯನ್ನು ಮಾಡುತ್ತ ನಿಮ್ಮಂತೆ ನಮ್ಮ ಧರ್ಮೋದ್ಧಾರದ ಕಾರ್ಯವನ್ನು ಮಾಡಬಹುದೆಂದು ನನ್ನ ಮನಸ್ಸಿಗೆ ಅನಿಸುತ್ತಿರುವದು. ತಮಗೆ ಹಿಂದೂಧರ್ಮದ ಅಭಿಮಾನವು ಇರುವದಿಲ್ಲವೆ? ಬಾದಶಹನ ಪ್ರೇಮ ಸಂಪಾದಿಸುವಾಗ ಸ್ವಧರ್ಮತ್ಯಾಗ

ವನ್ನು ಮಾಡುವ ಪ್ರಸಂಗವು ನಿಮಗೆಲ್ಲಿ ಬಂದಿರುವದು? ನೀವು ಈ ಎರಡೂ ಕಾರ್ಯಗಳನ್ನು ಸರಿಯಾಗಿ ಮಾಡುತ್ತಿರುವಂತೆ ನನಗಾದರೂ ಹಾಗೆ ಮಾಡಲಿಕ್ಕಾಗಬಹುದು. ತಾವು ದಯವಿಟ್ಟು ಆಶ್ರಯಕೊಟ್ಟರೆ ತಮ್ಮ ಮುಖಾಂತರವಾಗಿ ಬಾದಶಹನ ಸೇವೆಯನ್ನು ಮಾಡಿಕೊಂಡು ಸುಖವಾಗಿರುವೆನು. ತಾವು ಆಶ್ರಯವನ್ನು ಕೊಡದಿದ್ದರೆ, ಇಲ್ಲಿಂದ ಬಿಡುಗಡೆಯಾದ ಬಳಿಕ ನಾನು ಪುನಃ ಶಿವಾಜಿ ಮಹಾರಾಜರ ಕಡೆಗೆ ಹೋಗದೆ, ಕಾಶಿ, ಪ್ರಯಾಗ, ಹರಿದ್ವಾರ ಮುಂತಾದ ತೀರ್ಥಕ್ಷೇತ್ರಗಳಿಗೆ ಹೊರಟುಹೋಗುತ್ತೇನೆ. ಈವೊತ್ತಿನ ವರೆಗೆ ಮಹಾರಾಜರ ಸೇವೆಯನ್ನು ಒಂದೇ ಮನಸಿನಿಂದ ಮಾಡಿದೆನು. ಈಗ ನನ್ನಲ್ಲಿ ವಿಕಲ್ಪವು ಹುಟ್ಟಿದ್ದರಿಂದ ಇನ್ನು ಮುಂದೆ ಮುಂಚಿನಂತೆ ಪರಸ್ಪರ ಐಕ್ಯಭಾವವು ಉಳಿಯಲಾರದು. ನಾನನ್ನುವ ಮಾತು ಸಟಿಯೋ, ದಿಟವೋ ನೀವೇ ತಿಳಿದು ನೋಡಿರಿ. ನೀವು ನನ್ನನ್ನು ಸೇವೆಗಾಗಿ ಅಂಗೀಕರಿಸಿದರೆ ನಾನು ಮೂರು ಕರಾರುಗಳನ್ನು ನಿರ್ವೊಡನೆ ಮಾಡಿಕೊಳ್ಳುವೆನು. ತಾವು ಆ ಕರಾರುಗಳಿಗೆ ಒಡಂಬಟ್ಟರೇ ಮಾತ್ರ ನಾನು ತಮ್ಮ ಸೇವೆಯನ್ನು ಏಕನಿಷ್ಠೆಯಿಂದ ಮಾಡುವೆನು. ನನಗೆ ಆಶ್ರಯಕೊಡುವ ಮನಸ್ಸಿದ್ದರೆ, ಅಪ್ಪಣೆಕೊಡಬೇಕು. ಅಂದರೆ ನಾನು ನನ್ನ ಕರಾರುಗಳನ್ನು ಹೇಳುವೆನು.

ಈ ಮಾತುಗಳನ್ನು ಆಡುತ್ತಿರುವಾಗಲೂ ಜಯಸಿಂಗರಾಜನು ಒಳ್ಳೇ ಸೂಕ್ಷ್ಮದೃಷ್ಟಿಯಿಂದ ಆ ಗೃಹಸ್ಥನ ಮುಖಮುದ್ರೆಯನ್ನು ಅವಲೋಕನ ಮಾಡುತ್ತಿದ್ದನು. ಈ ತರದ ಅವಲೋಕನದಿಂದ ಅವನು ಆ ಗೃಹಸ್ಥನ ಹೃದ್ಗತವನ್ನೇ ಶೋಧಿಸುತ್ತಿದ್ದನೆಂದು ಹೇಳಬಹುದು; ಆದರೆ ಅವನ ಈ ಅಂತರ್ಭೇದೀದೃಷ್ಟಿಯಿಂದ ಅವನಿಗೆ ಏನಾದರೂ ಲಾಭವಾಯಿತೋ ಇಲ್ಲವೋ ಎಂಬದನ್ನು ಹೇಳಲಿಕ್ಕಾಗದು. ಕಡೆಗೆ ಅವನು ಆ ಗೃಹಸ್ಥನನ್ನು ಕುರಿತು—"ಒಳ್ಳೇದು, ನಿಮ್ಮ ಕರಾರುಗಳಾದರೂ ಏನಿರುವವು? ಅವು ನಮಗೆ ಒಮ್ಮೆ ತಿಳಿಯಲಿ. ಆ ಬಳಿಕ ಮಾತಾಡತಕ್ಕದ್ದನ್ನು ಮಾತಾಡೋಣ. ನೀವು ಹೇಗಾದರೂ ನಮ್ಮ ಸೆರೆಯಲ್ಲಿ ಸಿಕ್ಕಿರುವಿರಿ. ನಾವು ನಿಮ್ಮ ಕರಾರುಗಳಿಗೆ ಒಪ್ಪಿದರೂ ಅಷ್ಟೇ, ಒಪ್ಪದಿದ್ದರೂ ಅಷ್ಟೆ." ಎಂದು ಅಂದನು.

ಜಯಸಿಂಗನು ಆಡಿದ ಕಡೆಯ ಮಾತಿನ ಕಡೆಗೆ ಆ ಗೃಹಸ್ಥನು ದುರ್ಲಕ್ಷ್ಯ ಮಾಡಿ,—ಸದ್ಯಕ್ಕೆ ನಡೆದ ಯುದ್ಧದಲ್ಲಿ ಉಪಯೋಗಿಸುವ ಮಾಹಿತಿಯನ್ನು ತಾವು ನನಗೆ ಕೇಳಬಾರದು; ಮತ್ತು ನಾನು ಅಂಥ ಮಾಹಿತಿಯನ್ನು ತಮಗೆ

ಎಂದೂ ಹೇಳಲಾರೆನು. ಇದು ನನ್ನ ಮೊದಲನೇ ಕರಾರು ಇರುತ್ತದೆ. ಶಿವಾಜಿ ಮಹಾರಾಜರನ್ನು ನಾನು ಬಿಟ್ಟುಬಂದಾಗ್ಯೂ ಅವರ ವಿಶ್ವಾಸಘಾತವನ್ನು ಮಾಡ ಲಾರೆನು; ಮತ್ತು ನಮ್ಮ ಜನರ ಮೇಲೆ ನಾನು ಎಂದೂ ಶಸ್ತ್ರವನ್ನು ಎತ್ತಲಿಕ್ಕಿಲ್ಲ. ಇದು ನನ್ನ ಎರಡನೇ ಕರಾರು; ತಾವು ಉತ್ತರದಿಕ್ಕಿಗೆ ಸ್ವಾರೀಮಾಡಿದಾಗ ಇಲ್ಲವೆ ವಿಜಾಪುರದವರಕೂಡ ಯುದ್ಧ ಹೂಡಿದಾಗ ಮಾತ್ರ ನಾನು ನನ್ನ ಶೌರ್ಯವನ್ನು ತೋರಿಸುವೆನು; ಮತ್ತು ನಿಮ್ಮ ಸ್ವಂತಶರೀರದ ಸಂರಕ್ಷಣೆಯನ್ನು ಮಾಡುವೆನಲ್ಲದೆ ಬೇರೆ ಜನರ ಸೇವೆಯನ್ನು ಮಾಡಲಿಕ್ಕಿಲ್ಲ; ಇದು ನನ್ನ ೩ನೇ ಕರಾರು; ಈ ಮೂರು ಕರಾರುಗಳು ನಿಮಗೆ ಸಮ್ಮತವಿದ್ದರೆ, ನನ್ನನ್ನು ನಿಮ್ಮ ಆಶ್ರಯದಲ್ಲಿಟ್ಟುಕೊಳ್ಳಿರಿ. ಇಲ್ಲದಿದ್ದರೆ ನಿಮ್ಮ ಇಷ್ಟೆಯ ಪ್ರಕಾರ ಮಾಡಿರಿ. ಇದಕ್ಕೂ ಹೆಚ್ಚಿಗೆ ತಮಗೇನೂ ಹೇಳತಕ್ಕದ್ದಿರುವದಿಲ್ಲ.

ಈ ಮಾತುಗಳನ್ನಾಡುವಕಾಲಕ್ಕೂ ಜಯಸಿಂಗನು ಅವನನ್ನು ಒಳ್ಳೇ ಮರ್ಮಭೇದಕದೃಷ್ಟಿಯಿಂದ ನೋಡುತ್ತಿದ್ದನು. ಕಡೆಗೆ ಅವನು:—"ನೀವು ನನ್ನ ಶರೀರಸಂರಕ್ಷಣದ ಕಾರ್ಯವನ್ನು ಮಾಡಲಿಕ್ಕೆ ಮಾತ್ರ ಒಪ್ಪಿಕೊಳ್ಳುವಿರಿ; ಆದರೆ ಈ ಕೆಲಸವನ್ನು ಮಾಡಲಿಕ್ಕೆ ನಮ್ಮಷ್ಟಕ್ಕೆ ನಾವು ಸಮರ್ಥರಿರುತ್ತೇವೆ. ಈ ಕೆಲಸವನ್ನು ನಿಮಗೆ ಏತಕ್ಕೆ ಹೇಳಬೇಕು? ಮತ್ತು ಈ ಒಗೆಯ ನೌಕರಿಯಿಂದ ನಿಮಗಾದರೂ ಪ್ರಯೋಜನವೇನಾಗುವದು? ಪ್ರಸ್ತುತ ಯುದ್ಧ ಪ್ರಸಂಗದಲ್ಲಿ ಪ್ರತ್ಯಕ್ಷವಾಗಿಯಾಗಲಿ, ಅಪ್ರತ್ಯಕ್ಷವಾಗಿಯಾಗಲಿ, ಸಹಾಯಮಾಡಿದರೆ ಮಾತ್ರ ನಿಮಗೆ ಇನಾಮು ಸಿಗಬಹುದು; ಜಹಾಗೀರು ದೊರೆಯಬಹುದು; ಬಾದಶಹನ ದರಬಾರದಲ್ಲಿ ದೊಡ್ಡ ಅಧಿಕಾರವನ್ನಾಗಲಿ, ಪದವಿಯನ್ನಾಗಲಿ ಕೊಡಿಸಬಹುದು. ಆದರೆ ಬರೇ ನನ್ನ ಶರೀರಸಂರಕ್ಷಣದ ಕಾರ್ಯವನ್ನು ಮಾಡಿದ್ದಕ್ಕೆ ನಿಮಗೇನು ಸಿಗುವದು? ಏನು ಕೊಡಲಿಕ್ಕೆ ಶಕ್ಯವಿರುವದು?" ಎಂದು ಕೇಳಿದನು.

ಗೃಹಸ್ಥ—"ನಿಮ್ಮ ಹೇಳಿಕೆಯಂತೆ ಸಹಾಯಮಾಡುವದೆಂದರೆ ಮಹಾರಾಜರ ವಿಶ್ವಾಸಘಾತ ಮಾಡಿದಂತೆಯೇ ಎಂದು ನಾನು ತಿಳಿಯುತ್ತೇನೆ. ಇಂಥ ಕೆಲಸವನ್ನು ಎಂದೂ ಮಾಡಲಾರೆನು. ಇದಕ್ಕಾಗಿ ತಾವು ನನ್ನನ್ನು ಕಾರಾಗೃಹದಲ್ಲಿ ಜೀವದಿಂದ ಇರುವ ವರೆಗೂ ಕೊಳೆಹಾಕಿದರೂ ಅಡ್ಡಿಯಿಲ್ಲ."

ಈ ಮಾತನ್ನು ಆ ಗೃಹಸ್ಥನು ಒಳ್ಳೇ ನಿಶ್ಚಯದ ಸ್ವರದಿಂದ ಆಡಿದನು. ಆದರೆ ಜಯಸಿಂಗರಾಜನು ಆ ಮಾತಿನ ಕಡೆಗೆ ದುರ್ಲಕ್ಷ್ಯ ಮಾಡಿ ನಕ್ಕು— ಹಾ, ಹಾ, ತಿಳಿಯಿತು! ಕೆಲವು ಕರಾರುಗಳ ಪ್ರಕಾರ ನಿಮ್ಮ ಒಡೆಯನ ಕೂಡ

ಅಪ್ರಾಮಾಣಿಕತನದಿಂದ ನಡೆಯಲಿಕ್ಕೆ ನೀವು ಒಡಂಬಡುತ್ತೀರೆಂಬಂತಾಯಿತು.'' ಎಂದು ಅಂದನು.

ಅದಕ್ಕೆ ಆ ಗೃಹಸ್ಥನು—ಈ ಕರಾರುಗಳಂತೆ ನಡೆದರೆ ಅಪ್ರಾಮಾಣಿಕತನವಾಗುವದೇ? ಅದು ಹೇಗೆ? ಅವರ ಗುಪ್ತಸಂಗತಿಗಳನ್ನು ನಿಮಗೆ ಹೇಳಿದರೆ, ಅಥವಾ ಗುಪ್ತಮಾರ್ಗಗಳನ್ನು ತೋರಿಸಿಕೊಟ್ಟರೆ, ನಾನು ವಿಶ್ವಾಸಘಾತ ಮಾಡಿದಂತಾಗುವದು, ಆ ತರದ ವಿಶ್ವಾಸಘಾತವಾಗಬಾರದೆಂತಲೇ ನಾನು ಸ್ಪಷ್ಟವಾಗಿ ಕರಾರುಗಳನ್ನು ಮಾಡಿಕೊಂಡಿರುವೆನು. ಸದ್ಯಕ್ಕೆ ನನ್ನ ಮನಸಿನಲ್ಲಿ ನಿಮ್ಮ ಮುಖಾಂತರವಾಗಿ ಬಾದಶಹನ ಸೇವೆಯನ್ನು ಮಾಡಿ ದೊಡ್ಡ ಅಧಿಕಾರವನ್ನಾಗಲಿ, ಜಹಗೀರನ್ನಾಗಲಿ ಸಂಪಾದಿಸಬೇಕೆಂದು ಅದೆ. ಇಷ್ಟು ದಿವಸಗಳವರೆಗೆ ಶಿವಾಜಿಮಹಾರಾಜರ ಸೇವೆಯನ್ನು ಮಾಡುವಾಗ ತಿಳಿದ ಸಂಗತಿಗಳಲ್ಲಿ ಒಂದು ಚಕಾರ ಶಬ್ದವನ್ನೂ ನಿಮ್ಮ ಮುಂದೆ ನಾನು ಮಾತಾಡುವದಿಲ್ಲ ಒಂದು ವೇಳೆ ನಾನು ಯುದ್ಧಕ್ಕೆ ನಿಂತರೆ, ಆ ಸಂಗತಿಗಳ ಉಪಯೋಗ ಮಾಡಿಕೊಳ್ಳುವ ಮೋಹವು ಉತ್ಪನ್ನವಾದೀತೆಂದು, ಯುದ್ಧಕ್ಕೆ ನಿಲ್ಲುವದಿಲ್ಲೆಂದು ನಾನು ಖಂಡಿತವಾಗಿ ಹೇಳಿದ್ದೇನೆ. ಇನ್ನು ನನ್ನ ಮೇಲೆ ಅಪ್ರಾಮಾಣಿಕತನದ ದೋಷವು ಎಂತು ಹೊರುವದು?

ಜಯಸಿಂಗನು ಈ ಮಾತುಗಳನ್ನು ಸ್ವಸ್ಥಚಿತ್ತದಿಂದ ಕೇಳುತ್ತಿದ್ದನು. ಅದರಿಂದ ಅವನ ಮನಸಿನ ಮೇಲೆ ಒಳ್ಳೇ ಪರಿಣಾಮವಾಯಿತು. ಇವನು ಆಡಿದ ಮಾತಿನಲ್ಲಿ ಅರ್ಥವಿರುವದು; ಎಂಬ ಸಂಗತಿಯು ಅವನ ಅನುಭವಕ್ಕೆ ಬಂದಿತು. ಇದಕ್ಕೂ ಮೊದಲು ಆ ಗೃಹಸ್ಥನ ಯಾವ ಮಾತಿನಿಂದಲೂ ಈ ತರದ ಪರಿಣಾಮವಾಗಿದ್ದಿಲ್ಲ; ಬಳಿಕ ಅವನು ತನ್ನ ಮನಸಿನಲ್ಲಿ—"ಈ ವೇಷಧಾರಿಯಾದ ಗೃಹಸ್ಥನು ಈಗ ಶಿವಾಜಿಮಹಾರಾಜರ ಸೇವೆಯನ್ನು ಬಿಟ್ಟು, ಬಾದಶಹನ ಸೇವೆಯನ್ನು ಮಾಡಲಿಕ್ಕೆ ಒಡಂಬಡುತ್ತಿರುವನು. ಇಷ್ಟಕ್ಕೆ ಒಡಂಬಟ್ಟ ಮನಸ್ಸು ಇದಕ್ಕೂ ಮುಂದಾದರೂ ಹೋಗಬಹುದು. ಇವನಿಂದ ನಮಗೆ ಮುಂದೆ ಹೆಚ್ಚು ಉಪಯೋಗವಾಗುವ ಸಂಭವವಿರುವದು. ಯುಕ್ತಿಪ್ರಯುಕ್ತಿಗಳನ್ನು ಮಾಡಿ ಇವನಿಂದ ಅನೇಕ ಸಂಗತಿಗಳನ್ನು ತಿಳಿದುಕೊಳ್ಳಬಹುದು'' ಎಂದು ಆಲೋಚಿಸಿ ಆ ಗೃಹಸ್ಥನನ್ನು ಕುರಿತು—"ಸದ್ಯಕ್ಕೆ ನಡೆದ ಯುದ್ಧದಲ್ಲಿ ನಮ್ಮ ಪಕ್ಷಕ್ಕೆ ಸಹಾಯಮಾಡಲಿಕ್ಕಿಲ್ಲೆಂದು ನಿನ್ನದೊಂದು ಕರಾರು ಅದೆಯಷ್ಟೇ; ನೀನು ಶೂರನಿರಬಹುದು. ನಿನ್ನಂಥ ಶೂರರು ನಮ್ಮ ಸೈನ್ಯದಲ್ಲಿ ಹಲವು ಜನರಿರುವರು.

ಇದಲ್ಲದೆ ಯುದ್ಧದಲ್ಲಿ ಶೌರ್ಯಕ್ಕಿಂತ ಶತ್ರುಪಕ್ಷದ ಗುಪ್ತ ಸಂಗತಿಗಳ ಜ್ಞಾನದಿಂದ ಬಹಳ ಮಟ್ಟಿಗೆ ಉಪಯೋಗವಾಗುವದು. ಆದಕಾರಣ ನಿನ್ನ ಮನಸ್ಸಿದ್ದರೆ, ಈ ಯುದ್ಧದಲ್ಲಿ ನಮಗೆ ಎಲ್ಲ ಪ್ರಕಾರದಿಂದಲೂ ಸಹಾಯ ಮಾಡು'' ಎಂದು ಹೇಳಿದನು.

ಅದಕ್ಕೆ ಆ ಗೃಹಸ್ಥನು—ಈ ಕೆಲಸವು ನನ್ನಿಂದ ಕಾಲತ್ರಯದಲ್ಲಿಯೂ ಆಗದೆಂದು ನಾನು ಖಂಡಿತವಾಗಿ ಹೇಳಿದ್ದೇನೆ. ಪುನಃ ಪುನಃ ಏಕೆ ಕೇಳುವಿರಿ? ನಾನು ಮಾಡುವ ನಿಮ್ಮ ಸೇವೆಯು ಅನುಭವದಿಂದಲೇ ತಿಳಿಯತಕ್ಕದ್ದಾಗಿರುವದು. ನಿಮ್ಮ ಮನಸಿಗೆ ಬಂದಂತೆ ಮಾಡಬಹುದು.

ಜಯಸಿಂಗನು ಸ್ವಲ್ಪ ವೇಳೆ ಆಲೋಚನೆ ಮಾಡಿ, ತನ್ನ ಮನಸಿನಲ್ಲಿ—ಈ ನಾಣ್ಯವು ಖೊಟ್ಟಿಯಲ್ಲ. ಇವನ ಮಾತಿಗೆ ಒಡಂಬಟ್ಟು ನಮ್ಮ ಹತ್ತರ ಇಟ್ಟುಕೊಳ್ಳುವದು ಯೋಗ್ಯವು. ಯಾವನೋ ಒಬ್ಬ ಶಿವಾಜಿಯ ಅಂತರಂಗದ ಮನುಷ್ಯನು ಶಿವಾಜಿಯ ಪಕ್ಷವನ್ನು ಬಿಟ್ಟು ಜಯಸಿಂಗನ ಒಳಿಯಲ್ಲಿ ಚಾಕರಿಗೆ ನಿಂತುಕೊಂಡನೆಂಬ ಸಂಗತಿಯು ಶಿವಾಜಿಯ ಪಕ್ಷದ ಜನರಿಗೆ ತಿಳಿದರೆ ಸಾಕು; ಎಷ್ಟೋ ಕಾರ್ಯಗಳಾಗುವವು, ಎಂದು ಆಲೋಚನೆ ಮಾಡಿ—ಒಳ್ಳೇದು ನಿನ್ನನ್ನು ನಾನು ನನ್ನ ಸೈನಾತಿಯಲ್ಲಿಟ್ಟುಕೊಳ್ಳುವೆನು. ನೀನು ಇಲ್ಲಿ ಒಳ್ಳೇ ಎಚ್ಚರಿಕೆಯಿಂದ ಮಾತ್ರ ಇರತಕ್ಕದ್ದು; ನಮ್ಮ ಛಾವಣಿಯೊಳಗಿನ ಅನೇಕ ಸಂಗತಿಗಳು ನಿನಗೆ ತಿಳಿಯಬಹುದು. ಅವುಗಳನ್ನು ನೀನು ನಿನ್ನ ಮೊದಲಿನ ಒಡೆಯನಿಗೆ ತಿಳಿಸಿದರೆ ಮಾತ್ರ ಮೋಸವಾದೀತು. ಈ ಮಾತನ್ನು ಚನ್ನಾಗಿ ಲಕ್ಷದಲ್ಲಿಡತಕ್ಕದ್ದು; ನಿನ್ನ ಸುತ್ತುಮುತ್ತು ಯಾವಾಗಲೂ ನನ್ನ ಜನರು ಇರುವರೆಂದು ತಿಳಿ.

ಇನ್ನೂವರೆಗೆ ನೀನು ನಿನ್ನ ನಿಜವಾದ ಹೆಸರನ್ನು ನಮ್ಮ ಮುಂದೆ ಹೇಳಿರುವದಿಲ್ಲ. ಆ ಬಗ್ಗೆ ನಾವೂ ನಿನಗೆ ಆಗ್ರಹಮಾಡುವದಿಲ್ಲ. ನಾವು ನಿನ್ನನ್ನು ಸುಜನಸಿಂಗನೆಂದು ಕರೆಯುವೆವು. ಅದೇ ಹೆಸರಿನಿಂದಲೇ ನೀನು ನಮ್ಮ ಬಳಿಯಲ್ಲಿ ಇರಬೇಕು. ಮತ್ತು ರಜಪೂತ ಪದ್ಧತಿಯ ಒಂದು ಪೋಷಾಕನ್ನು ಹಾಕಿಕೊಂಡು ಯಾವಾಗಲೂ ನೀನು ನಮ್ಮ ಬಳಿಗೆ ಬರತಕ್ಕದ್ದು, ಎಂದು ಹೇಳಿದನು. ಅದಕ್ಕೆ ಆ ವೇಷಧಾರಿಯಾದ ಗೃಹಸ್ಥನು ಮೌನದಿಂದಲೇ ಸಮ್ಮತಿಕೊಟ್ಟನು. ಆ ಬಳಿಕ ಜಯಸಿಂಗನು ಅಲ್ಲಿಂದ ಹೊರಟುಹೋದನು. ಕೂಡಲೆ ಆ ಕೊಂಗರವನ ಮುಖಮುದ್ರೆಯು ಒಮ್ಮೆಲೆ ಬದಲಾಯಿತು. ಅವನು ತನ್ನ ಮನಸಿನಲ್ಲಿ ಆಲೋಚಿಸಿದ ಕಾರ್ಯವು ಅರ್ಧಮರ್ಧ ಕೈಗೂಡಿದಂತಾಯಿತು.

ಇನ್ನು ಮುಂದೆ ಇದರ ಪರಿಣಾಮವು ಹೇಗಾಗುತ್ತದೋ ನೋಡೋಣ, ಎಂದು ಅಂದುಕೊಂಡು ಜಯಸಿಂಗನು ಕಳಿಸಿದ ಪೋಷಾಕನ್ನು ಧರಿಸಿ ಅವನ ಡೇರೆಯ ಕಡೆಗೆ ಸಾಗಿದನು.

---

## ೧೦—ಅಂತಸ್ಥ ಮೋಸ.



ಇತ್ತ ದಿಲೇರಖಾನನು ಪುರಂದರದ ಕೋಟೆಗೆ ಮುತ್ತಿಗೆ ಹಾಕಿಕೊಂಡು ಕುಳಿತಿದ್ದನು. ಹಾ ಹಾ ಅನ್ನುವದರೊಳಗಾಗಿ ಈ ಕೋಟೆಯನ್ನು ವಶಮಾಡಿ ಕೊಳ್ಳುತ್ತೇನೆಂದು ಅವನು ಮನಸಿನಲ್ಲಿ ಮಂಡಿಗೆಮಾಡಿದ್ದನು; ಆದರೆ ಮುತ್ತಿಗೆ ಹಾಕಿದ ಎರಡು ದಿವಸಗಳಲ್ಲಿಯೇ ಕೋಟೆಯೊಳಗಿನ ಜನರು ಅವನಿಗೆ ಅನ್ನಸಾಮುಗ್ರಿಗಳು ಸಿಗದಂತೆ ವ್ಯವಸ್ಥೆ ಮಾಡಿಬಿಟ್ಟರು ಆಗ ಮಾತ್ರ ಈ ಕೆಲಸವು ನಾನು ಭಾವಿಸಿದಷ್ಟು ಸುಲಭವಾಗಿಲ್ಲೆಂದು ಅವನ ಮನಸಿಗೆ ಹೊಳೆಯಿತು. ಕೋಟೆಯು ಪ್ರಚಂಡವಾದದ್ದು; ಹಾಗು ಬಲವಾದದ್ದು. ಅದರ ಸುತ್ತುಮುತ್ತಲಿನ ಪ್ರದೇಶದ ಹಾಗು ಮಾರ್ಗಗಳ ಜ್ಞಾನವು ಸ್ವಲ್ಪಾದರೂ ಇಲ್ಲ. ಇಂಥ ಸ್ಥಿತಿಯಲ್ಲಿ ನಾನು ಯಾಕೆ ಸಿಕ್ಕಿದ್ದೇನಾದೀಶೆಂದು ಅವನು ಮನಸಿನಲ್ಲಿಯೇ ಬಹಳ ಹಳಹಳಿಸಿದನು. ಆದರೂ ಹೇಗಾದರೂ ಮಾಡಿ ಕೋಟೆಯನ್ನು ಕೈವಶಮಾಡಿಕೊಳ್ಳದೆ ಬಿಡುವದಿಲ್ಲ. ಈ ಜಯಸಿಂಗನು ಏನಾದರೂ ಕಾರಸ್ಥಾನವನ್ನು ನಡೆಯಿಸಿ ಹಿಂದು ಹಿಂದುಗಳು ಒಂದಾಗಿ ಹಿಂದಕ್ಕೆ ಜಸವಂತಸಿಂಗನು ಮಾಡಿದಂತೆ ಏನಾದರೂ ಗೊಂದಲವನ್ನು ಎಬ್ಬಿಸಿದರೆ, ನಾನು ಎಂದಿಗೂ ಹಾಗೆ ಮಾಡಗೊಡುವದಿಲ್ಲ. ಈ ಸಂಗತಿಯನ್ನು ನಾನು ಮೊದಲೇ ಬಾದಶಹನಿಗೆ ಸೂಚಿಸಿದೆನು; ಆದರೆ ಮಾಡತಕ್ಕದ್ದೇನು? ಜಯಸಿಂಗನ ಮೇಲೆ ಔರಂಗಜೇಬನ ವಿಶ್ವಾಸವು ಬಹಳ; ಆದರಿಂದ ಅವನು ನನ್ನ ಮಾತು ಕೇಳದೆ, ಜಯಸಿಂಗನನ್ನು ಮುಖ್ಯ ಸೇನಾಪತಿಯನ್ನಾಗಿಯೂ, ನನ್ನನ್ನು ಅವನ ಕೈಕೆಳಗಿನವನನ್ನಾಗಿಯೂ ನೇಮಿಸಿ ಕಳಿಸಿರುವನು. ಆದರೆ ಅವನ ವಿರುದ್ಧವಾಗಿ ಏನೂ ಹೇಳಬಾರದೆಂದು ಮಾತ್ರ ನನಗೆ ಅಪ್ಪಣೆಯನ್ನು ಮಾಡಿರುವದಿಲ್ಲ. ಬಾದಶಹನಾದರೂ ಎಂದು ಯಾರ ಮೇಲೆ ಪೂರ್ಣ ವಿಶ್ವಾಸವನ್ನಿಟ್ಟಿದ್ದನು? ಅವನು ತನ್ನ ಹಾಗೆಯೇ ಈ ಜಗತ್ತಿನಲ್ಲಿ ಎಲ್ಲರೂ ಕಪಟಿಗಳೂ, ವಿಶ್ವಾಸಘಾತಕಿಗಳೂ, ಸುಳ್ಳರೂ ಆಗಿರುವರೆಂದು ತಿಳಿಯುವನು.

ಹಾಗಿಲ್ಲವಿದ್ದರೆ ಜಯಸಿಂಗನನ್ನೂ, ನನ್ನನ್ನೂ ಜೋಡು ಮಾಡಿ ಕಳಿಸಿದ ಉದ್ದೇಶ ವೇನು? ನಾನೇನಾದರೂ ಅಲ್ಲದ ಕೆಲಸವನ್ನು ಮಾಡಿದರೆ ಅವನು ಚಾಡೀಹೇಳ ಬೇಕು, ಅವನು ಮಾಡಿದರೆ ನಾನು ಹೇಳಬೇಕು; ಎಂಬದೇ ಅವನ ಅಭಿಪ್ರಾಯ ವಾಗಿರಬಹುದು: ಒಂದುವೇಳೆ ಬಾದಶಹನ ಮನಸಿನಲ್ಲಿ ರಜಪೂತರಿಗೆ ಮಾನ ಕೊಡಬೇಕು; ದರಬಾರದಲ್ಲಿ ಅವರ ಯೋಗ್ಯತೆಯನ್ನು ಹೆಚ್ಚಿಸಬೇಕು, ಎಂಬ ವಿಚಾರಗಳು ಬರಬಹುದು. ಬರಲಿಕ್ಕೂ ಒಂದು ಕಾರಣವಿರುವದು. ಸ್ವತಃ ಅವನ ಮೈಯಲ್ಲಿ ರಜಪೂತರ ರಕ್ತವು ಹರಿಯುತ್ತಿರುವದು. ಸದ್ಯಕ್ಕೆ ಹಿಂದು ಸ್ಥಾನದಲ್ಲಿ ನಮ್ಮಂಥ ಶುದ್ಧ ರಕ್ತದ ಮುಸಲ್ಮಾನರು ತೀರ ಕ್ವಚಿತ್ತಾಗಿ ದೊರೆ ಯುವರು. ಬಾದಶಹನ ಮನಸ್ಸಿನಲ್ಲಿ ಏನೇ ಇರಲಿ, ನಾನು ಮಾತ್ರ ಜಯಸಿಂಗ ನಲ್ಲಿ ಮೋಸವು ಕಂಡು ಬಂದರೆ ಸುಮ್ಮನೆ ಇರಲಾರೆನು, ಎಂದು ದಿಲೇರಖಾನನು ಆಲೋಚಿಸುತ್ತ ಕುಳಿತಿದ್ದನು.

ಈ ಮೇರೆಗೆ ದಿಲೇರಖಾನನು ಜಯಸಿಂಗನ ವಿಷಯವಾಗಿ ಮಾತ್ಸರ್ಯ ವುಳ್ಳವನಾಗಿ ಅವನ ಡೇರೆಯ ಸುತ್ತುಮುತ್ತು ಗುಪ್ತಹೇರರನ್ನು ನಿಯಮಿಸಿ ದ್ದನು. ಜಯಸಿಂಗನು ಒಳ್ಳೇ ಧೂರ್ತನಿದ್ದದರಿಂದ ಇದನ್ನೆಲ್ಲ ಅವನು ಮೊದಲೇ ತಿಳಕೊಂಡಿದ್ದನು ಬಾದಶಹನ ವಿಶ್ವಾಸವು ತನ್ನ ಮೇಲೆ ಪೂರ್ಣವಾಗಿ ಇದ್ದರೂ ಈ ದಿಲೇರಖಾನನು ತನ್ನ ಮೇಲೆ ಒಬ್ಬ ಹೇರನಾಗಿ ಬಂದಿರುವನೆಂಬದನ್ನು ಅವನು ಅರಿತಿದ್ದನು. ತನ್ನ ಕೈಕೆಳಗಿನವನಾಗಿ ಬಂದ ಮೊಗಲ ಸರದಾರನು ಜಾತಿಯ ಅಭಿಮಾನದ ಮೂಲಕವಾಗಿ ತನಗೆ ಅಂಕಿತನಾಗಿ ನಡಯುವದಿಲ್ಲೆಂ ಬದೂ ಎಷ್ಟೋಸಾರೆ ಅವನ ಅನುಭವಕ್ಕೆ ಬಂದಿತ್ತು. ಆದರಿಂದ ಅವನು ಆ ಮೊಗಲ ಸರದಾರನನ್ನು ಅಸಮಾಧಾನಪಡಿಸುತ್ತಿದ್ದಿಲ್ಲ.

ಹಿಂದೆ ಹೇಳಿದಂತೆ ದಿಲೇರಖಾನನು ಮನಸಿನಲ್ಲಿ ನಾನಾತರದ ವಿಚಾರ ಗಳನ್ನು ಮಾಡುತ್ತ ಹುಕ್ಕಾ ಸೇದುತ್ತ ಕುಳಿತಿರುವಾಗ ಒಬ್ಬ ಸೇವಕನು ಬಂದು ಜಯಸಿಂಗನ ಛಾವಣಿಯಿಂದ ಕಿರಾತಸಿಂಗನು ಬಂದಿರುವನು, ಎಂದು ಹೇಳಿ ದನು. ಕಿರಾತಸಿಂಗನ ಹೆಸರು ಕೇಳಿದ ಕೂಡಲೆ, ದಿಲೇರಖಾನನು ಒಮ್ಮೆಲೆ ನಿದ್ದೆಯೊಳಗಿಂದ ಎಚ್ಚತ್ತವನಂತೆ ಎದ್ದು ಕುಳಿತನು; ಮತ್ತು ಅವನನ್ನು ಬೇಗನೆ ಒಳಗೆ ಕರೆ, ಎಂದು ಸೇವಕನಿಗೆ ಹೇಳಿದನು. ಕಿರಾತಸಿಂಗನು ಒಳಗೆ ಬಂದ ಕೂಡಲೆ ದಿಲೇರಖಾನನು ಎದ್ದು ಒಳ್ಳೇ ಆದರದಿಂದ ಅವನ ಸ್ವಾಗತಮಾಡಿ, ತನ್ನ ಹತ್ತರ ಕುಳ್ಳಿರಿಸಿಕೊಂಡು--ಇದೇನು, ಇಂದು ಇತ್ತ ಕಡೆಗೆ ತಿರುಗಿತು ಸ್ವಾರಿಯು?

ಮಿರ್ಝಾರಾಜನ ಅಪ್ಪಣೆಯಿಂದ ಬಂದಿರುವಿರೋ ಹ್ಯಾಗೆ? ಹೊಸ ಸುದ್ದಿ ಯೇನಾದರೂ ಉಂಟೋ?

ಕಿರಾತಸಿಂಗ—ಹೊಸಸುದ್ದಿ ಏನೂ ಇಲ್ಲ, ಜಯಸಿಂಗರಾಜನು ಮಾತ್ರ ಶಿವಾಜಿಯನ್ನು ಒಲಿಸಿಕೊಳ್ಳುವ ವಿಚಾರದಲ್ಲಿದ್ದಂತೆ ತೋರುತ್ತದೆ. ಅವನ ಇಬ್ಬರು ಗುಪ್ತಹೇರರು, ನಮ್ಮ ಸೈನಿಕರಿಂದ ಹಿಡಿಯಲ್ಪಟ್ಟಿದ್ದರೂ ಅವರು ಅಥಿತಿಗಳಂತೆ ಒಳ್ಳೇ ಸತ್ಕಾರ ಹೊಂದುವರು. ಜಯಸಿಂಗರಾಜನು ಅವರನ್ನು ಹೀಗೆ ಆದರಿಸುವದರಲ್ಲಿ ಏನೋ ಗೂಢವಿರುವದು. ಶಿವಾಜಿಯನ್ನು ತನ್ನ ಬಳಿಗೆ ಕರೆಯಿಸಿ ಇಲ್ಲವೆ, ತಾನೇ ಅವನ ಬಳಿಗೆ ಹೋಗಿ, ಒಡಂಬಡಿಕೆಯನ್ನು ಮಾಡಿ ಕೊಂಡು ಹೇಗಾದರೂ ಮಾಡಿ ಶಿವಾಜಿಯನ್ನು ತನ್ನ ಅಂಕಿತದಲ್ಲಿ ತೆಗೆದುಕೊಂ-ಡಂತೆ ನಟಿಸಿ, ದಕ್ಷಿಣದಮೇಲೆ ಮಾಡಿದ ಸ್ವಾರಿಯು ಫತ್ತೇ ಆಯಿತೆಂದು ಅನಿಸಿ, ಬಂದ ಹಾದಿಯಿಂದ ತಿರುಗಿ ಹೊರಡುವ ಆಲೋಚನೆಯನ್ನು ಅವನು ಮಾಡಿ ದಂತೆ ಕಾಣುತ್ತದೆ.

ದಿಲೇರಖಾನನು(ಒಳ್ಳೇ ಡೌಲನಿಂದ).—ಈ ಮಾತಿನಲ್ಲಿ ಸಂಶಯವೇ ಇಲ್ಲ. ಜಯಸಿಂಗನ ಪೌರುಷವೆಂದರೇನು? ಫಿತೂರಿಯಿಂದ ಶತ್ರುಪಕ್ಷದವರನ್ನು ಒಡ ಕೊಳ್ಳುವದೇ ಸರಿ. ನಿಮಗೆ ಇನಾಮುಗಳನ್ನು ಕೊಡುವೆನು; ಜಹಾಗೀರು ಹಾಕಿಕೊಡುವೆನು; ಮನಸಬದಾರಿಯನ್ನು ಕೊಡಿಸುವೆನು, ಇತ್ಯಾದಿ ಆಶೆ ಯನ್ನು ತೋರಿಸುವದೇ ಅವನ ಮುತ್ಸದ್ದಿಗಿರಿಯು; ಈ ಪ್ರಕಾರ ಇತ್ತ ಆಶಾ ಪಾಶದಿಂದ ಜನರನ್ನು ಮೋಹಿಸಿ ರಾಜ್ಯವನ್ನು ತಕ್ಕೊಳ್ಳುವದು; ಅತ್ತ ಬಾದ ಶಹನಿಗೆ ತನ್ನ ಪೌರುಷವನ್ನು ಅತಿಶಯೋಕ್ತಿಯಿಂದ ವರ್ಣಿಸಿ ಪತ್ರವನ್ನು ಬರೆ ಯುವದು. ಇದೇ ಇವನ ಕಾರ್ಯವು. ರಣಭೂಮಿಯಲ್ಲಿ ಇವನು ಎಂದು ಸಾಹಸವನ್ನು ತೋರಿಸಿದ್ದನು? ಅದರಂತೆ ಈಗಾದರೂ ಶಿವಾಜಿಗೆ ಆಶೆಯನ್ನು ಹಚ್ಚದೆ ಬಿಡನು.

ಕಿರಾತಸಿಂಗನು(ಗಹಗಹಿಸಿ ನಕ್ಕು):—"ಈಗ ನಾನು ನಿಮಗೆ ಹೇಳಲಿಕ್ಕೆ ಬಂದಸುದ್ದಿಯಾದರೂ ಇದೇ. ಅದನ್ನು ಕೇಳಿದಾಗಿನಿಂದ ನನಗೆ ಬಹಳ ಸಂತಾ ಪವಾಗಿರುತ್ತದೆ. ನೀವು ಅಂದಂತೆಯೇ ಎಲ್ಲ ಕಾರ್ಯಗಳೂ ನಡೆದಿರುವವು."

ದಿಲೇರಖಾನನು(ಸಂತಪ್ತನಾಗಿ):—ಇದೆಲ್ಲ ನನಗೆ ಮೊದಲೇ ಗೊತ್ತಿತ್ತು. ಬಾದಶಹನಿಗೆ ಮೊದಲೇ ನಾನು ಸೂಚಿಸಿದ್ದೆನು; ಆದರೆ ಮಾಡತಕ್ಕದ್ದೇನು? ಮಿರ್ಝಾರಾಜನ ಮೇಲೆ ಅವನ ವಿಶ್ವಾಸವು ಬಹಳ. ಅವನ ಬೇಡಿಕೆಯು ಪ್ರಕಾರ

ಜಹಾಗೀರುಗಳನ್ನೂ ಮನಸಬದಾರಿಗಳನ್ನೂ ಕೊಡುವ ಸಂಪೂರ್ಣ ಅಧಿಕಾರದ ಪತ್ರಗಳು ಆಗ್ರಾದಿಂದ ಬರುತ್ತಿರುವವು. ಬೊಕ್ಕಸವು ಅವನ ವಶಕ್ಕೆ ಕೊಡಲ್ಪಟ್ಟಿರುವದು. ಒಟ್ಟಿನಮೇಲೆ ಅವನ ಪುಣ್ಯವು ಬಲವತ್ತರವಾಗಿರುವದು. ಇದರಲ್ಲೇನೂ ಸಂಶಯುವಿಲ್ಲ. ನಾವು ಇವನ ವಿರುದ್ಧವಾಗಿ ಬಾದಶಹನಿಗೆ ಏನಾದರೂ ಹೇಳಿ ಎಷ್ಟು ಸಪ್ರಮಾಣವಾಗಿ ಸಿದ್ಧಮಾಡಿ ತೋರಿಸಿದರೂ ಅವನಿಗೆ ಅದು ನಿಜವಾಗಿ ತೋರುವದಿಲ್ಲ. ಇರಲಿ; ಸದ್ಯಕ್ಕೆ ನಾವಂತು ನಮ್ಮ ಕರ್ತವ್ಯವನ್ನು ಮಾಡಿಬಿಡೋಣ. ನಡೆದ ಯಾವತ್ತು ಸಂಗತಿಗಳನ್ನು ಬಾದಶಹನಿಗೆ ಪತ್ರದ್ವಾರದಿಂದ ತಿಳಿಸಿಬಿಡುತ್ತೇನೆ; ಮತ್ತು ನಿಜವಾಗಿ ಒಡಂಬಡಿಕೆಯು ಆಗುವದು ಗೊತ್ತಾದರೆ ನಾನು ಒಪ್ಪಿಕೊಳ್ಳುವದಿಲ್ಲೆಂದು ಮಿರ್ಝಾರಾಜನಿಗೆ ಖಂಡಿತವಾಗಿ ಹೇಳಿಬಿಡುತ್ತೇನೆ. ಬಾದಶಹನು ನನ್ನನ್ನು ಅವನ ಕೈಕೆಳಗೆ ದುಯ್ಯಂ ಅಧಿಕಾರಿಯೆಂದು ನಿಯಮಿಸಿದ್ದರೂ ನಾನು ನಡೆಯುವದು ಮುಖ್ಯಅಧಿಕಾರಸ್ಥನಂತೆಯೇ. ಶಿವಾಜಿಯ ಕೂಡ ಒಡಂಬಡಿಕೆಯನ್ನು ಮಾಡಿಕೊಂಡು ಅವನನ್ನು ದಕ್ಷಿಣದ ಸುಭೇದಾರರನ್ನಾಗ ಮಾಡಲಿಕ್ಕೆ ಈ ಮಿರ್ಝಾರಾಜನಿಗೊಬ್ಬನಿಗೇ ಏನು ಅಧಿಕಾರವಿರುವದು?

ಕಿರಾತಸಿಂಗ:—ನೀವು ಇದೇ ಮಾತನ್ನು ಗಟ್ಟಿಯಾಗಿ ಹಿಡಿದರೆ ಒಳ್ಳೇದಾಗುವದು. ಇಲ್ಲದಿದ್ದರೆ, ಆ ಧೂರ್ತನು ತನ್ನ ಮನಸಿನಂತೆ ಕಾರ್ಯವನ್ನು ಸಾಧಿಸಿಕೊಂಡು ಬಿಡುವನು.

ದಿಲೇರಖಾನ:—ಅವನು ನನ್ನ ಒಪ್ಪಿಗೆಯಿಲ್ಲದೆ ಒಡಂಬಡಿಕೆಯನ್ನು ಮಾಡಿಕೊಳ್ಳುವನೇನು? ಅವನು ನನ್ನ ಮನವೊಲಿಸಿಕೊಳ್ಳುವದಕ್ಕಾಗಿ ನನ್ನ ಕಡೆಗೆ ಬರಲಿಕ್ಕೇಬೇಕು.

ಕಿರಾತಸಿಂಗನು(ಕುತ್ಸಿತಮನಸಿನಿಂದ):—ನಿಮ್ಮ ಮನವೊಲಿಸಿಕೊಳ್ಳಲಿಕ್ಕೆ ನಿಮ್ಮ ಕಡೆಗೆ ಅವನು ಬಂದಮೇಲಾದರೂ ನೀವು ಅವನ ಮಾತಿಗೆ ಒಪ್ಪಿಕೊಳ್ಳುವಿರೆಂಬಂತಾಯಿತು.

ದಿಲೇರಖಾನ:—ಹಾಗೆಂದಿಗೂ ಆಗದು; ಅವನು ಎಷ್ಟು ಪರಿಯಿಂದ ಹೇಳಿಕೊಂಡರೂ ಅವನ ಸವಿಮಾತುಗಳಿಗೆ ನಾನು ಮರುಳಾಗಲಾರೆನು. ಆ ಶಿವಾಜಿಯು ಒಳ್ಳೇ ಮೋಸಗಾರನು. ಆ ಮೋಸಗಾರಿಕೆಯು ನನ್ನ ಮುಂದೆ ನಡೆಯುವದೆ?

ಕಿರಾತಸಿಂಗ:—ಜಯಸಿಂಗನಿಗೆ ಈ ವೃದ್ಧಾಪ್ಯಕಾಲದಲ್ಲಿ ಯುದ್ಧಮಾಡು

ವದು ತಲೆಬೇಸರವಾಗಿರುವದೆಂಬಂತೆ ತೋರುತ್ತದೆ. ಅಂತೇ ಅವನು ಜಯ ಸಂಪಾದಿಸುವ ಸುಲಭ ಹಂಚಿಕೆಗಳನ್ನು ತೆಗೆಯಲಿಕ್ಕೆ ಹೋಗಿ, ಅವರ ಬಲಿಗೆ ಬೀಳುವನು.

ದಿಲೇರಖಾನ:—ನಿಜವು! ಈ ಸಾರೆ ಬಂದ ನಮ್ಮಿಬ್ಬರಲ್ಲಿ ನಾನಂತೂ ಹೀಗೆಂದಿಗೂ ಮೋಸಹೋಗಲಾರೆನು. ಆ ಶಿವಾಜಿಯು ಎಲ್ಲ ಕೋಟೆಗಳನ್ನೂ ಕೈವಶಮಾಡಿಕೊಂಡು, ಅವುಗಳ ಮೇಲೆ ಬಾದಶಹನ ಧ್ವಜವನ್ನು ನಿಲ್ಲಿಸಿ ಅವನನ್ನು ಸೆರೆಹಿಡಿದು, ಬಾದಶಹನ ಮುಂದೆ ಒಯ್ದು ನಿಲ್ಲಿಸಿದರೇ ನನ್ನ ಹೆಸರು ದಿಲೇರಖಾನನೆಂದು ತಿಳಿಯಿರಿ. ನೀವು ಹಿಂದು ಹಿಂದುಗಳು ಒಂದಾಗಿ ಆ ಮೋಸಗಾರನ ವರ್ಚಸ್ಸನ್ನು ಬೆಳಿಸಲಿಕ್ಕೆ ಪ್ರಯತ್ನಮಾಡತಕ್ಕವರು. ನಿಮ್ಮ ಮನಸಿನಲ್ಲಿ ಅವನಿಗೆ ಸಹಾಯಮಾಡಬೇಕೆಂದು ಇರುವದು. ನಾನು ಒಂದುವೇಳೆ ದಕ್ಷಿಣಕ್ಕೆ ಬರದಿದ್ದರೆ, ನೀವು ಅವನೊಡನೆ ಕೂಡಿಕೊಂಡು, ದಕ್ಷಿಣದಲ್ಲಿ ಮುಸಲ್ಮಾನರ ಹೆಸರುಳಿಯದಂತೆ ಮಾಡಿಬಿಡುತ್ತಿದ್ದಿರಿ. ಜಸವಂತಸಿಂಗನು ಶಹಾಬಾದನಿಗೆ ಟೊಪ್ಪಿಗೆ ಹಾಕಲಿಲ್ಲವೆ?

ಕಿರಾತಸಿಂಗ:--ಎಲ್ಲರೂ ಹಾಗೇ ಎಂದು ತಿಳಿಯಬೇಡಿರಿ. ಖಾನಸಾಹೇಬ, ನಿಮ್ಮಂಥ ಸ್ವಾಮಿನಿಷ್ಠರು ಇಲ್ಲೇ ಇಲ್ಲೆಂದು ನಿಮ್ಮ ಅಭಿಪ್ರಾಯವುಂಟೇನು?

ದಿಲೇರಖಾ:—ಛೀ ಛೀ ಹಾಗೇನೂ ಇಲ್ಲ. ನಿನ್ನೊಬ್ಬನಮಾತು ಬೇರೆ; ಕಿರಾತಸಿಂಗ ನೀನೇ ನೋಡು. ಯಾವನು ಶಾಸ್ತೇಖಾನನಕಣ್ಣಿಗೆ ಇಂಗು ಹಚ್ಚಿದನೋ ಅವನ ಸೇಡು ತೀರಿಸಿಕೊಳ್ಳಬೇಕೆಂದು ನಾವು ಇಲ್ಲಿಗೆ ಬಂದದ್ದು; ಹೀಗಿದ್ದು ಆ ದುಷ್ಟವೈರಿಯಕೂಡ ಒಡಂಬಡಿಕೆಯ ಆಲೋಚನೆಯೆ? ಇದರಿಂದ ನಿಮ್ಮ ಮನಸಿನಲ್ಲಿ ಬಾದಶಹನ ವಿಷಯವಾಗಿ ಎಷ್ಟರಮಟ್ಟಿಗೆ ಪ್ರೇಮವಿರುವದೆಂಬದು ಮೇಲೆಯೇ ಕಾಣುತ್ತದೆ.

ಈ ಪ್ರಕಾರ ಅವರಿಬ್ಬರ ಸಂಭಾಷಣವು ನಡೆದಿರಲು, ಹೊರಗೆ ಏನೋ ಗದ್ದಲವು ಎದ್ದಂತೆ ತೋರಿತು. ದಿಲೇರಖಾನನು ಮಾತನ್ನು ಅಷ್ಟಕ್ಕೇನಿಲ್ಲಿಸಿ— ಯಾ ಅಲ್ಲಾ, ಈ ಮರಾಟರು ಭೂತಗಳೋ ಪಿಶಾಚಿಗಳೋ ತಿಳಿಯದು. ಈ ಗದ್ದಲವು ಅವರದೇ ಇರಬಹುದು. ಈ ಜನರು ಕೊಳ್ಳಿಯದೆವ್ವಗಳಂತೆ ಕೈಯಲ್ಲಿ ಹಿಲಾಲು ಹಿಡಿದುಕೊಂಡು, ಒಮ್ಮೆಲೇ ಮುಂದೆ ಬಂದು ನಿಲ್ಲುವರು. ನಾವು ನಮ್ಮ ಆಯುಧಗಳನ್ನು ಸಜ್ಜುಗೊಳಿಸಿಕೊಳ್ಳುವಷ್ಟರಲ್ಲಿ ಇವರು ನಮ್ಮ ಛಾವಣಿಯನ್ನು ಸುಲಿದು ಸುಟ್ಟು ಹಾಳುಮಾಡಿ ಮಾಯವಾಗುವರು. ನಾವು ಇವರ

ಕೋಟೆಗೆ ಬಿಗಿಯಾಗಿ ಮುತ್ತಿಗೆ ಹಾಕಿಕೊಂಡು ಕುಳಿತಿದ್ದರೂ, ಈ ಠಕ್ಕರು ಯಾವಕಡೆಯಿಂದಾದರೂ ಗುಡ್ಡದ ಕೆಳಗೆ ಇಳಿದು, ನಮ್ಮ ಛಾವಣಿಯ ಒಂದು ಭಾಗದ ಮೇಲೆ ಹಲ್ಲಾ ಮಾಡುವರು. ಈ ಗಲಭೆಯು ಅವರದೇ. ಸಂದೇಹ ವಿಲ್ಲ. ಇಂಥ ಮೋಸಗಾರರ ಕೂಡ ಒಡಂಬಡಿಕೆಯೇ? ಕಿರಾತಸಿಂಗ ನಡೆ, ನಿನಗೆ ಇವರ ಮೋಸಗಾರಿಕೆಯನ್ನು ತೋರಿಸುತ್ತೇನೆ, ಎಂದು ಒಟಗುಟ್ಟುತ್ತ ಹೊರಗೆಬಂದು ತನ್ನ ದಂಡಿನವರನ್ನು ಎಚ್ಚರಿಸುವದಕ್ಕಾಗಿ ಕೊಂಬು ಊದಿದನು. ಕೂಡಲೆ ಛಾವಣಿಯಲ್ಲಿ ನಾಲ್ಕೂ ಕಡೆಗೆ ಗೊಂದಲವೆದ್ದಿತು. ಮೊಗಲರ ದಂಡಿನ ಅವ್ಯವಸ್ಥೆಯನ್ನು ಕೇಳುವದೇನು? ಕೆಲವರು ಹುಕ್ಕಾ ಸೇದುತ್ತ ಬಿದ್ದು ಕೊಂಡಿದ್ದರು ಕೆಲವರು ಹಾಡುಬಾರಿಸುವದರಲ್ಲಿ ಮಗ್ನರಾಗಿದ್ದರು. ಶಸ್ತ್ರಗಳು ಎಲ್ಲಿಯೋ ಬಿದ್ದುಬಿಟ್ಟಿದ್ದವು. ತುಬಾಕಿಗಳಿಗೆ ಗುಂಡು ಮದ್ದುಗಳಿದ್ದಿಲ್ಲ. ಈ ಸ್ಥಿತಿಯಲ್ಲಿ ಆ ದಂಡಾಳುಗಳು ಕ್ಯಾ ಹೈ, ಕ್ಯಾ ಹೈ, ಎಂದು ಹೊರಗೆ ಬಂದು ಒಟ್ಟುಗೂಡಹತ್ತಿದರು. ಈ ವ್ಯವಸ್ಥೆಯನ್ನು ಕಂಡು ಕಿರಾತಸಿಂಗನಿಗೆ ಹುಚ್ಚುನಗೆ ಬಂತು. ಆದರೆ ಹತ್ತಿರ ದಿಲೇರಖಾನನು ನಿಂತಿದ್ದರಿಂದ ಆ ನಗೆಯನ್ನು ಹತ್ತಿಕ್ಕುತ್ತಿಕೊಂಡನು. ದಿಲೇರಖಾನನು ತನ್ನ ಜನರಿಗೆ ಎದುರಿಗೆ ಬರುವ ಮರಾಟರ ಮೇಲೆ ಏರಿಹೋಗುವದಕ್ಕೆ ಸನ್ನೆಯನ್ನು ಮಾಡಿದನು. ಕೂಡಲೆ ಆ ಜನರು ಮರಾಟರ ಮೇಲೆ ಸಾಗಿದರು. ಅಷ್ಟರಲ್ಲಿ ಶತ್ರುಗಳು ಚಟ್ಟನೆ ಎಡಕ್ಕೆ ಹೊರಳಿದರು. ದಿಲೇರಖಾನನ ಜನರು ಅವರ ಬೆನ್ನಹತ್ತಿ ನಡೆದರು. ಛಾವಣಿಯಲ್ಲಿ ತೀರ ಸ್ವಲ್ಪ ಜನರು ಮಾತ್ರ ಉಳಿದರು.

ತುಸು ಮುಂದಕ್ಕೆ ಹೋದ ಮೇಲೆ ದಿಲೇರಖಾನನಿಗೆ ಮರಾಟರು ಪುರಂದರ ಗುಡ್ಡದ ಅಡಿಯಲ್ಲಿ ಕುಳಿತಿರುವಂತೆ ತೋರಿತು. ಇದರಲ್ಲೇನಾದರೂ ಮೋಸವಿರಬಹುದೆಂದು ಅವನಿಗೆ ಸಂಶಯವು ತಟ್ಟಿತು. ಅವರ ಮೋಸಗಾರಿಕೆಯು ಯಶಸ್ವಿಯಾಗುವದಕ್ಕಿಂತ ಮೊದಲೇ ನಾವು ಅವರ ಮೇಲೆ ಹಲ್ಲಾ ಮಾಡಬೇಕೆಂದು ಯೋಚಿಸಿ, ಅವನು ತನ್ನ ದಂಡಿನವರನ್ನು ಓಡಿಸಿದನು. ಮೊಗಲಸೈನ್ಯವು ಗುಡ್ಡದಬಳಿಗೆ ಬಂದಿತು ಆದರೂ ಮರಾಟರ ಸೈನ್ಯದಲ್ಲಿಯ ಹಿಲಾಲುಗಳು ತಟಸ್ಥವಾಗಿದ್ದವು. ಇದನ್ನು ಕಂಡು ದಿಲೇರಖಾನನ ಮನಸಿನಲ್ಲಿ ಮತ್ತೆ ನೋ ವಿಚಾರವು ತಲೆದೋರಿ ಈ ಮರಾಟರು ನಮ್ಮನ್ನು ಮೋಸಗೊಳಿಸಿರಲಿಕ್ಕಿಲ್ಲವಷ್ಟೇ? ಎಂದು ಕ್ಷಣಹೊತ್ತು ಆಲೋಚಿಸಿ ತನ್ನ ಜನರಿಗೆ ಅಲ್ಲಿಯೇ ನಿಲ್ಲಲಿಕ್ಕೆ ಹೇಳಿ, ಆ ಹಿಲಾಲುಗಳ ಬಳಿಗೆ ತನ್ನ ಇಬ್ಬರು ಚಾಕರರನ್ನು ಕಳಿಸಿದನು.

ಅವರು ನೋಡಿ ಬಂದು:--"ಖಾನಸಾಹೇಬ, ಅಲ್ಲಿ ಬರೇ ನೂರಿನ್ನೂರು ಹಿಲಾಲು ಗಳು ಮಾತ್ರ ಉರಿಯುತ್ತಿರುವವು. ಮನುಷ್ಯರ ಒಂದು ಪಿಳ್ಳೆಯೂ ಸಹ ಇಲ್ಲ." ಎಂದು ಹೇಳಿದರು.

ಇದನ್ನು ಕೇಳಿ ದಿಲೇರಖಾನನೂ, ಕಿರಾತಸಿಂಗನೂ ಆಶ್ಚರ್ಯದಿಂದ ಚಕಿತರಾದರು. ದಿಲೇರಖಾನನು ಹತಾಶನಾಗಿ:—ಅಯ್ಯೋ ಈ ಜನರು ಈ ಪ್ರಕಾರ ದಿನಾಲು ಹೊಸ ಹೊಸ ಯುಕ್ತಿಗಳನ್ನು ತೆಗೆದು, ನಮಗೆ ಮೋಸಮಾಡುತ್ತಿರುವರು. ಈ ಪ್ರಚಂಡನಾದ ಕೋಟೆಯನ್ನು ಕೈವಶಮಾಡಿಕೊಳ್ಳಲಿಕ್ಕೆ ಏನು ಹಂಚಿಕೆ ಮಾಡಬೇಕು? ಕೋಟೆಯು ಇಂದು ವಶವಾದೀತು, ನಾಳೆ ವಶವಾದೀತೆಂದು ಎಣಿಕೆ ಹಾಕಹತ್ತಿ ಇಂದಿಗೆ ಎಷ್ಟೋ ದಿವಸಗಳು ಸಂದಿಹೋದವು. ಇನ್ನೇನು ಮಾಡಲಿ? ಎಂದು ನಿಟ್ಟಿಸುರುಬಿಟ್ಟು ಸುಮ್ಮನೆ ನಿಂತುಕೊಂಡನು.

ದಿಲೇರಖಾನನ ಬಾಯಿಂದ ಈ ತರದ ಉತ್ತರವು ಹೊರಟದ್ದನ್ನು ಕಿರಾತಸಿಂಗನು ಎಂದೂ ಕೇಳಿದ್ದಿಲ್ಲ. ಅವನು ಯಾವಾಗಲೂ ಒಣ ಪೌರುಷವನ್ನೇ ಕೊಚ್ಚುವನು. ಇಂಥ ಜನರಿಗೆ ಎರಡನೆಯವರು ಮೋಸ ಮಾಡಿದ್ದು ಅನುಭವಬಂದಕೂಡಲೆ ಕ್ಷಣಹೊತ್ತು ಅವರ ಸೊಕ್ಕು ಇಳಿದು, ಅವರು ತಮ್ಮ ದೌರ್ಬಲ್ಯವನ್ನು ಒಪ್ಪಿಕೊಳ್ಳುವರು. ಈಗ ದಿಲೇರಖಾನನ ಸ್ಥಿತಿಯಾದರೂ ಹೀಗೇ ಆಗಿತ್ತು. ಕಿರಾತಸಿಂಗನ ಮುಂದೆ ನಾನು ಹೀಗೆ ಮಾತಾಡಿದ್ದು ಒಳಿತಾಗಲಿಲ್ಲೆಂದು ಅವನು ಬಹಳ ಹಳಹಳಿಸಿದನು. ಆ ಬಳಿಕ ಅವನು ಬಳ್ಳೇ ಆವೇಶಗೊಂಡು—ಕಿರಾತಸಿಂಗ, ಇನ್ನು ಮೇಲೆ ಈ ಮರಾಟರ ಆಯುಷ್ಯವು ಮುಗಿಯಿತೆಂದು ತಿಳಿಯಬೇಕು. ನಾಲ್ಕು ದಿವಸಗಳಲ್ಲಿ ಈ ಕೋಟೆಯನ್ನು ಕೈವಶಮಾಡಿಕೊಳ್ಳುತ್ತೇನೆ ಒಮ್ಮೆ ಜಯಸಿಂಗನಿಗೆ ನನ್ನ ಪೌರುಷವಾದರೂ ಗೊತ್ತಾಗಲಿ. ಈ ನೀಚರು ಹಿಲಾಲುಗಳನ್ನು ನಮಗೆ ಕಾಣುವಂತೆ ಇಟ್ಟು ನಮ್ಮನ್ನು ಮೋಸಗೊಳಿಸಿ ನಮ್ಮ ಛಾವಣಿಗೆ ಹೋಗಿರಲಿಕ್ಕಿಲ್ಲವಷ್ಟೇ? ಎಂದು ನುಡಿದು, ಅವನು ಒತ್ತರದಿಂದ ತನ್ನ ಜನರೊಡನೆ ಛಾವಣಿಯ ಕಡೆಗೆ ನಡೆದನು. ಅಷ್ಟರಲ್ಲಿ ಹಿಂದಿನಿಂದ ಕವಣೆಗಲ್ಲುಗಳು ಸೂ, ಸೂ ಎಂದು ಬರಹತ್ತಿದವು. ಆಗ ಅವರು ಆಶ್ಚರ್ಯಪಡುತ್ತ ಪುನಃ ಹಿಂದಿರುಗಿ ಶತ್ರುಗಳನ್ನು ಹುಡುಕಿದರು; ಒಬ್ಬ ಮನುಷ್ಯನೂ ಅವರ ದೃಷ್ಟಿಗೆ ಬೀಳಲಿಲ್ಲ. ಈಗ ಮಾತ್ರ ಅವರು ಬಳ್ಳೇ ಪೇಚಿನೊಳಗೆ ಬಿದ್ದರು. ಇನ್ನು ಮುಂದೆ ನಾವು ಈ ಅಡವಿಯಲ್ಲಿ ಶತ್ರುಗಳನ್ನು ಶೋಧಮಾಡಬೇಕೋ? ತಿರುಗಿ ಛಾವಣಿಗೆ ಹೋಗಬೇಕೋ ಎಂಬದನ್ನು ಅವರು ಆಲೋ

ಚಿಸಹತ್ತಿದರು. ಕಡೆಗೆ ದಿಲೇರಖಾನನು ಅರ್ಧಜನರನ್ನು ಅಲ್ಲಿಯೇ ಬಿಟ್ಟು, ಉಳಿದ ಅರ್ಧಜನರನ್ನು ಕರಕೊಂಡು ಛಾವಣಿಯ ಕಡೆಗೆ ಬರುವಷ್ಟರಲ್ಲಿ ಮರಾಟರು ಛಾವಣಿಯನ್ನು ಸುಲಿದು ಹೊರಟು ಹೋಗಿದ್ದರು.

ಈಗ ದಿಲೇರಖಾನನು ಛಾವಣಿಯಲ್ಲಾದ ಅವ್ಯವಸ್ಥೆಯನ್ನು ನೋಡಿ ಸಂತಪ್ತನಾದನು. ಅವನು ಈ ತಪ್ಪನ್ನು ಯಾರಮೇಲೆಯೂ ಹೊರಿಸುವಂತೆ ಇದ್ದಿಲ್ಲ. ಅವನ ಮನಸ್ಸು ಈಗ ಒಳ್ಳೇ ಖಿನ್ನವೂ, ಸಂತಪ್ತವೂ ಆಗಿದ್ದರೂ ಆತನು ಛಾವಣಿಯ ಬೇರೆ ಬೇರೆ ಭಾಗಕ್ಕೆ ಹೋಗಿ, ಅಲ್ಲಲ್ಲಿ ಅಸ್ತವ್ಯಸ್ತವಾಗಿ ಬಿದ್ದ ಸಾಮಾನುಗಳನ್ನು ನೋಡಿ ಮತ್ತಿಷ್ಟು ತಪ್ತನಾದನು; ಅಷ್ಟರಲ್ಲಿ ಅವನ ಜನಾನಖಾನೆಯೊಳಗಿನ ಮುಖ್ಯ ಖೋಜಾ ಅಬದಲ್ಲಮಗರೂರ ಎಂಬವನು ಬಂದು ಅವನ ಮುಂದೆ ಕೈಕಾಲುಗಳನ್ನು ಉದ್ದಕ್ಕೆ ಚಾಚಿ ಬಿದ್ದುಕೊಂಡು,—ಖಾವಿಂದ, ಹೇಡಿಯಾದ ನನ್ನಿಂದ ಬಹುದೊಡ್ಡ ಅಪರಾಧವು ಘಟಿಸಿತು. ನಾನು ಹೇಳುವ ಸುದ್ದಿಯನ್ನು ತಾವ ಕೇಳುವದಕ್ಕಿಂತ ನನ್ನ ರುಂಡವನ್ನು ಧಡದಿಂದ ಬೇರೆ ಮಾಡಿದರೆ ತಿಲಮಾತ್ರವೂ ಅನ್ಯಾಯವಾಗದು, ಎಂದು ಹೇಳಹತ್ತಿದನು. ದಿಲೇರಖಾನನಿಗೆ ಅವನ ಅಭಿಪ್ರಾಯವು ತಿಳಿಯಲಿಲ್ಲ. ಅವನ ಸಿಟ್ಟು ಮತ್ತಿಷ್ಟು ತಲೆಗೇರಿತು. ಕೂಡಲೆ ಅವನು ಒಂದು ಸಾರೆ ಅವನನ್ನು ಒದೆದು—ಏ ಮೂರ್ಖ, ಯಾಕೆ ಸುಮ್ಮನೆ ಬೊಗಳುತ್ತೀ? ಏನಾಯಿತು? ಚನ್ನಾಗಿ ಹೇಳಲಿಕ್ಕೆ ಬರುವದಿಲ್ಲೇನು? ಎಂದು ಗದ್ದರಿಸಿದನು.

ಅಬದುಲ್ಲನಿಗೆ ಸುಮ್ಮನೆ ಮಾತುಬೆಳಿಸಿ ಆಡುವ ರೂಢಿಯಾಗಿತ್ತು. ಅವನ ವ್ಯರ್ಥವಾದ ಮಾತುಗಳು ಮುಗಿಯದ್ದರಿಂದ ದಿಲೇರಖಾನನು ಬೇಸತ್ತು ಅವನ ಕೆನ್ನೆಯ ಮೇಲೆ ಒಂದು ಪೆಟ್ಟುಕೊಟ್ಟು ಅವನನ್ನು ನೆಲಕ್ಕೆ ಕೆಡವಿ ಮತ್ತೊಮ್ಮೆ ಕಾಲಿನಿಂದ ಒದ್ದನು. ಆಗ ಅಬದುಲ್ಲನು ಎಚ್ಚತ್ತು—ಸರಕಾರ ಹೇಳುತ್ತೇನೆ. ಕೇಳಿರಿ. ನಿಮ್ಮ ಮಗಳಾದ ನೂರಎಲ್‌ಹುದಾ ಇವಳನ್ನು ಮರಾಟರು ಒ--ಒ-ಒಯ್ದರು.

ಈ ಶಬ್ದವನ್ನು ಕೇಳಿದ ಬಳಿಕಂತೂ ದಿಲೇರಖಾನನಿಗೆ ಎಚ್ಚರವೇ ತಪ್ಪಿತು. ಸಿಟ್ಟಿನ ಭರದಲ್ಲಿ ಅಬದುಲ್ಲಾನನ್ನು ಕೊಂದು ಹಾಕಬೇಕೆಂದು ಕತ್ತಿಯನ್ನು ನೆಗವಲು ಕಿರಾತಸಿಂಗನು ಮುಂದೆಬಂದು, ಅವನ ಕೈಹಿಡಿದು—ಛೀ! ಛೀ! ತಮ್ಮಂಥ ಶೂರ ಪುರುಷರ ಕತ್ತಿಯು ಈ ಕ್ಷುದ್ರ ಖೊಜ್ಜೆಯ ಮೇಲೆ ಬೀಳುವದು ಸರಿಯಲ್ಲ. ಈ ನಮ್ಮ ಅವಿಚಾರದ ತಪ್ಪಿನ ಫಲವನ್ನು ಈತನು ಅನುಭವಿಸಬೇಕೆ?

ಎಂದು ಮಾತಾಡುತ್ತ ಅಬದುಲ್ಲಾನಿಗೆ ಕಣ್ಣಸನ್ನೆಯನ್ನು ಮಾಡಿ ಕಾಲಿನಿಂದ ಒದೆದು,—ಎಲಾ ಏಳು, ನಿಮ್ಮ ಒಡೆಯನಿಂದ ಯಾಕೆ ಪ್ರಾಣಕ್ಕೆ ಎರವಾಗುತ್ತೀ? ಹೋಗು, ಇಲ್ಲಿಂದ ಹೊರಟು ಹೋಗು, ಎಂದು ನುಡಿದನು. ಅಬದುಲ್ಲಾನಿಗೂ ಅಷ್ಟೇ ಬೇಕಾಗಿತ್ತು. ಕೂಡಲೆ ಅವನು ಅಲ್ಲಿಂದ ಹೊರಟು ಹೋದನು. ಭಯಂಕರವಾದ ಈ ಅಪಮಾನದಿಂದ ದಿಲೇರಖಾನನ ಸೊಂಡೆಯೊಣಗಿತು. ಅವನಿಗೆ ವಿಲಕ್ಷಣವಾದ ಸಂತಾಪವುಹುಟ್ಟಿ ಈಗಲೇ ಎಲ್ಲ ಮರಾಟರನ್ನು ನರಿನಾಯಿಗಳಿಂದ ತಿನ್ನಿಸಲಾ, ಏನು ಮಾಡಲಿ? ಎಂದು ಅವನು ಕರಕರನೆ ಹಲ್ಲುತಿನ್ನಹತ್ತಿದನು. ಮರಾಟರು ದಿಲೇರಖಾನನ ಛಾವಣಿಯೊಳಗಿನ ಖಜಾನೆಯನ್ನು ಹೊತ್ತಿದ್ದರು. ಆಹಾರ ಸಾಮುಗ್ರಿಗಳನ್ನು ಹಾಳು ಮಾಡಿದ್ದರು. ಹುಲ್ಲಿನ ಬಣವಿಗೆ ಬೆಂಕಿ ಹಚ್ಚಿದ್ದರು. ಇದರ ಹೊರತು ಯಾವ ಮನುಷ್ಯರಿಗೂ ಧಕ್ಕಿತಗಲಿದ್ದಿಲ್ಲ; ಅವರು ಹೆಂಗಸರ ಉಸಾಬರಿಗೆ ಹೋಗಿದ್ದಿಲ್ಲ. ಜನಾನಖಾನೆಯಲ್ಲಿ ಹೊಕ್ಕ ಜನರು ನೂರಎಲ್‌ಹುದಾ ಇವಳನ್ನು ಮಾತ್ರ ಎತ್ತಿಕೊಂಡು ಹೋಗಿದ್ದರು.

ಅವಳು ಲೋಕೋತ್ತರ ಸುಂದರಿಯಾಗಿದ್ದು, ತಂದೆಗೆ ಜೀವಕ್ಕಿಂತಲೂ ಹೆಚ್ಚು ಪ್ರಿಯಳಾಗಿದ್ದಳು ಆಕೆಗೆ ಹದಿನಾರು ವರ್ಷಗಳು ತುಂಬಿದ್ದವು. ಬಾದಶಹನ ಕೂಡ ಬೀಗತನವನ್ನು ಮಾಡಬೇಕೆಂದು ದಿಲೇರಖಾನನ ಮನಸ್ಸಿನಲ್ಲಿ ಇತ್ತು. ನೂರಎಲ್‌ಹುದಾ ಇವಳ ಸೌಂದರ್ಯದಿಂದ ಅದು ಅಶಕ್ಯವೂ ಇದ್ದಿಲ್ಲ. ಆದರೆ ನಡುವೇ ಎದ್ದ ಈ ಗೊಂದಲದಿಂದ ಅವನ ಮನೋರಾಜ್ಯವು ಮುರಿದು ಹೋಯಿತು. ಆಗ ವನು ನಿರ್ವಿಣ್ಣನಾಗಿ ಡೇರೆಯ ತನಕ ಬಂದು ಉಸ್ಸೆಂದು ಕುಳಿತು ಬಿಟ್ಟನು. ಅವನಿಗೆ ಜಗತ್ತೆಲ್ಲ ಶೂನ್ಯವಾಗಿ ತೋರಹತ್ತಿತು. ತನ್ನ ಮಗಳನ್ನು ಎಲ್ಲಿಗೆ ಒಯ್ದಿರಬಹುದು? ಈಗ ಅವಳು ಎಲ್ಲಿ ಇರಬಹುದು? ಎಂಬ ಚಿಂತೆಯಲ್ಲಿಯೇ ಅವನು ಮುಳುಗಿದ್ದನು. ಬಳಿಕ ಆತನು ಒಂದು ದೀರ್ಘಶ್ವಾಸವನ್ನು ಬಿಟ್ಟು ಸ್ವಲ್ಪ ಧೈರ್ಯತಾಳಿ, ತನ್ನ ಮಗಳನ್ನು ಹುಡುಕಿಸುವದಕ್ಕಾಗಿ ನೂರು ನೂರು ಜನರ ಒಂದೊಂದು ಗುಂಪನ್ನು ಬೇರೆ ಬೇರೆ ದಿಕ್ಕಿಗೆ ಅಟ್ಟಿದನು. ಕಿರಾತಸಿಂಗನು ಇದನ್ನೆಲ್ಲ ನೋಡುತ್ತ ಅವನ ಬಳಿಯಲ್ಲಿಯೇ ಇದ್ದನು. ಆಗ ಕಿರಾತಸಿಂಗನು—ಸರಕಾರ, ನಿಮ್ಮ ಮಗಳನ್ನು ಮಹಾರಾಷ್ಟ್ರರು ಕೋಟೆಯಲ್ಲಿ ಒಯ್ದು ಇಟ್ಟಿರುವರು. ಸುಮ್ಮಸುಮ್ಮನೆ ನಾಲ್ಕು ದಿಕ್ಕಿಗೆ ಜನರನ್ನು ಓಡಿಸಿದರೆ ಏನು ಪ್ರಯೋಜನವಾಗುವದು? ಎಂದು ಸೂಚಿಸಿದನು. ಅದಕ್ಕೆ ದಿಲೇರಖಾನನು ಒಳ್ಳೇ ಸಿಟ್ಟಾಗಿ—"ಮೂರ್ಖಾ, ಯಾಕೆ ಸುಮ್ಮನೆ ಬಡಬಡಿಸುತ್ತೀ?

ನನ್ನ ಮಗಳ ಶೋಧಮಾಡಿಕೊಂಡು ಬಂದರೇ ನಿನ್ನ ವಿಷಯವಾಗಿ ನನ್ನ ಮನಸಿನಲ್ಲಿ ಆದರವು ಉತ್ಪನ್ನವಾಗಬಹುದು. ಇಲ್ಲವಿದ್ದರೆ ನನ್ನ ಸುದ್ದಿಗಳನ್ನು ಜಯಸಿಂಗನಿಗೂ, ಜಯಸಿಂಗನ ಸುದ್ದಿಗಳನ್ನು ನನಗೂ ಹೇಳುವದರ ಹೊರತು ನಿನ್ನಲ್ಲಿ ಹೆಚ್ಚಿನ ಕರ್ತೃತ್ವಶಕ್ತಿಯು ಇಲ್ಲೆಂದು ನಾನು ತಿಳಿಯುತ್ತೇನೆ'' ಎಂದು ಅವನ ಮನಸಿಗೆ ಹತ್ತುವಂತೆ ಮಾತಾಡಿದನು.

ಈ ಉಪರೋಧಿಕವಾದ ಮಾತುಗಳನ್ನು ಕೇಳಿ ಕಿರಾತಸಿಂಗನಿಗೆ ಸಿಟ್ಟು ಬಂತು; ಆದರೂ ಅವನು ವಿಚಾರದಿಂದ ತಡಕೊಂಡು ತನ್ನ ಮನಸ್ಸಿನಲ್ಲಿಯೇ, ದಿಲೇರಖಾನನು ನನಗೆ ಹೀಗೆ ಮಾತಾಡಿದನು. ಈ ಕಾಲಕ್ಕೆ ಇವನ ಮನಸ್ಸು ಸ್ವಸ್ಥವಾಗಿಲ್ಲ. ಇತ್ತ ಮರಾಟರು ಇವನನ್ನು ಮೋಸಗೊಳಿಸಿದ್ದೊಂದು ದುಃಖ, ಮಗಳನ್ನು ಕದ್ದುಕೊಂಡು ಹೋದದ್ದು ಮತ್ತೊಂದು ದುಃಖ; ಹೀಗೆ ಅತ್ಯಂತ ದುಃಖವಾದ್ದರಿಂದ ನನ್ನ ಮೇಲೆ ಹರಿಹಾಯ್ದಿರುವನು. ಆದರೆ ನಾನೂ ಇವನಂತೆ ಸಿಟ್ಟಾಗುವದು ಒಳ್ಳೇದಲ್ಲ, ಎಂದು ಆಲೋಚಿಸಿ—ದಿಲೇರಖಾನ, ನಿಮ್ಮ ಈ ಮರ್ಮಭೇದಕವಾದ ಮಾತಿಗೆ ನಾನು ನಿಮ್ಮ ಮೇಲೆ ಸಿಟ್ಟಾಗುವದಿಲ್ಲ; ಮುಂದೆ ನಿಮ್ಮ ಮಗಳ ಶೋಧವನ್ನು ಹಚ್ಚಿದರೆ ನಾನೇ ಹಚ್ಚತಕ್ಕವನೆಂದು ತಿಳಿಯಿರಿ. ಸದ್ಯಕ್ಕೆ ನಿಮ್ಮ ಮನಸು ಶಾಂತವಾಗಿಲ್ಲ. ಈಗ ನಾನು ಹೋಗುತ್ತೇನೆ, ಎಂದು ಹೇಳಿ ಅಲ್ಲಿಂದ ಹೊರಟನು.

ದಿಲೇರಖಾನನಿಂದ ಕಳಿಸಲ್ಪಟ್ಟ ಜೋಳಿಯವರು ದೂರದೂರದ ತನಕ ಹೋಗಿ ಕೈಬೀಸುತ್ತ ತಿರುಗಿ ಬಂದರು. ಅವರಿಂದ ಖಾನನ ಮಗಳ ಶೋಧವಾಗಲಿಲ್ಲ. ಮರಾಟರು ಅವಳನ್ನು ತಮ್ಮ ಕೋಟೆಯಲ್ಲಿಯೇ ಒಯ್ದು ಇಟ್ಟಿರಬಹುದೆಂದು ಜನರು ತರ್ಕಿಸಿದರು.

ಇತ್ತ ಕಿರಾತಸಿಂಗನು ದಿಲೇರಖಾನನ ಬಳಿಯಿಂದ ಹೊರಬಿದ್ದವನು ನೆಟ್ಟಗೆ ತನ್ನ ಛಾವಣಿಯ ಕಡೆಗೆ ನಡೆದನು. ಅವನು ಕೆಲವು ಅಂತರವನ್ನು ಕ್ರಮಿಸಿದ ಮೇಲೆ ಒಂದು ಗಿಡದಮರೆಗೆ ನಿಂತುಕೊಂಡಿದ್ದ ಒಬ್ಬ ಸಿದ್ದೀಜಾತಿಯ ಮನುಷ್ಯನು ಓಡಿಬಂದು ಕಿರಾತಸಿಂಗನಿಗೆ ಕೈಮುಗಿದುಕೊಂಡು—ಜೀಯ್ಯಾ, ಇಂದು ನೀವು ನನಗೆ ಪ್ರಾಣದಾನಮಾಡಿದ್ದನ್ನು ನಾನು ಮರೆಯಲಾರೆನು. ನಿಮಗೆ ನಾನು ಅಭಿವಚನ ಕೊಟ್ಟ ಪ್ರಕಾರ ಯಾವತ್ತು ಕಾರ್ಯಗಳನ್ನು ಗುಪ್ತವಾಗಿ ಜರುಗಿಸಿರುತ್ತೇನೆ. ಮಹಾರಾಷ್ಟ್ರರ ಗದ್ದಲವು ಎದ್ದ ಸಂಧಿಯನ್ನು ಸಾಧಿಸಿ, ಮೊದಲೇ ಆಲೋಚನೆ ಮಾಡಿದ ಮೇರೆಗೆ ನಮ್ಮ ಕಾರ್ಯವನ್ನು ಸಾಧಿಸಿ

ಹೆವು, ಎಂದು ನುಡಿಯಲು, ಅದನ್ನು ಕೇಳಿ—

ಕಿರಾತಸಿಂಗನು—ಎಲೆ ಎಲೇ ಅಬ್ದುಲ್ಲಾ, ಎಷ್ಟು ಒದರಿ ಮಾತಾಡು ತ್ತೀಯೋ? ಛೀ ನಿನ! ಯಾರಾದರೂ ಕೇಳಿಗೀಳಿಯಾರು? ಸ್ವಲ್ಪ ಸಾವಕಾಶ ಮಾತಾಡು.

ಅಬದುಲ್ಲ—ಏನು ಧನಿಯರೇ, ಇಲ್ಲಿ ಹೊರಗಿನವರು ಯಾರು ಇರುವರು? ಎಲ್ಲರೂ ನಿಮ್ಮವರೇ ಅಲ್ಲವೇ? ಇವರ ಮೇಲೆ ಸಂಬಿಗೆ ಇಡದಿದ್ದರೆ ಹ್ಯಾಗೆ?

ಕಿರಾತಸಿಂಗ—ಅಬದುಲ್ಲಾ, ಎಲ್ಲಿಯ ನಂಬಿಗೆ? ತನ್ನ ಕಾರ್ಯವು ಸಾಧಿಸುವ ತನಕ ಎಲ್ಲರೂ ಸಂಬಿಗಸ್ತರೇ; ಈಗ ನಿನ್ನದೇ ಒಂದು ಉದಾಹರಣವನ್ನು ತಕ್ಕೊಳ್ಳೋಣ. ನನ್ನ ಕೂಡ ನೀನು ನಂಬಿಗೆಯಿಂದ ನಡದೆ; ಆದರೆ ನಿನ್ನ ಒಡೆಯನಿಗೆ ನೀನು ಅಪನಂಬಿಗೆಯನ್ನು ತೋರಿಸಿದಂತಾಗಲಿಲ್ಲವೇ? ಆದಕಾರಣ ನಂಬಿಗೆಯ ಮಾತು ಆಡಬೇಡ. ಒದರಿ ಮಾತಾಡಿದರೆ ಈ ನಮ್ಮ ಸಂಗಡಿಗರಲ್ಲಿ ಯಾರಿಗಾದರೂ ಈ ಸುದ್ದಿಯು ಗೊತ್ತಾಗಿ ಅವರು ಅದನ್ನು ತಮ್ಮ ಕಾರ್ಯಸಾಧಿಸಿಕೊಳ್ಳಲಿಕ್ಕೆ ಉಪಯೋಗಿಸಿಕೊಂಡಾರು. ಒಳ್ಳೇ ಸಾಹಸಮಾಡಿ ಹಿಡಿದು ತಂದ ಪಕ್ಷಿಯು ಒಮ್ಮೆ ನಮ್ಮ ಪಂಜರದಲ್ಲಿ ಬಿದ್ದ ಒಳಿಕ ಮುಂದೆ ಎಷ್ಟು ದೊಬ್ಬಾಟವಾದರೂ ಅಡ್ಡಿಯಿಲ್ಲ.

ಅಬದುಲ್ಲ:—ಖಾವಿಂದ, ನೀವು ಹೇಳುವ ಮಾತು ನಿಜವು. ಬೇಗನೆ ಮುಂದಿನ ಕಾರ್ಯದ ಸಿದ್ಧತೆಯನ್ನು ಮಾಡಿ ನನ್ನನ್ನು ಇದರೊಳಗಿಂದ ಮುಕ್ತ ಮಾಡಿರಿ.

ಈ ಪ್ರಕಾರ ಅವರಿಬ್ಬರ ಭಾಷಣವಾಗಲು ಕಿರಾತಸಿಂಗನು ತನ್ನ ಸಂಗಡಿಗರಲ್ಲಿ ಒಬ್ಬನ ಕಿವಿಯೊಳಗೆ ಏನೇನೋ ಹೇಳಿದನು. ಅವನು ತನ್ನ ಜೂಂಕಕ್ಕೆ ಕಟ್ಟಿದ್ದ ಕೊಂಬನ್ನು ಊದಲು ಅರ್ಧಗಳಿಗೆಯಲ್ಲಿ ಐವತ್ತು ಮಂದಿ ಕುದುರೆಯ ರಾಹುತರದೊಂದು ಟೋಳಿಯು ಅಲ್ಲಿಗೆ ಬಂದಿತು. ಅವರೊಳಗಿನವನೊಬ್ಬನು ಮುಂದೆ ಬಂದು ಕಿರಾತಸಿಂಗನಿಗೆ ಒಳ್ಳೇ ನಮ್ರಭಾವದಿಂದ ಸಲಾಮುಮಾಡಿ— ಒಡೆಯರೇ, ನಿಮ್ಮ ಹೇಳಿಕೆಯ ಪ್ರಕಾರ ಎಲ್ಲ ತರದ ಸಿದ್ಧತೆಯನ್ನು ಮಾಡಿಕೊಂಡು ಬಂದಿದ್ದೇನೆ; ಅಪ್ಪಣೆಯಾಗಬೇಕು, ಎಂದು ನುಡಿದನು.

ಆಗ ಕಿರಾತಸಿಂಗನು ಅವನನ್ನು ಹತ್ತರ ಕರೆದು ಅವನ ಕಿವಿಯಲ್ಲಿ ಏನೇನೋ ಹೇಳಿದನು. ಅದಕ್ಕೆ ಅವನು ಗೋಣು ಅಲ್ಲಾಡಿಸಿ, ನಿಮ್ಮ ಹುಕುಮನ್ನು ಅಕ್ಷರಶಃ ಪಾಲಿಸುತ್ತೇನೆಂದು ಒಪ್ಪಿಕೊಂಡನು. ಆ ಒಳಿಕ ಆ ಸ್ವಾರನು ಅಬ

ದುಲ್ಲಾನ ಕಡೆಗೆ ತಿರುಗಿ:—ಮಹಾರಾಜರು ನಮ್ಮನ್ನು ನಿನ್ನ ಅಂಕಿತದೊಳಗೆ ಕೊಡುವರು; ನೀನು ಹೇಳಿದಂತೆ ನಾವು ನಡೆಯುವೆವು; ನೀನು ಹೋದಲ್ಲಿಗೆ ಬರುವೆವು, ಎಂದು ಹೇಳಿದನು. ಆ ಬಳಿಕ ಆ ರಾಹುತರೂ, ಅಬದುಲ್ಲಾನೂ ಅಲ್ಲಿಂದ ಹೊರಟು ಹೋದರು.

ಇಷ್ಟಾದ ಬಳಿಕ ಕಿರಾತಸಿಂಗನು ತನ್ನ ಛಾವಣಿಗೆ ಬಂದು ಅತ್ತ ಇತ್ತ ತಿರುಗಾಡಿ ವಿಶೇಷ ಸಂಗತಿಗಳೇನೂ ನಡೆದಿರುವದಿಲ್ಲೆಂಬದನ್ನು ಅರಿತುಕೊಂಡನು. ಬಳಿಕ ನಾಲ್ಕೈದು ದಿವಸಗಳನ್ನು ಬಿಟ್ಟು ಮತ್ತೆ ಏನೇನೋ ಸಜ್ಜುಮಾಡಿಕೊಂಡು, ಅಲ್ಲಿಂದ ಜಯಸಿಂಗನ ಛಾವಣಿಯ ಕಡೆಗೆ ಹೊರಟನು. ಸ್ವಲ್ಪ ಹೊತ್ತಿನಲ್ಲಿ ಅವನು ಜಯಸಿಂಗನ ಡೇರೆಗೆ ತಪ್ಪಿದನು; ಮತ್ತು ಒಳ್ಳೇ ಅವಸರದ ಕಾರ್ಯ ನಿಮಿತ್ತವಾಗಿ ಬಂದಿರುವೆನೆಂದು ಹೇಳಿಕಳಿಸಿದನು. ಅದನ್ನು ಕೇಳಿ ಜಯಸಿಂಗನಿಗೆ ಸಿಟ್ಟು ಬಂತು; ಆದರೂ ಅವನು ಸಮಾಧಾನತಾಳಿ ಕಿರಾತಸಿಂಗನನ್ನು ಒಳಗೆ ಕರೆಯಿಸಿಕೊಂಡನು ಅವನು ಒಳಗೆ ಬಂದಕೂಡಲೆ ಜಯಸಿಂಗನಿಗೆ ಮಾತಾಡಲಿಕ್ಕೆ ಆಸ್ಪದಕೊಡದೆ ತಾನೇ ಹುಬ್ಬುಗಂಟಿಕ್ಕಿ ಒಳ್ಳೇ ಆವೇಶದಿಂದ—ಸರಕಾರ, ನಾನು ನಿಮ್ಮಪ್ಪಣೆಯಂತೆ ನಡೆಯತಕ್ಕದ್ದೋ, ಅಥವಾ ದಿಲೇರಖಾನನ ಅಪ್ಪಣೆಯಂತೆ ನಡೆಯಬೇಕೋ? ಒಮ್ಮೆ ಖಂಡಿತವಾಗಿ ತಿಳಿಸಿದರೆ ಒಳ್ಳೇದಾಗುವದು; ಯಾಕಂದರೆ ಆಗಾಗ್ಗೆ ಅವರು ನನ್ನನ್ನು ಕರೆಕಳುಹುವರು. ನಿನ್ನಿನ ದಿವಸ ನಾನು ಇಲ್ಲಿಂದ ಮನೆಗೆ ಹೋಗುವಷ್ಟರಲ್ಲಿ ಅಲ್ಲಿಂದ ಮನುಷ್ಯನು ಬಂದಿದ್ದನು. ನಾನು ಅಲ್ಲಿಗೆ ಹೋದಕೂಡಲೆ—ಏನು, ಶಿವಾಜಿಯ ಸಂಗಡ ಒಡಂಬಡಿಕೆಯ ಸಂಧಾನವು ನಡೆದಿರುವದಂತೆ. ನೀವೂ ಅವನೂ ಕೂಡಿ ನನಗೆ ಅಫಝುಲಖಾನನ ಅವಸ್ಥೆಯನ್ನೇ ತರುವಿರೋ? ಆದರೆ ನಾನು ಮಾತ್ರ ಮೋಸಹೋಗುವವನಲ್ಲೆಂದು ಜಯಸಿಂಗರಾಜನಿಗೆ ತಿಳಿಸಿರಿ. ನೀವು ಒಡಂಬಡಿಕೆಯನ್ನು ಮಾಡಿಕೊಳ್ಳುತ್ತೀರೆಂಬ ಸಂಗತಿಯು ನನ್ನ ಕಿವಿಗೆ ಬಿದ್ದ ಕೂಡಲೆ ನಾನು ಒಮ್ಮೆಲೆ ನಿಮ್ಮನ್ನು ಕೈಸೆರೆಹಿಡಿಯುವೆನು, ಎಂದು ದಿಲೇರಖಾನನು ನಾಲ್ಕುಮಂದಿಯ ಮುಂದೆಯೇ ಆಡಿ ತೋರಿಸಿದನು; ಮತ್ತು ಇದೊಂದು ಲಖೋಟಿಯನ್ನು ನನ್ನ ಕಡೆಗೆ ಕೊಟ್ಟು ಇದನ್ನು ಈಗಿಂದೀಗಲೇ ಔರಂಗಾಬಾದಕ್ಕೆ ತಲುಪಿಸಬೇಕೆಂದು ಆಜ್ಞಾಪಿಸಿರುವನು. ಜಯಸಿಂಗರಾಜನ ಅಪ್ಪಣೆಯ ಹೊರತು ನಾನು ಹೋಗುವದಿಲ್ಲೆಂದು ಖಂಡಿತವಾಗಿ ಹೇಳಿ ತಮ್ಮ ಅಪ್ಪಣೆಯನ್ನು ಕೇಳುವದಕ್ಕಾಗಿ ಇಲ್ಲಿಗೆ ಬಂದೆನು.

ಖಾನನು ಕರೆಕಳುಹಿಸಿದಾಗ ನನ್ನನ್ನು ಕೇಳಿ ಯಾಕೆ ಅವನ ಕಡೆಗೆ ಹೋಗ

ಲಿಲ್ಲ? ಅವನ ಕಡೆಗೆ ಹೋಗಿ ಲಖೋಟಿಯನ್ನು ತಕ್ಕೊಂಡು ಈಗ ಕೇಳಲಿಕ್ಕೆ ಬಂದಿರುವೆ? ಇಲ್ಲಿಯೇ ತಪ್ಪಾಯಿತು. ಒಳ್ಳೇದು, ಆ ಲಖೋಟಿಯನ್ನು ಯಾರಿಗೆ ಮುಟ್ಟಿಸಬೇಕಾಗಿರುವದು?

ಕಿರಾತಸಿಂಗ:—ಅದು ಮೋಹರಬಂದ ಇರುವದು. ಅದನ್ನು ಒಡೆಯುದ ಹೊರತು ಏನೂ ತಿಳಿಯುವಂತಿಲ್ಲ. ಯಾರಿಗೆ ಕೊಡಬೇಕೆಂದನ್ನು ಬೇಕಾದರೆ ಹೇಳುತ್ತೇನೆ.

ಜಯಸಿಂಗ:—ಹೇಳು, ಹೇಳು, ಬೇಗನೆ ಹೇಳು. ಕಿರಾತಸಿಂಗನು ಅವನ ಕಿವಿಯಲ್ಲಿ ಏನೋ ಹೇಳಿದನು. ಅದರಿಂದ ಜಯಸಿಂಗನ ಮನಸಿನಲ್ಲಿ ಏನೋ ಹೊಸವಿಚಾರಗಳು ಬಂದಂತೆ ಮುಖಮುದ್ರೆಯಮೇಲೆ ಒಡೆದು ಕಾಣಿಸಿತು. ಆ ಬಳಿಕ ಅವನು ಕಿರಾತಸಿಂಗನನ್ನು ಕುರಿತು—ಒಳ್ಳೇದು ಈ ಲಖೋಟಿಯನ್ನು ಯಾರಿಗೆ ಕೊಡಲಿಕ್ಕೆ ಹೇಳಿರುವನೋ ಅವರಿಗೆ ಒಯ್ದುಕೊಡು, ಆದರೆ ಇದರಲ್ಲಿ ಏನು ಬರೆದದೆ? ಎಂಬದನ್ನು ಮಾತ್ರ ನನಗೆ ಮರೆಯದೆ ಹೇಳು ನಿನ್ನ ಮೇಲೆ ನನ್ನ ವಿಶ್ವಾಸವು ಎಷ್ಟಿರುವದೆಂಬದು ನಿನಗೆ ಗೊತ್ತೇ ಇರುವದು.

"ಒಳ್ಳೇದು" ಎಂದು ಕಿರಾತಸಿಂಗನು ಅಲ್ಲಿಂದ ಎದ್ದನು. ಆಗ ಅವನ ಮುಖಮುದ್ರೆಯ ಮೇಲೆ ಹಾಸ್ಯವು ಒಡೆದು ಕಾಣಿಸುತ್ತಿತ್ತು. ಜಯಸಿಂಗನು ಅದನ್ನು ಕಂಡು ನಗೆಯ ಕಾರಣವನ್ನು ಕೇಳಿದನು. ಕಿರಾತಸಿಂಗನಿಗೂ ಅಷ್ಟೇ ಬೇಕಾಗಿತ್ತು. ಅವನು ಕೂಡಲೆ ಕೈಮುಗಿದು:-ಸರಕಾರ, ಕ್ಷಮಿಸಿರಿ. ನಿಮ್ಮ ಕ್ಷಮೆ ಇದ್ದರೆ ನನ್ನ ನಗೆಯ ಕಾರಣವನ್ನು ಹೇಳುತ್ತೇನೆ, ಎನಲು, ಜಯಸಿಂಗನು:—ಒಳ್ಳೇದು ಹೇಳು, ಎಂಬರ್ಥದಿಂದ ಗೋಣು ಅಲ್ಲಾಡಿಸಿದನು. ಆ ಬಳಿಕ ಕಿರಾತಸಿಂಗನು ದಿಲೇರಖಾನನ ಛಾವಣಿಯಲ್ಲಿ ಮರಾಟರು ಎಬ್ಬಿಸಿದ ಗೊಂದಲದ ಸಮಗ್ರ ವೃತ್ತಾಂತವನ್ನು ವಿವರಿಸಿ ಹೇಳಿದನು. ಆ ಗೊಂದಲದಲ್ಲಿ ಖಾನಸಾಹೇಬರ ಚಲುವೆಯಾದ ಮಗಳು ನೂರಉಲ್‌ಹುದಾ ಇವಳು ಇಲ್ಲದಂತಾಗಿರುವಳು, ಎಂದು ಹೇಳಿದನು. ಅದನ್ನು ಕೇಳಿ ಜಯಸಿಂಗನು ಆಶ್ಚರ್ಯಭರಿತನಾಗಿ—ಏನು, ಅವಳನ್ನು ಮರಾಟರು ಒಯ್ದರೆ? ಸುಳ್ಳು, ತೀರ ಸುಳ್ಳು. ಮಹಾರಾಷ್ಟ್ರರು ಪರಸ್ತ್ರೀಯರನ್ನು ಎಂದೂ ಸ್ಪರ್ಶಮಾಡುವದಿಲ್ಲ. ಇಂದಿನವರೆಗೆ ಇಂಥ ಸಂಗತಿಯು ವರ್ತಿಸಿಲ್ಲ. ಅವರ ಅರಸನಾದ ಶಿವಾಜಿಯು ಹಿಡಿದ ಕೆಲಸವಲ್ಲಿ ಯಶ ಬರಲಿಕ್ಕೆ ಇದೊಂದು ಮಹತ್ವದ ಕಾರಣವಿರುತ್ತದೆ ಅವರಿಂದ ಈ ಕೆಲಸವಾಗಿಲ್ಲ. ಇದರಲ್ಲೇನಾದರೂ ಮೋಸವಿರಲಿಕ್ಕೆ ಬೇಕು, ಎಂದು ಅಂದನು.

— —

## ೧೨—ಇವರು ಯಾರಿರಬಹುದು?

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಅಬದುಲ್ಲಾನು ದಿಲೇರಖಾನನ ಮಗಳನ್ನು ಕರಕೊಂಡು ಮುಅಜೀಮನ ಕಡೆಗೆ ಹೊರಟ ಬಳಿಕ ಇತ್ತ ಕಿರಾತ ಸಿಂಗನು ಜಯಸಿಂಗರಾಜನನ್ನು ಮೋಸಗೊಳಿಸುವದಕ್ಕಾಗಿ ಅವನ ಮುಂದೆ ಸುಳ್ಳು ಸುದ್ದಿಗಳನ್ನು ಕೊಚ್ಚುತ್ತಿದ್ದನಷ್ಟೇ? ಆದರೆ ಮಹಾಧೂರ್ತನಾದ ಜಯ ಸಿಂಗನು ಅವನ ಮಾತನ್ನು ನಿಜವೆಂದು ನಂಬಲಿಲ್ಲ. ಶಿವಾಜಿರಾಜನು ಪರಸ್ತ್ರೀ ಯರನ್ನು ಯಾವ ದೃಷ್ಟಿಯಿಂದ ನೋಡುವನೆಂಬದನ್ನೂ, ಅವನ ಸೈನಿಕರು ಅಪ್ಪಿ ತಪ್ಪಿ ಇಂಥ ಅಪರಾಧಗಳಿಗೆ ಒಳಗಾದಲ್ಲಿ ಅವರಿಗೆ ಎಂಥ ಶಿಕ್ಷೆ ಕೊಡುತ್ತಿದ್ದ ನೆಂಬದನ್ನೂ ಜಯಸಿಂಗನು ಪೂರ್ಣವಾಗಿ ಅರಿತಿದ್ದನು. ಒಂದು ಸಮಯದಲ್ಲಿ ತನ್ನ ಕಡೆಯ ಒಬ್ಬ ಸರದಾರನು ಫಿರಂಗೀಜಾತಿಯ ಒಬ್ಬ ಕಿಲ್ಲೇದಾರನ ಬಹು ಚಲುವೆಯಾದ ಮಗಳನ್ನು ಸೆರೆಹಿಡಕೊಂಡು ಬಂದಾಗ ಶಿವಾಜಿಯು ಆ ತರುಣಿ ಯನ್ನು ನೋಡಿ "ನನ್ನ ತಾಯಿಯು ಈ ತರುಣಿಯಂತೆ ರೂಪವತಿಯಾಗಿದ್ದರೆ ನಾನಾದರೂ ಸುಂದರನಾಗಿಯೇ ಹುಟ್ಟುತ್ತಿದ್ದೆನಲ್ಲ!" ಎಂಬ ಉದ್ಗಾರವನ್ನು ತೆಗೆದು, ಆ ಹೆಣ್ಣುಮಗಳನ್ನು ವಸ್ತ್ರಭೂಷಣಗಳಿಂದ ಸತ್ಕರಿಸಿ ಮರ್ಯಾದೆಯಿಂದ ಆಕೆಯನ್ನು ಆಕೆಯ ತಂದೆಯ ಬಳಿಗೆ ಕಳಿಸಿ, ಸೆರೆಹಿಡಿದು ತಂದ ಸರದಾರನನ್ನು ದಂಡಿಸಿದನಂತೆ! ಇಂಥ ಪಾಪಭೀರುವಾದ ಹಾಗು ನೀತಿವಂತನಾದ ಶಿವರಾಜನ ದಂಡಾಳುಗಳು ದಿಲೇರಖಾನನ ಮಗಳನ್ನು ಒಯ್ದದ್ದು ನಿಜವೆಂದು ಜಯಸಿಂ ಗನು ಹ್ಯಾಗೆ ನಂಬಿಯಾನು? ಆಗ ಕಿರಾತಸಿಂಗನು ಇಲ್ಲಿ ತನ್ನ ಆಟವು ನಡೆಯ ದೆಂದು ತಿಳಿದು ದಿಲೇರಖಾನನ ಪತ್ತೆದ ವ್ಯವಸ್ಥೆಗಾಗಿ ಜಯಸಿಂಗರಾಜನಿಂದ ಅಪ್ಪಣೆ ಪಡೆದು ಅಲ್ಲಿಂದ ತಟ್ಟನೆ ಹೊರಟನು.

ಹೀಗೆ ಜಯಸಿಂಗರಾಜನಲ್ಲಿ ಸಟೆ ಮಾತಾಡಿ ಹೊರಟ ಕಿರಾತಸಿಂಗನು ಸಂಗಡ ೩೦ ಜನ ನಂಬಿಗಸ್ಥರಾದ ಸೇವಕರನ್ನು ಕರಕೊಂಡು ಅಬದುಲ್ಲಾನನ್ನು ಕೂಡಿಕೊಳ್ಳುವದಕ್ಕಾಗಿ ಉತ್ತರದಿಂದ ನಡೆದನು ಔರಂಗಜೇಬನ ಪ್ರಿಯಪುತ್ರ ನಾದ ಮುಅಜೀಮನಿಗೆ ಸೆರೆಸಿಕ್ಕ ದಿಲೇರಖಾನನ ಮಗಳನ್ನು ತಾನೇ ತನ್ನ ಕೈ ಮುಟ್ಟಿ ಸಮರ್ಪಿಸಿ, ಅವನ ಪ್ರೀತಿಗೆ ಪಾತ್ರನಾಗಬೇಕೆಂದು ಕಿರಾತಸಿಂಗನು ಇಚ್ಛಿಸುತ್ತಿದ್ದನು; ಆದರೆ ಒಮ್ಮೊಮ್ಮೆ ಹೀಗೆ ಮಾಡಿದಲ್ಲಿ ನನ್ನ ಮೋಸತನವು

ದಿಲೇರಖಾನನಿಗೆ ಗೊತ್ತಾಗಿ ಎಲ್ಲಿ ಅನರ್ಥವಾಗುವದೋ ಎಂದು ಚಡಪಡಿಸುತ್ತಿದ್ದನು. ಅವನು ಹೀಗೆ ಯಾವದನ್ನೂ ನಿರ್ಧರಿಸಿಕೊಳ್ಳಲಸಮರ್ಥನಾಗಿ ದಾರಿಯನ್ನು ಕ್ರಮಿಸುತ್ತಿರಲು, ಅಬದುಲ್ಲಾನು ಹಾದಿಯಲ್ಲಿಯೇ ಅವನಿಗೆ ಕೂಡಿದನು. ಆಗ ಕಿರಾತಸಿಂಗನು ಸಂತೋಷಪಟ್ಟು ಅವನೊಡನೆ ಪ್ರಯಾಣ ಬೆಳಿಸಿದನು. ಇಷ್ಟು ಸಾಹಸಮಾಡಿ ಸೆರೆಹಿಡಿದಿದ್ದರೂ ಇದುವರೆಗೆ ನೂರಎಲ್‌ಹುದಾ ಇವಳನ್ನು ನಾನು ನೋಡಲಿಲ್ಲವಲ್ಲ! ಎಂದು ಯೋಚಿಸಿ, ಅವನು ಒಂದು ದಿನ ಅಬದುಲ್ಲಾನಿಗೆ ಆಕೆಯ ದರ್ಶನವನ್ನು ಮಾಡಿಸೆಂದು ಹೇಳಿದನು. ಅಬದುಲ್ಲನು ವಿಲಕ್ಷಣ ಸ್ವಭಾವದವನಾಗ್ದರಿಂದ ಈ ವಿಷಯದಲ್ಲಿ ಅವನು ಕಿರಾತಸಿಂಗನ ಮಾತನ್ನು ಕೇಳದೆ ಅವನನ್ನು ತಿರಸ್ಕರಿಸಿ—"ಕಿರಾತಸಿಂಗ, ನಿನಗೇನು ಹುಚ್ಚು ಹಿಡಿಯಿತೇನು? ಮುಸಲ್ಮಾನರ ಸಲುವಾಗಿ ಒಯ್ಯುವ ಎಡೆಯನ್ನು ನೀನು ಹೀಗೆ ನಿನ್ನ ಪಾಪದೃಷ್ಟಿಯಿಂದ ಎಂಜಲಿಗೆ ಮಾಡಿದೆಯೆಂದರೆ, ಮುಂದೆ ನಿನ್ನ ಗತಿಯೇನಾದೀತೆಂಬದನ್ನು ಅರಿಯೆಯಾ? ಇಂಥ ಕೆಲಸಕ್ಕೆ ನೀನು ಕೈಹಾಕುವದು ಸರಿಯಲ್ಲ. ನೂರಎಲ್‌ಹುದಾಳಂಥ ಸುಂದರಿಯ ದರ್ಶನದಿಂದ ನಿನ್ನ ಮನಸ್ಸು ಕೊಸರಿಕೊಂಡು ಹೋಗಿ ನಿನ್ನನ್ನು ಮೃತ್ಯುಮುಖದಲ್ಲಿ ಕೆಡವಿಬಿಟ್ಟೀತು. ನಾನು ನಿನ್ನನ್ನು ಎಲ್ಲ ಅನರ್ಥಗಳಿಂದ ಉಳಿಸಿಕೊಳ್ಳಬೇಕೆಂದು ನೂರಎಲ್‌ಹುದಾಳಿಗೆ—"ನಿನ್ನನ್ನು ಮರಾಟರೇ ಸೆರೆಹಿಡಿದಿರುತ್ತಾರೆ"ಂದು ಹೇಳಿದ್ದೇನೆ. ಇದರಿಂದ ದಿಲೇರಖಾನನು ಸಹ ಮುಂದೆ ನಿನ್ನ ಮೇಲೆ ಸಿಟ್ಟಾಗುವದಿಲ್ಲ ಕಂಡಿಯಾ? ಎಂದು ಆತನು ಬೋಧಿಸುತ್ತಿರಲು, ಕಿರಾತಸಿಂಗನ ಮೋಡಿಮನಸ್ಸು ನೂರಎಲ್‌ಹುದಾಳ ದರ್ಶನಾಭಿಲಾಷೆಯನ್ನು ಹೊಕ್ಕು ಹೊಕ್ಕು ಬರಹತ್ತಿತು. ಅಬದುಲ್ಲಾನು ಕಿರಾತಸಿಂಗನ ಮನಸ್ಸು ಹೊಯ್ದಾಡುವದನ್ನು ತಿಳಿದು, ಇವನು ಏನಾದರೂ ಅನರ್ಥ ಮಾಡಬಹುದೆಂದು ಬಗೆದು, ನೂರಎಲ್‌ಹುದಾಳನ್ನು ಬಹು ಎಚ್ಚರದಿಂದ ಕಾಯಹತ್ತಿದನು.

ಈ ಮೇರೆಗೆ ಅವರಿಬ್ಬರು ಪರಿವಾರದೊಡನೆ ಔರಂಗಾಬಾದದ ಕಡೆಗೆ ಸಾಗಿರಲು, ಒಂದು ದಿನ ಪ್ರಶಾಂತವಾದ ಸಮಯದಲ್ಲಿ ಒಬ್ಬ ರಾಹುತನು ಕುದುರೆಯನ್ನೇರಿ ತಮ್ಮ ಹಿಂದೆಯೇ ಬರುತ್ತಿರುವದನ್ನು ಅವರು ಕಂಡರು. ಅವರಲ್ಲಿ ಅಬದುಲ್ಲಾನಿಗೆ ಆ ರಾಹುತನನ್ನು ನೋಡಿ ಏನೂ ಅನಿಸಲಿಲ್ಲ; ಆದರೆ ಕಿರಾತಸಿಂಗನು ಮಾತ್ರ ಅವನನ್ನು ಚೆನ್ನಾಗಿ ದಿಟ್ಟಿಸಿ ನೋಡಿದನು. ಆ ರಾವುತನಾದರೂ ಕಡಿಮೆಯವನಿದ್ದಿಲ್ಲ. ಅವನು ಕೂಡಲೆ ತನ್ನ ದೃಷ್ಟಿಪಾತದಿಂದ ಈ ಜನರು ಬಹುಶಃ

ಜಯಸಿಂಗನ ಕಡೆಯವರಿರಬಹುದೆಂದು ನಿಶ್ಚಯಿಸಿ, ಬಹಳ ಹೊತ್ತು ಅವರ ಬಳಿಯಲ್ಲಿ ನಿಲ್ಲದೆ ಒತ್ತರದಿಂದ ತನ್ನ ಕುದುರೆಯನ್ನು ಸಾಗಿಸಿದ್ದನು ನೂರಪಲ್ ಹುದಾಳ ಧ್ಯಾನದಲ್ಲಿ ಮಗ್ನನಾಗಿದ್ದ ಕಿರಾತಸಿಂಗನಿಗೆ ರಾವುತನು ಕಣ್ಣುಮರೆಯಾದ ಬಳಿಕ ಎಚ್ಚರಹುಟ್ಟಿತು. ಆಗ ಅವನು ರಾವುತನ ಭವ್ಯಮೂರ್ತಿಯನ್ನು ಮನಸಿನಲ್ಲಿ ತಂದು:—“ಓಹೋ! ಈತನು ಯಾರೋ ದೊಡ್ಡ ಮನುಷ್ಯನಾಗಿ ಕಾಣುತ್ತಾನೆ. ಈತನು ಶಿವಾಜಿಯ ಕಡೆಯವನಾಗಿರಲಿಕ್ಕಿಲ್ಲವಷ್ಟೇ; ಇವನನ್ನು ನಾನು ಸುಮ್ಮನೆ ಹೋಗಗೊಟ್ಟೆನಲ್ಲ? ಮೋಸವಾಯಿತು! ಓಹೋ ಹಿಂದಿನಿಂದ ಇನ್ನೊಬ್ಬ ಮನುಷ್ಯನೂ ಬರುತ್ತಿರುವನಲ್ಲ! ಇವನು ಮುಂದೆ ಹೋದ ರಾವುತನ ಸೇವಕನಾಗಿರಬಹುದು. ಇವನ ಬಾಯಿಂದ ಆ ರಾವುತನ ಸಮಾಚಾರವನ್ನು ಅರಿತುಕೊಂಡು ರಾವುತನನ್ನು ಹಿಡತರಿಸುವದಾದರೆ ಹಿಡತರಿಸೋಣ! ಎಂದು ತನ್ನಷ್ಟಕ್ಕೆ ತಾನೇ ಮಾತಾಡಿಕೊಂಡು, ತನ್ನ ಒಬ್ಬ ಶಿಪಾಯಿಯನ್ನು ರಾವುತನ ಆ ಸೇವಕನು ಬರುವಲ್ಲಿಗೆ ಕಳಿಸಿದನು.

ಆ ರಜಪೂತ ಶಿಪಾಯಿಯು ತನ್ನ ಒಡೆಯನ ಹೇಳಿಕೆಯ ಪ್ರಕಾರ ರಾವುತನ ಶಿಪಾಯಿಗೆ ದಾರಿಯಲ್ಲಿ ಭೆಟ್ಟಿಯಾಗಿ ಸ್ವಾಭಾವಿಕ ಭೆಟ್ಟಿಯಾದವನಂತೆ ನಟಿಸಿ, ಅವನ ಕೂಡ ಸಂಭಾಷಣವನ್ನು ಮಾಡಿ ತನಗೆ ಬೇಕಾದ ಸಂಗತಿಗಳನ್ನೆಲ್ಲ ಕೇಳಿಕೊಂಡನು. ಆ ಮರಾಟರ ಶಿಪಾಯಿಯಾದರೂ ಸಾವಧಾನ್ಯನಿದ್ದಿಲ್ಲ. ಅವನು ರಜಪೂತ ಶಿಪಾಯಿಯ ಇಂಗಿತವನ್ನರಿತು ಅವನಿಗೆ ತನ್ನ ಗುಟ್ಟುಕೊಡದೆ:-ತಾವು ಶಿವಾಜಿಯ ಪಕ್ಷದವರಲ್ಲೆಂತಲೂ ವಂಶಪರಂಪರೆಯಾಗಿ ಬಾದಶಹನ ನೌಕರಿಯನ್ನು ಮಾಡುತ್ತಬಂದವರಾಗಿದ್ದು, ಶಿವಾಜಿಯ ಪುಂಡಾಟಿಕೆಯನ್ನು ಮುರಿಯುವದಕ್ಕಾಗಿ ಈಗ ನಾವು ಬಾದಶಹನ ದಂಡಿನಲ್ಲಿ ನೌಕರಿಯನ್ನು ಸಂಪಾದಿಸಬೇಕೆಂದು ಹೊರಟಿರುತ್ತೇವೆಂತಲೂ ಅವನ ಮನಸಿನಲ್ಲಿ ತುಂಬಿಬಿಟ್ಟನು. ಆ ರಜಪೂತರ ಸೈನ್ಯದ ಗುಂಪು ಬಿಚ್ಚುಗತ್ತಿಯ ಕಾವಲಿನಲ್ಲಿದ್ದ ಮೇಣೆ ಇವುಗಳ ಬಗ್ಗೆ ಯಾದರೂ ಪ್ರಶ್ನಗಳನ್ನು ಮಾಡಿ, ಅವುಗಳ ಬಗ್ಗೆ ಆ ಶಿಪಾಯಿಯ ಬಾಯಿಂದ ಹೊರಟ ಉದ್ಗಾರಗಳಿಂದ ಅದರ ರಹಸ್ಯವನ್ನೆಲ್ಲ ಮನಸಿನಲ್ಲಿ ಅರಿತುಕೊಂಡು, ಮೇಲೆಮೇಲೆ:-ಈ ಝನಾನಖಾನೆಯು ಯಾರದಿದ್ದ ಭಾಗ್ಯವು ನಮಗೇನು? ಇಲ್ಲದ ಉಸಾಬರಿಯು ನಮಗೆ ಏತಕ್ಕೆ ಬೇಕು? ನಾವು ನಮ್ಮ ದಾರೀಹಿಡಿಯೋಣ; ನೀವು ನಿಮ್ಮ ದಾರೀಹಿಡಿಯಿರಿ, ಎಂದು ಹೇಳಿ ತನ್ನ ಕುದುರೆಯನ್ನು ವೇಗದಿಂದ ಬಿಟ್ಟನು. ಕೂಡಲೆ ಆ ಭೀಮಥಡಿಯ ಕುದುರೆಯು ವಾಯುವೇಗದಿಂದ

ಮುಂದೆ ಹೊರಟಿತು.

ಬಳಿಕ ಆ ರಜಪೂತ ಶಿಪಾಯಿಯು ತನ್ನ ಒಡೆಯನಾದ ಕಿರಾತಸಿಂಗನ ಬಳಿಗೆ ಹೋಗಿ:—"ಅದರಲ್ಲೇನೂ ಅರ್ಥವಿಲ್ಲ. ಅವರು ಮಹಾರಾಷ್ಟ್ರರು; ಆದರೆ ಶಿವಾಜಿಯ ಪಕ್ಷದವರಲ್ಲ. ಯಾವದೋ ನಿಮಿತ್ತವಾಗಿ ಅವರು ಔರಂಗಾಬಾದಕ್ಕೆ ಹೊರಟಿರುವರಂತೆ; ಶಿವಾಜಿಯನ್ನು ಅವನು ತಿರಸ್ಕರಿಸಿದನು" ಎಂದು ಹೇಳಿದನು. ಈ ಮಾತಿನಿಂದ ತರ್ಕಮಾಡಿ ಕಿರಾತಸಿಂಗನು ಹಾಗಾದರೆ ಇವರು ಮುಅಜೇಮನಿಗೆ ಅನುಕೂಲ ಪಕ್ಷದವರಾಗಿರಲಿಕ್ಕೆಬೇಕು. ಇವರಿಗೆ ನಾವು ಅಂಜುವ ಕಾರಣವಿಲ್ಲ. ಆದರೂ ನಾವು ಎಚ್ಚರಿಕೆಯಿಂದ ಇರಬೇಕು. ಮರಾಟರಂಥ ಮೋಸಗಾರರನ್ನು ನಾನು ಎಲ್ಲಿಯೂ ನೋಡಿಲ್ಲ. ಇವರು ಆಡುವ ಮಾತಿನಲ್ಲಿ ನಂಬಿಗೆಯನ್ನಿಡುವದು ಸರಿಯಲ್ಲ. ಇವರು ಯಾವದೊಂದು ಸಂಗತಿಯನ್ನು ಇದ್ದಕ್ಕಿದ್ದಂತೆ ಹೇಳುವರೆ? ಇರುವದು ಒಂದು; ಹೇಳುವದು ಮತ್ತೊಂದು, ಎಂದು ನುಡಿದನು.

"ಛೇ ಹಾಗೇನೂ ಇಲ್ಲ. ನಾನು ಕೇಳಿದ ಕೂಡಲೆ ಸರಳಮನಸಿನಿಂದ ಬಾಯಿಬಿಚ್ಚಿ ಎಲ್ಲ ಸಂಗತಿಗಳನ್ನು ಹೇಳಿಬಿಟ್ಟನು. ನನಗಂತೂ ಅವನಲ್ಲಿ ಕಪಟಭಾವವು ತೋರಲಿಲ್ಲ. ಶಿವಾಜಿಯನ್ನು ಬಾಯಿಗೆ ಬಂದಹಾಗೆ ಬೈದನು. ಅವನಿಗೆ ತಕ್ಕ ಶಾಸನವನ್ನು ಮಾಡುವವರು ಬಾದಶಹನ ಒಳಿಯಲ್ಲಿ ಯಾರೂ ಇಲ್ಲೆಂದು ಬಾದಶಹನನ್ನೂ ನಿಂದಿಸಿದನು. ಈ ಸಂಗತಿಗಳಿಂದ ಆ ಗೃಹಸ್ಥನು ಶಿವಾಜಿಯ ಕೃತ್ಯಗಳಿಗೆ ಸೇರದಂಥ ಯಾವನಾದರೂ ಒಬ್ಬ ದೊಡ್ಡ ಗೃಹಸ್ಥನಿರಬಹುದೆಂದು ನಾನು ಅನುಮಾನ ಮಾಡಿದೆನು; ಆದರೆ ಅವನು ಶಿವಾಜಿಯ ಪಕ್ಷದ ಮನುಷ್ಯನಲ್ಲೆಂಬದನ್ನು ಮಾತ್ರ ನಾನು ಖಂಡಿತವಾಗಿ ಹೇಳುತ್ತೇನೆ. ಅವರು ಔರಂಗಾಬಾದಕ್ಕೆ ಹೋಗುವ ಸಾಧಾರಣಪ್ರತಿಯ ದಾರಿಕಾರರು. ಕಣ್ಣಿಗೆ ಮಾತ್ರ ದಂಡಾಳುಗಳೆಂಬಂತೆ ತೋರುವರು; ಆದರೆ ಸ್ವಸಂರಕ್ಷಣದ ಸಲುವಾಗಿ ಅವರು ಆ ವೇಷವನ್ನು ಧರಿಸಿದಂತೆ ತೋರುವದು."

ಕಿರಾತಸಿಂಗ—ಈ ಮಾತು ನನಗೆ ನಿಜವಾಗಿ ತೋರುವದಿಲ್ಲ. ಮುಂದೆ ಹೋದ ಆ ಗೃಹಸ್ಥನು ಒಬ್ಬ ಶೂರ ಸರದಾರನಿರಲಿಕ್ಕೆ ಬೇಕು. ಅವನ ಬಾಹ್ಯಸ್ವರೂಪದಿಂದಲೇ ಈ ಮಾತು ಸ್ಪಷ್ಟವಾಗುವದು. ನೀನೇನು ಹೇಳುತ್ತಿ? ಒಳ್ಳೇದು ಇರಲಿ; ನಾನು ವಿಚಾರ ಮಾಡುತ್ತೇನೆ, ಎಂದು ಅಂದು ತನ್ನ ಮನಸ್ಸಿನಲ್ಲಿ—ನಾನು ಸುಮ್ಮಸುಮ್ಮನೆ ಆ ಮನುಷ್ಯನ ವಿಷಯವಾಗಿ ಯಾಕೆ ಸಂಶಯವನ್ನು

ತಕ್ಕೊಳ್ಳಬೇಕು? ಅತ್ತ ಜಯಸಿಂಗರಾಜನೂ ದಿಲೇರಖಾನನೂ ನಾಲ್ಕೂಕಡೆ ಯಿಂದ ಮರಾಟರನ್ನು ಪೀಡಿಸುತ್ತಿರಲು, ಅವರಲ್ಲಿ ಒಬ್ಬ ಸರದಾರನು ಇತ್ತ ಕಡೆಗೆ ಏತಕ್ಕೆ ಬಂದಾನು? ಕದಾಚಿತ್ ಮುಂದೇನಾದರೂ ಪ್ರಸಂಗವು ಒದಗಿ ದರೆ ನೋಡಿಕೊಳ್ಳೋಣ; ಸದಕ್ಕೆ ಇಲ್ಲದ ಸಂಶಯದಿಂದ ನನ್ನ ಜನರನ್ನು ಬಿಟ್ಟು ಹೋದರೆ ಘಾತವಾದೀತು, ಎಂದು ಆಲೋಚಿಸಿ, ಆ ವಿಚಾರವನ್ನು ಬಿಟ್ಟುಕೊಟ್ಟು, ತನ್ನ ಜನರ ಕೂಡ ನಡೆದನು.

ಇತ್ತ ಆ ಮಹಾರಾಷ್ಟ್ರ ಶಿಪಾಯಿಯು ಒಳ್ಳೇ ವೇಗದಿಂದ ಕುದುರೆ ಯನ್ನು ಓಡಿಸಿ ತನ್ನ ಒಡೆಯನನ್ನು ಕೂಡಿಕೊಂಡು ಹಿಂದಿನಿಂದ ಬರುವ ರಜ ಪೂತ ದಂಡಾಳುಗಳ ವಿಷಯವಾಗಿ ತನ್ನ ಮನಸಿನಲ್ಲಿ ಬಂದ ಸಂಶಯವನ್ನೂ, ತಮ್ಮ ವಿಷಯವಾಗಿ ಅವರ ಮನಸಿನಲ್ಲಿ ಬಂದ ಸಂಶಯವನ್ನೂ ವಿವರಿಸಿ ಹೇಳಿ ದನು. ಅದಕ್ಕೆ ಆ ಸರದಾರನು—ಎಲಾ, ನೀನು ಒಳ್ಳೇ ಸಂಶಯದ ಸ್ವಭಾವ ದವನು ಬಿಡು. ನಮ್ಮ ವಿಷಯವಾಗಿ ಆ ದಂಡಾಳುಗಳ ಒಡೆಯನ ಮನಸ್ಸಿಗೆ ಏನೋ ಸಂಶಯವು ಹುಟ್ಟಿರುವದೆಂದು ಯಾತರ ಮೇಲಿಂದ ಹೇಳುವಿ?

ಸೇವಕ:-ಹಾಗಿಲ್ಲದಿದ್ದರೆ ಅವನು ತನ್ನ ಸೇವಕನನ್ನು ನನ್ನ ಕಡೆಗೆ ಕಳಿಸಿ:- ನಾವು ಯಾರು, ಎಲ್ಲಿಗೆ ಹೋಗುತ್ತೇವೆ, ಯಾತಕ್ಕೆ ಹೋಗುತ್ತೇವೆ? ಇದನ್ನೆಲ್ಲ ವಿಚಾರ ಮಾಡಿಸುತ್ತಿದ್ದಿಲ್ಲ; ನಾನಂತೂ ಅವರಿಗೆ ನಮ್ಮ ಗುಟ್ಟುಕೊಡದೆ ಹಾಂಸಿ ಒಗೆದಿರುವೆನು. ನನ್ನ ಉತ್ತರದಿಂದ ಬಹಳವಾಡಿ ಅವರ ಒಡೆಯನ ಸಮಾ ಧಾನವಾಗಿರಲಿಕ್ಕಿಲ್ಲ.

ಸರದಾರ—ಒಳ್ಳೇದು, ಅವರು ಯಾರು? ಎಲ್ಲಿಗೆ ಹೋಗುವವರು? ಆ ಝುನಾನಖಾನೆಯು ಯಾರದು? ಈ ಬಗ್ಗೆ ಏನಾದರೂ ವಿಚಾರಮಾಡಿದೆಯಾ?

ಸೇವಕ—ಓಹೋ, ಮಾಡಿದೆನು. ಆ ಶಿಪಾಯಿಯು—"ಇದು ಶಹಾ ಜಾದಾಮುಅಜೀಮನ ಝುನಾನಖಾನೆಯು" ಎಂದು ಹೇಳಿದನು. ಆಗ ನಾನು— ಶಹಾಜಾದಾನ ಝುನಾನಖಾನೆಯಾದರೆ ಇತ್ತಕಡೆ ಎಲ್ಲಿಂದ ಬಂತು? ಎಂದು ಕೇ- ಳಲು, ಅದಕ್ಕೆ ಆ ಶಿಪಾಯಿಯು ಸರಳ ಉತ್ತರವನ್ನು ಕೊಡದೆ—"ಹೆಚ್ಚಿನ ಉಸಾ ಬರಿಯು ನಿನಗೆ ಏತಕ್ಕೆ ಬೇಕು? ನನಗೆ ಗೊತ್ತಿದ್ದಷ್ಟು ಸಂಗತಿಯನ್ನು ಹೇಳಿ ದೆನು" ಎಂದು ಅಂದನು. ಆದರಿಂದ ಇದರಲ್ಲೇನಾದರೂ ಮೋಸವಿರಲಿಕ್ಕೆ ಬೇಕೆಂದು ತರ್ಕಿಸಿದೆನು ಯಾವಳೊಬ್ಬ ಪರಸ್ತ್ರೀಯನ್ನು ಬಲಾತ್ಕಾರದಿಂದ ಶಹಾ ಜಾದನ ಝುನಾನಖಾನೆಗೆ ಒಯ್ಯುತ್ತಿರಬಹುದಲ್ಲವಷ್ಟೆ? ನಮ್ಮ ಮರಾಟಾ ಸ್ತ್ರೀಯಾ

ಗಿರಲಿಕ್ಕಿಲ್ಲವಷ್ಟೆ? ಈ ಮುಸಲ್ಮಾನರು ಪರಸ್ತ್ರೀಯರನ್ನು ಅಪಹರಿಸುವದರಲ್ಲಿ ಏನು ಮಾಡಲಿಕ್ಕೂ ಹೇಸುವವರಲ್ಲ. ಆ ಮೇಣೆಯ ಸುತ್ತುಮುತ್ತು ಎಂಥ ಕಾವಲು ಇತ್ತು ನೋಡಿದಿರಾ?

ಆ ಸರದಾರನು ಈ ಸಂಗತಿಗಳನ್ನು ಆಶ್ಚರ್ಯದಿಂದ ಸುಮ್ಮನೆ ಕೇಳುತ್ತಿದ್ದನು. ಪರಸ್ತ್ರೀಯು ಇರಬಹುದೆಂಬ ಬಗ್ಗೆ ಹೊರಟ ಅವನ ಉದ್ಗಾರಗಳನ್ನು ಕೇಳಿ ಸರದಾರನು—ನಿನಗೆ ಈ ಸಂಶಯವು ಬರಲಿಕ್ಕೆ ಕಾರಣವೇನು? ಹಾಗೇನಾದರೂ ಇದ್ದರೆ, ಅಲ್ಲಿ ವಿಶೇಷತರದ ಗದ್ದಲ ಗೊಂದಲಗಳು ಕಾಣುತ್ತಿದ್ದವು, ಎಂದು ಅಂದನು.

ಸೇವಕ—ಅಲ್ಲಿ ಗದ್ದಲಗೊಂದಲಗಳೇನು ಇರಬೇಕು? ಪಾಪ! ಅವಳು ಒಬ್ಬಳು; ಮೇಣೆಯ ಸುತ್ತುಮುತ್ತು ಬಿಚ್ಚುಗತಿಯ ಕಾವಲು; ಇಂಥ ಪ್ರಸಂಗದಲ್ಲಿ ಅವಳೇನು ಮಾಡಬೇಕು? ಅವಳು ಮೇಣೆಯೊಳಗೆ ಸ್ವಸ್ಥವಾಗಿ ಬಿದ್ದುಕೊಂಡಿರಬಹುದು. ಇದಲ್ಲದೆ ಆ ಗುಂಪಿನಲ್ಲಿ ವಿಲಕ್ಷಣ ಸ್ವರೂಪವುಳ್ಳ ಒಬ್ಬ ಜೋಜ್ಜೀರವನು ಇದ್ದನು. ಇನ್ನೊಂದು ಮಹತ್ವದ ಸಂಗತಿಯನ್ನು ನಾನು ತಮ್ಮ ಮುಂದೆ ಹೇಳುತ್ತೇನೆ. ಯಾರಾದರೂ ಆ ದಾರಿಗುಂಟ ಅವರ ಹಿಂದೆ ಬಂದ ಕೂಡಲೆ ನಮ್ಮನ್ನು ಶೋಧಿಸುತ್ತ ಬಂದರೋ ಏನೋ ಎಂಬ ಸಂಶಯವು ಅವರಿಗೆ ಆಗಾಗ್ಗೆ ಬರುವದೆಂದು ನನಗೆ ಭಾಸವಾಯಿತು. ಇದರಿಂದ ನನ್ನ ಸಂಶಯವು ನಿಜವಾಗಿರುವದೋ ಇಲ್ಲವೋ ಎಂಬದನ್ನು ನೀವೇ ತರ್ಕಿಸಿರಿ.

ಈ ಮೇರೆಗೆ ಸೇವಕನು ಆಡಿದ ಮಾತುಗಳಿಂದ ಆ ಸರದಾರನು ಮತ್ತೆ ವಿಚಾರ ಮಾಡತೊಡಗಿದನು; ಮತ್ತು ಅವನು ತಕ್ಕೊಂಡ ಸಂಶಯವು ನಿಜವೆಂದು ಅವನ ಮನಸ್ಸಿಗೂ ಹೊಳೆಯಿತು. ಆಗ ಅವನು—ನಾವು ನಮ್ಮ ಪ್ರತಿಜ್ಞೆಯನ್ನು ಪಾಲಿಸಲಿಕ್ಕೆ ಬೇಕು. ಪಾಪ! ಆ ಪತಿವ್ರತೆಯನ್ನು ಆ ನೀಚರ ಕೈಯೊಳಗಿಂದ ಬಿಡಿಸಿ, ಯೋಗ್ಯವ್ಯವಸ್ಥೆಯನ್ನು ಮಾಡಲಿಕ್ಕೆ ಬೇಕು.

ಸೇವಕ—ಏನು? ಈ ಕಾರ್ಯವು ಹೇಗೆ ಶಕ್ಯವಾದೀತು? ನಾವು ಇಬ್ಬರೇ; ಅವರ ಸಂಖ್ಯೆಯು ಬಹಳ; ಅಂದ ಮೇಲೆ ಅದರಲ್ಲಿ ನಮಗೆ ಯಶದೊರಕುವ ಬಗೆ ಯಾವದು? ನಾನು ನಿಮ್ಮ ಮುಂದೆ ಈ ಮಾತನ್ನೇ ಹೇಳಬಾರದಾಗಿತ್ತು. ಆದರೆ ಏನು ಮಾಡಲಿ? ನನ್ನ ಮನಸ್ಸು ನಿಲ್ಲಲಿಲ್ಲ. ನಿಮ್ಮ ಸಂಗಡ ಮಾತಾಡುವಾಗಲೇ ನನಗೆ ಹೊಳೆಯಿತು: ಆದರೆ ನನ್ನ ಮನಸ್ಸಿನಲ್ಲಿ ಬಂದ ಸಂಗತಿಯನ್ನು ಎಂದೂ ನಾನು ಬಚ್ಚಿಟ್ಟಿಲ್ಲ. ಈಗಾದರೂ ಏಕೆ ಬಚ್ಚಿಡಬೇಕು? ಎಂದು ಹೇಳಿ

ಬಿಟ್ಟೆನು. ಇದರಲ್ಲೇನೋ ಮೋಸವಿದೆ, ಎಂದು ನನಗೆ ತಿಳಿದ ಕೂಡಲೆ ನಾವು ಇಲ್ಲಿಂದ ಬೇಗನೆ ಜಾರಿಕೊಳ್ಳಬೇಕು, ಎಂಬ ಸಂಗತಿಯನ್ನು ನಿಮಗೆ ತಿಳಿಸುವದಕ್ಕಾಗಿಯೇ ನಾನು ಒಳ್ಳೇ ವೇಗದಿಂದ ನಿಮ್ಮ ಬಳಿಗೆ ಬಂದೆನು.

ಛೀ ಹುಚ್ಚಾ, ಒಬ್ಬ ಪತಿವ್ರತೆಯ ಗೋಳಾಟವನ್ನು ಕಣ್ಮುಟ್ಟ ನೋಡಿ, ಸಾವಿಗೆ ಅಂಜಿ ಓಡಿ ಹೋಗುವದುಂಟೆ? ಇಂದಿನ ತನಕ ಕಲಿತದ್ದು ಇದೇ ಏನು? ಅವರು ಇನ್ನೂ ಒಂದು ಮುಕ್ಕಾಮು ಮಾಡಿಕೊಂಡು ಔರಂಗಾಬಾದಕ್ಕೆ ತಲ್ಪುವರು. ಮಧ್ಯಾಹ್ನದ ಬಿಸಲಿನಲ್ಲಿ ವಿಶ್ರಾಂತಿಯ ಸಲುವಾಗಿ ಅವರು ಎಲ್ಲಿಯಾದರೂ ಇಳಿಯುಬಹುದು. ಆಗ ನಾವು ಅವರ ಬಳಿಗೆ ಹೋಗಿ ಅವರ ವಿಷಯವಾಗಿ ಪೂರ್ಣವಾಗಿ ವಿಚಾರ ಮಾಡಿಕೊಂಡು ಬರೋಣ; ನೀನಂದಮಾತೇ ನಿಜವಾದರೆ, ಹೇಗಾದರೂ ಮಾಡಿ ಅವಳ ಬಿಡುಗಡೆಯನ್ನು ಮಾಡೋಣ.

ಈ ಪ್ರಕಾರ ಒಡೆಯನು ಆಡಿದ ಮಾತುಗಳನ್ನು ಕೇಳಿ, ಸೇವಕನು:-ಒಡೆಯರೇ, ತಾವು ಹೇಳುವ ಮಾತು ನಿಜವು; ಆದರೆ ನಾವು ಇಬ್ಬರು, ಅವರು ಬಹಳ ಮಂದಿ, ಈ ಬಗ್ಗೆ ತುಸು ವಿಚಾರಮಾಡಿರಿ; ಎಂದು ವಿನಯದಿಂದ ಹೇಳಿದನು.

ಸರದಾರ:—ಅದರ ವಿಚಾರವನ್ನು ದೇವರು ಮಾಡುವನು. ನಾವು ನಮ್ಮ ಕರ್ತವ್ಯಕ್ಕೆ ಮಾತ್ರ ಯಾವಾಗಲೂ ತಪ್ಪಬಾರದು. ಜೀವದ ಮೇಲೆ ಪ್ರಸಂಗವು ಬರುವದೋ? ಬರಲಿ; ಆದದ್ದು ಆಗಲಿ; ಪತಿವ್ರತೆಯು, ಪತಿವ್ರತೆಯೇ. ಅವಳು ಹಿಂದುವಾಗಿರಲಿ, ಮುಸಲ್ಮಾನಳಾಗಿರಲಿ ಅವಳ ರಕ್ಷಣವನ್ನು ಮಾತ್ರ ಮಾಡಲಿಕ್ಕೇ ಬೇಕು ಇದರಲ್ಲಿ ಜಾತಿಭೇದದ ವಿಚಾರವಿಲ್ಲ. ಬೇಗನಡೆ, ಆ ಕೆಲಸಕ್ಕೆ ತೊಡಗೋಣ. ಇಲ್ಲಿಂದ ಅಡ್ಡಮಾರ್ಗದಿಂದ ಹೋಗಿ ಒತ್ತಟ್ಟಿಗೆ ಗಿಡದ ಮರಗೆ ನಿಂತುಕೊಳ್ಳೋಣ; ಅವರು ಮುಂದೆ ಹೋಗಿ ಎಲ್ಲಿಯಾದರೂ ತಳವೂರಿದರೆಂದರೆ, ನಾವು ಅವರ ಹಿಂದಿನಿಂದ ಸಾವಕಾಶವಾಗಿ ಹೋಗಿ ನಮ್ಮ ಸಂಶಯನಿವೃತ್ತಿಯನ್ನು ಮಾಡಿಕೊಳ್ಳೋಣ. ಆ ಬಳಿಕ ಮುಂದಿನ ಆಲೋಚನೆ.

ಈ ಪ್ರಕಾರ ಆಲೋಚನೆ ಮಾಡಿ ಉಭಯತರು ತಮ್ಮ ಕುದುರೆಗಳನ್ನು ದಾರೀಬಿಟ್ಟು ಅಡವಿಯಲ್ಲಿ ಹೊಡೆದರು. ಅವರು ಯಾವಕಾರ್ಯದ ಸಲುವಾಗಿ ಔರಂಗಾಬಾದಕ್ಕೆ ಹೊರಟಿದ್ದರೋ, ಅವರ ಆ ಕೆಲಸವು ಒತ್ತಟ್ಟಿಗೇ ಉಳಿಯಿತು. ತುಸು ದೂರ ಹೋದಬಳಿಕ ಆ ಸರದಾರನು ತನ್ನ ಸೇವಕನಿಗೆ:— ನಾನು ಈ ವಟವೃಕ್ಷದ ನೆರಳಿನಲ್ಲಿ ಕೂತುಕೊಂಡಿರುತ್ತೇನೆ. ನೀನು ಪುನಃ ಹೋಗಿ ಎಲ್ಲ ಸಂಗತಿಗಳನ್ನು ಪೂರ್ಣವಾಗಿ ತಿಳಕೊಂಡು ಬಾ, ಎಂದು ಹೇಳಿ

ದನು. ಒಡೆಯನ ಅಪ್ಪಣೆಯು ಒಂದುವೇಳೆ ತನ್ನ ಮನಸಿನ ವಿರುದ್ಧವಾಗಿದ್ದರೂ ಅದನ್ನು ಪಾಲಿಸುವದು ಸೇವಕನ ಕರ್ತವ್ಯವು. ಇದನ್ನು ಮನಸಿನಲ್ಲಿ ತಂದು ಆ ಶಿಪಾಯಿಯು ಒಡೆಯನ ಅಪ್ಪಣೆಯಂತೆ, ಅಲ್ಲಿಂದ ಹೊರಟು ಆ ದಂಡಾಳುಗಳ ಮಾರ್ಗವನ್ನು ಬಿಟ್ಟು ಅಡ್ಡಬದಿಗೆ ಸ್ವಲ್ಪಹೊತ್ತು ನಿಂತುಕೊಂಡು, ಅವರು ಮುಂದೆ ಹೋದಬಳಿಕ ಅವರನ್ನು ಹಿಂಬಾಲಿಸಿ ಸಾವಕಾಶವಾಗಿ ನಡೆದನು. ಕೆಲವು ಅಂತರವನ್ನು ಕ್ರಮಿಸಿ ಹೋದಬಳಿಕ ಅವರು ದಾರಿಯಲ್ಲಿರುವ ಒಂದು ವಿಶಾಲವಾದ ವೃಕ್ಷದ ನೆರಳಿಗೆ ಇಳಕೊಳ್ಳುವ ಲಕ್ಷಣವು ತೋರಿತು. ಆಗ ಆ ಶಿಪಾಯಿಯು, ಅವರೊಳಗೆ ಸೇರಿಕೊಂಡು ನಿಜವಾದ ಸಂಗತಿಯನ್ನು ಅರಿತುಕೊಳ್ಳಲಿಕ್ಕೆ ಇದೇ ತಕ್ಕ ಸಮಯವೆಂದು ಯೋಚಿಸಿ, ಅವರ ಸಮೀಪಕ್ಕೆ ಹೋದನು. ಈ ಆಗಂತುಕನನ್ನು ಕಂಡ ಕೂಡಲೆ ಕೆಲಹೊತ್ತಿನ ಪೂರ್ವದಲ್ಲಿ ಆತನ ಸಂಗಡ ಮಾತಾಡಿದ ರಜಪೂತ ಶಿಪಾಯಿಯು ಅವನ ಬಳಿಗೆ ಬಂದು:—ಇದೇನಾಶ್ಚರ್ಯವು! ಇದೇ ಈಗ ನೀವು ನಮ್ಮ ಮುಂದೆಯೇ ಒಳ್ಳೇ ವೇಗದಿಂದ ಕುದುರೆಯನ್ನು ಓಡಿಸಿಕೊಂಡು ಹೋಗಿದ್ದಿರಿ. ಈಗ ನೋಡಿದರೆ ಪುನಃ ನಮ್ಮ ಹಿಂದೆಯೇ ಇರುವಿರಿ.

ಅಹುದು, ಅಹುದು, ನಾನು ಮುಂದಕ್ಕೆ ಹೋದದ್ದು ನಿಜ; ಆದರೆ ಮಾರ್ಗದಲ್ಲಿ ಬಹಿರ್ದೇಶೆಗೆ ಹೋಗುವ ಪ್ರಸಂಗ ಬಂದದ್ದರಿಂದ ನಮ್ಮ ಒಡೆಯನ ಅಪ್ಪಣೆಪಡೆದು, ಆ ಹಳ್ಳದಲ್ಲಿ ಉಳಕೊಂಡೆನು. ಅಲ್ಲಿ ನನಗೆ ಬಹಳ ಹೊತ್ತು ಹಿಡಿದದ್ದರಿಂದ ನಮ್ಮ ಒಡೆಯನು "ನೀನು ಸಾವಕಾಶವಾಗಿ ಬಾ. ನಾನು ಮುಂದೆ ಹೋಗುತ್ತೇನೆ" ಎಂದು ಹೇಳಿ ಹೊರಟುಹೋದನು. ನಾನು ಸ್ವಲ್ಪ ಆಹಾರವನ್ನು ತೆಗೆದುಕೊಂಡ ಹೊರತು ನನ್ನ ಮಾರ್ಗವು ಸಾಗುವಂತಿದ್ದಿಲ್ಲ. ಆದ್ದರಿಂದ ಇನ್ನು ಗಂಟುಬಿಚ್ಚಬೇಕೆನ್ನುವಷ್ಟರಲ್ಲಿ ನೀವು ಮುಂದೆ ಹೋಗುವದನ್ನು ಕಂಡು, ನಿಮ್ಮ ಸಂಗಡವೇ ತಳಊರಬೇಕೆಂದು ಬಂದೆನು ನಿಮ್ಮ ಒಡೆಯನ ಸಮ್ಮತಿಯಿದ್ದರೆ ಉಳಿಯುವೆನು; ಇಲ್ಲದಿದ್ದರೆ ನನ್ನ ಮಾರ್ಗವನ್ನು ನಾನು ನೋಡಿಕೊಳ್ಳುವೆನು. ಇದೇ ಈಗ ನಿಮ್ಮ ಪರಿಚಯವಾಗಿತ್ತು. ನಿಮ್ಮ ಮಾತಿನಿಂದ ನೀವು ಒಳ್ಳೇ ಮನುಷ್ಯರಾಗಿ ಕಂಡಿರಿ. ಆದಕಾರಣ ನಿಮ್ಮ ಕೂಡ ಕೆಲವು ಕಾಲವನ್ನು ಕಳೆಯಬೇಕೆಂದು ಅಪೇಕ್ಷಿಸಿ ಬಂದೆನು. ನಿಮ್ಮ ಇಚ್ಛೆಯಿದ್ದರೆ ಹೇಳಿರಿ. ನಮ್ಮ ಬುತ್ತಿಯಗಂಟು ನಮ್ಮ ಬಳಿಯಲ್ಲಿ ಇರುವದು. ನಿಮ್ಮ ಜೋಡುಮಾತ್ರ ಅಪೇಕ್ಷಿಸುವೆನು.

ರಜಪೂತ ಶಿಪಾಯಿಯು ಆ ಮರಾಠಾ ಶಿಪಾಯಿಯನ್ನು ಒಂದು ಸಾರೆ ಸೂಕ್ಷ್ಮದೃಷ್ಟಿಯಿಂದ ನೋಡಿ—ಬೇಕಂತ ಹಿಂದೆ ಉಳಿದು ನೀನು ಗುಪ್ತಚಾರ ನಾಗಿ ನಮ್ಮೊಳಗೆ ಸೇರಿಕೊಳ್ಳಲಿಕ್ಕೆ ಬಂದಿಲ್ಲವಷ್ಟೇ? ಹಾಗೇನಾದರೂ ಇದ್ದಂತೆ ನಮ್ಮ ಅನುಭವಕ್ಕೆ ಬಂದರೆ ನಿನ್ನ ಎಲುವು ಸಹ ಉಳಿಯಲಿಕ್ಕಿಲ್ಲ ಕಂಡಿಯಾ. ಈ ಮಾತನ್ನು ಚನ್ನಾಗಿ ಲಕ್ಷದಲ್ಲಿಡು, ಅಂದನು ಅದಕ್ಕೆ ಮರಾಟಾ ಶಿಪಾಯಿಯು (ನಕ್ಕು)—ಓಹೋ! ಯಾಕಾಗಲೊಲ್ಲದು, ಎಂದು ಹೇಳಿದನು.

ಈ ಪ್ರಕಾರ ನಗೆಯ ಮೇಲೆ ಹಾಕಿ ಮಾತಾಡಿದ ಮಾತನ್ನು ಕೇಳಿ ರಜಪೂತ ಶಿಪಾಯಿಯು—ನೀವು ಮಹಾರಾಷ್ಟ್ರರು ಬಹಳ ಮೋಸಗಾರರೆಂದು ಪ್ರಸಿದ್ಧಿಯಿರುವದು. ನೀವು ಯಾರ ಹೊಟ್ಟೆಯಲ್ಲಿ ಯಾವಾಗ್ಗೆ ಹೇಗೆ ಪ್ರವೇಶ ಮಾಡುತ್ತೀರೆಂಬದು ತಿಳಿಯುವದಿಲ್ಲ ನಂಬಿಗೆಯನ್ನು ಹುಟ್ಟಿಸಿ ಕುತ್ತಿಗೆಯನ್ನು ಕೊಯ್ಯುವಿರಿ. ಆದಕಾರಣ ನಿಮ್ಮ ಮೇಲೆ ವಿಶ್ವಾಸವಿಡಲಿಕ್ಕೆ ಮನಸು ಹಿಂಜರಿಯುವದು, ಎಂದು ಅಂದನು.

ಈ ಮಾತುಗಳನ್ನು ಕೇಳುವಾಗ ಮರಾಟಾ ಸಿಪಾಯಿಯು ಮೋರೆಯನ್ನು ಗಂಟುಹಾಕಿದ್ದನು. ಅವನ ಮಾತು ಮುಗಿದ ಕೂಡಲೆ ಮತ್ತೆ ಯಥಾಪ್ರಕಾರ ವಾಗಿ ಪ್ರಸನ್ನ ಮುಖಮುದ್ರೆಯಿಂದ--ಮರಾಟರ ವಿಷಯವಾಗಿ ನೀವು ಮಾಡಿದ ಈ ವರ್ಣನೆಯನ್ನು ಕೇಳಿ ಪ್ರತಿಯೊಬ್ಬ ಮರಾಟಾ ಸಿಪಾಯಿಗೂ ಸಿಟ್ಟು ಬರಲಿಕ್ಕೇ ಬೇಕು; ಆದರೆ ನಾನು ಮಾತ್ರ ಸಿಟ್ಟಾಗುವದಿಲ್ಲ. ಯಾಕಂದರೆ ನಿಮಗೆ ಮರಾಟರ ಸ್ವಭಾವದ ವಿಷಯವಾಗಿ ಏನೂ ಅನುಭವವಿಲ್ಲೆಂದು ನನಗೆ ಗೊತ್ತುಂಟು. ನಿಮಗೆ ನಿಜವಾದ ಅನುಭವವಿದ್ದರೆ ನೀವು ಹೀಗೆಂದಿಗೂ ಮಾತಾಡುತ್ತಿದ್ದಿಲ್ಲ. ಉತ್ತರದಿಂದ ಬಂದ ಒಬ್ಬಿಬ್ಬರು ಇಲ್ಲಿಂದ ಹೊರಟು ಹೋಗಿ ನಮ್ಮ ವಿಷಯವಾಗಿ ಹೇಳಿದ ಸಂಗತಿಗಳಷ್ಟೇ ನಿಮಗೆ ಗೊತ್ತು. ಹೆಚ್ಚಿನ ಸಂಗತಿಗಳು ನಿಮಗೆ ಹ್ಯಾಗೆ ತಿಳಿಯಬೇಕು? ಮರಾಟರು ತಮ್ಮನ್ನು ನಂಬಿದವರಿಗಾಗಲಿ, ಇಲ್ಲವೆ ತಮ್ಮ ಒಡೆಯನಿಗಾಗಲಿ ಎಂದೂ ಮೋಸಮಾಡಲಾರರು. ಅದು ಅವರ ಶೀಲವೇ ಅಲ್ಲ ಇನ್ನು ನೀವು ಒಂದುವೇಳೆ ಶಿವಾಜಿಯ ವಿಷಯವಾಗಿ ಆಕ್ಷೇಪವನ್ನು ತಕ್ಕೊಳ್ಳಬಹುದು; ಅವನಾದರೂ ತನಗೆ ಮೊದಲು ವಿಶ್ವಾಸವನ್ನು ಕೊಟ್ಟು, ತಿರುಗಿ ತನ್ನ ಮೇಲೆಯೇ ಬೀಳಲಿಕ್ಕೆ ಯತ್ನಮಾಡಿದವರಿಗೇ ಮೋಸ ಮಾಡಿರುತ್ತಾನೆ. ಅವನ ಕೂಡ ನಂಬಿಗೆಯಿಂದ ನಡೆದವರಿಗೆ ಅವನು ಎಂದೂ ಮೋಸಮಾಡಿಲ್ಲ. ಇದಲ್ಲದೆ ಅವನು ಮುಸಲ್ಮಾನರ ಕೂಡ ಹೇಳಿ ಕೇಳಿ ಶತ್ರುತ್ವ

ವನ್ನು ತಾಳಿದವನು. ಅವನು ಅವರಿಗೆ ಮೋಸಮಾಡಿದನೆಂಬದರಲ್ಲಿ ಆಶ್ಚರ್ಯ ವೇನು? ನಿಮ್ಮ ಸೇವೆಯನ್ನು ಮಾಡುತ್ತಿದ್ದ ನಿಮ್ಮ ನಂಬಿಗೆಗೆ ಪಾತ್ರನಾದ ಮರಾಟನು ಯಾವಾಗಾದರೂ ಎಂದಾದರೂ ಮೋಸಮಾಡಿದ ಉದಾಹರಣ ಉಂಟೇನು? ಎಂದಿಗೂ ಇಲ್ಲ. ನಿಮಗೆ ಅವರ ಶೀಲವು ಗೊತ್ತಿಲ್ಲೆಂದು ಮಾತಾಡಿ ದಿರಿ. ಹೀಗೆಂದು ಚಟ್ಟನೆ ಕುದುರೆಯಿಂದ ಇಳಿದು, ಅದನ್ನು ಎಲ್ಲರಂತೆ ತಾನೂ ಒಂದು ಗಿಡಕ್ಕೆ ಕಟ್ಟಿ, ಅದರ ಜೀನು ಸಡಿಲುಮಾಡಿ ಕುಳಿತುಕೊಂಡನು. ಮೇಲಿನ ಮಾತುಗಳಿಂದಲೂ ಈ ಎಲ್ಲ ಕೆಲಸಗಳಿಂದಲೂ ಆ ರಜಪೂತ ಶಿಪಾಯಿ ಗಳು ಇವನಿಗೆ ಸ್ವಾಗತಮಾಡಿ ತಮ್ಮೊಳಗೆ ಇಳಿಸಿಕೊಂಡರೋ ಏನೋ ಅನ್ನುವಂತೆ ನೋಡುವವರಿಗೆ ತೋರಿತು. ಇಷ್ಟೊತ್ತಿನವರೆಗೆ ಒಬ್ಬನೇ ರಜಪೂತ ಶಿಪಾಯಿಯು ಅವನ ಕೂಡ ಮಾತಾಡುತ್ತಿದ್ದನು. ಈಗ ಎಲ್ಲರೂ ಮಾತಾಡಹತ್ತಿದರು. ಅಷ್ಟ ರಲ್ಲಿ ಕಿರಾತಸಿಂಗನು ಈತನನ್ನು ಪರೀಕ್ಷಿಸಬೇಕೆಂದು ಅವನನ್ನು ತನ್ನ ಬಳಿಗೆ ಕರೆ ಯಿಸಿಕೊಂಡನು. ಈ ಶಿಪಾಯಿಯು ಶಿವಾಜಿಯ ಎಲ್ಲ ಕೃತ್ಯಗಳಿಗೆ ತನ್ನ ತಿರ ಸ್ಕಾರವನ್ನೇ ತೋರಿಸಿದ್ದರಿಂದ, ಕಿರಾತಸಿಂಗನ ಮನಸಿನಲ್ಲಿ ಹೊಸದೊಂದು ವಿಚಾ ರವು ಬಂದಿತು. ಅವನು ಆ ಶಿಪಾಯಿಯನ್ನು ಕುರಿತು—"ನೀವು ಔರಂಗಾ ಬಾದಕ್ಕೆ ಯಾವ ಕೆಲಸದ ನಿಮಿತ್ತವಾಗಿ ಹೊರಟಿರುವಿರಿ?" ಎಂದು ಕೇಳಿದನು. ಅದಕ್ಕೆ ಆ ಮರಾಟಾ ಶಿಪಾಯಿಯು—"ಮಹಾರಾಜ, ನಾವು ಶಹಾಜಾದಾ ಮುಆಜೀಮನಕಡೆಗೆ ನೌಕರಿಯಸಲುವಾಗಿ ಹೊರಟಿದ್ದೇವೆ. ಶಿವಾಜಿಯ ಬಳಿಯಲ್ಲಿ ನಮಗೆ ಆಶ್ರಯವು ದೊರೆಯಬಹುದು; ಆದರೆ ಅವನ ಆಶ್ರಯದಲ್ಲಿ ಕೆಲಸಮಾಡ ಲಿಕ್ಕೆ ನಮ್ಮ ಒಡೆಯನ ಇಚ್ಛೆಯು ಇಲ್ಲ. ಯಾಕಂದರೆ ಅವನ ಪುಂಡಾಟಿಕೆಯು ಹೀಗೆ ಎಷ್ಟು ದಿವಸ ನಡೆದೀತು? ಮೊಗಲಸರದಾರರು ಕೋಟೆಕೊತ್ತಳಗಳನ್ನೂ, ಅವುಗಳ ಗುಪ್ತಮಾರ್ಗಗಳನ್ನೂ ಅರಿತ ನಮ್ಮಂಥ ಸೇವಕರನ್ನು ತಮ್ಮ ಆಶ್ರಯ ದಲ್ಲಿಟ್ಟುಕೊಂಡು, ಅವರ ಉಪಯೋಗಮಾಡಿಕೊಳ್ಳಹತ್ತಿದರೆಂದರೆ, ಈ ಶಿವಾ ಜಿಯ ಸೊಕ್ಕು ಮುರಿಯಲಿಕ್ಕೆ ಎಂಟು ದಿವಸಗಳು ಸಹ ಹಿಡಿಯಲಿಕ್ಕಿಲ್ಲ. ನನ್ನಂಥ ಬಲ್ಲಮನುಷ್ಯನು ಒಬ್ಬನು ನಿಮ್ಮ ವಶವಾದರೆ ಸಾಕು; ದಿನಕ್ಕೆ ಒಂದು ಕೋ- ಟೆಯು ಕೈವಶವಾಯಿತೆಂದು ತಿಳಿಯಿರಿ. ಮೂಗು ಹಿಡಿದರೆ, ತಾನೇ ಬಾಯಿ ತೆರೆಯುವದಲ್ಲವೆ? ಆದರೆ ಮೂಗು ಎಲ್ಲಿರುವದೆಂಬದು ಮಾತ್ರ ಗೊತ್ತಾಗಲಿಕ್ಕೆ ಬೇಕು" ಎಂದು ಹೇಳಿದನು.

ಈ ಮಾತುಗಳನ್ನಾಡುವಾಗ ಕಿರಾತಸಿಂಗನ ಮನಸ್ಸಿನಲ್ಲಿ ಬೇರೊಂದು

ಮಹತ್ವಾಕಾಂಕ್ಷೆಯ ವಿಚಾರವು ಉತ್ಪನ್ನವಾಯಿತು. ಅದನ್ನು ಆ ಚಾಣಾಕ್ಷನಾದ ಮರಾಟಾ ಶಿಪಾಯಿಯು ಕೂಡಲೆ ಗೊತ್ತು ಹಿಡಿದನು. ಆದರೂ ಅದನ್ನು ಹೊರಗೆ ತೋರಗೊಡದೆ—ನಾವು ಶಿವಾಜಿಯ ಆಶ್ರಯವನ್ನು ಬಿಟ್ಟು ಮೊಗಲರ ಆಶ್ರಯವನ್ನು ಅಪೇಕ್ಷಿಸುವದಕ್ಕೆ ಶಿವಾಜಿಗೆ ಜಯದೊರೆಯುವದಿಲ್ಲೆಂಬದಿಷ್ಟೇ ಕಾರಣವಲ್ಲ; ಅವನು ಒಂದು ಪ್ರಸಂಗದಲ್ಲಿ ನಮ್ಮನ್ನು ಬಹು ಅಪಮಾನಗೊಳಿಸಿರುವನು. ಅದರ ಸೇಡು ತೀರಿಸಿಕೊಳ್ಳುವ ಸಲುವಾಗಿ ನಾವು ಮೊಗಲರನ್ನು ಆಶ್ರಯಿಸಬೇಕಾಗಿರುವದು. ನೀವು ಶಹಾಜಾದಾನ ಕಡೆಗೇ ಯಾಕೆ ಹೊರಟಿರೆಂದು ಕೇಳಬಹುದು; ಆದರೆ ಅದಕ್ಕೆ ನನ್ನ ವಿಜ್ಞಾಪನೆಯಿಷ್ಟೇ; ಶಿವಾಜಿಯ ಮಗ್ಗಲು ಮುರಿಯಲಿಕ್ಕೆ ಜಯಸಿಂಗರಂಥ ನರಸಿಂಹಗಳು ಉತ್ತರದಿಂದ ಇಲ್ಲಿಗೆ ಬಂದಿದ್ದರೂ ಅವರ ಪರಿಚಯವು ನಮಗಿಲ್ಲ; ಅಪರಿಚಿತರನ್ನು ಅವರಾದರೂ ಹ್ಯಾಗೆ ತಮ್ಮ ದಂಡಿನಲ್ಲಿ ಸೇರಿಸಿಕೊಂಡಾರು? ಹಿಂದಕ್ಕೆ ಶಹಾಜಾದನಿಗೂ ಶಿವಾಜಿಗೂ ಅನುಸಂಧಾನವು ನಡೆದಾಗ ನಮ್ಮ ಯಜಮಾನರೇ ಮಧ್ಯಸ್ಥರಾಗಿದ್ದರು. ಈ ಕಾರಣದಿಂದ ನಾವು ಮೊದಲು ಶಹಾಜಾದನ ಕಡೆಗೇ ಹೊರಟಿರುವೆವು; ಅವನ ಸಹಾಯದಿಂದ ಮುಂದೆ ಜಯಸಿಂಗನ ದಂಡಿನಲ್ಲಿ ಸೇರಿ ಶಿವಾಜಿಯ ಸೇಡು ತೀರಿಸಿಕೊಳ್ಳುವದಲ್ಲದೆ, ಔರಂಗಜೇಬ ಬಾದಶಹನಿಂದ ಏನಾದರೂ ಜಹಾಗೀರುಗಳನ್ನು ಪಡೆದು ಆತನ ಸೇವೆಯಲ್ಲಿ ಸೌಖ್ಯ ಹೊಂದಬೇಕೆಂದು ಸಹ ಮಾಡಿದ್ದೇವೆ

ಈ ಮೇರೆಗೆ ಆ ಮರಾಟಾ ಶಿಪಾಯಿಯು ನಂಬಿಗೆ ಹುಟ್ಟುವಂತೆ ಮಾತಾಡಲು ಕಿರಾತಸಿಂಗನಲ್ಲಿ ಆ ದೂರದೃಷ್ಟಿಯ ದುರಾಶೆಯು ನೆಲೆಯೂರಿತು. ಅವನು- ಈ ಮರಾಟಾ ಶಿಪಾಯಿಯೂ, ಈತನ ಯಜಮಾನನೂ ಶಹಾಜಾದನ ಪರಿಚಿತರಾದ್ದರಿಂದ ಇವರಿಂದ ನನ್ನ ಕಾರ್ಯವನ್ನು ಸಾಧಿಸಿಕೊಳ್ಳಬೇಕು, ಎಂದು ಯೋಚಿಸಿ, ಆ ಶಿಪಾಯಿಯನ್ನು ಕುರಿತು--"ಎಲೋ, ಶಿಪಾಯಿ, ನೀವು ಹ್ಯಾಗೂ ಶಹಾಜಾದನ ಕಡೆಗೆ ಹೋಗುವಿರಷ್ಟೇ. ನಾನು ನಿಮಗೊಂದು ವಿಶ್ವಾಸದ ಕೆಲಸವನ್ನು ಕೊಡುತ್ತೇನೆ. ಅದನ್ನು ನೀವು ಚನ್ನಾಗಿ ಮಾಡಿದರೆ ನಿಮ್ಮ ಮೇಲೆ ನಾನು ಸುಪ್ರಸನ್ನನಾಗಿ ನಿಮ್ಮ ಯಜಮಾನನಿಗೆ ಬಾದಶಹನಲ್ಲಿ ಒಳ್ಳೇ ಅಧಿಕಾರ ಕೊಡಿಸುವೆನು; ಹಾಗು ಜಯಸಿಂಗರಾಜನ ಮುಂದೂ ನಿಮ್ಮ ಶಿಫಾರಸು ಮಾಡುವೆನು. ನೀವು ಮಾತ್ರ ನಂಬಿಗೆಯಿಂದ ನಡೆಯಬೇಕು; ಮರಾಟರು ಮೋಸಗಾರರೆಂದು ಪ್ರಸಿದ್ಧಿಯಿರುವದು. ಹಾಗೆ ನೀವು ಮಾಡಿದರೆ ಮಾತ್ರ

ನಿಮ್ಮ ಹೆಸರು ಸಹ ಉಳಿಯಲಿಕ್ಕಿಲ್ಲ.

ಕಿರಾತಸಿಂಗನ ಈ ಮಾತುಗಳನ್ನು ಕೇಳಿ ಆ ಚಾಣಾಕ್ಷನಾದ ಶಿಪಾಯಿಯು ಮನಸ್ಸಿಲ್ಲಿಯೇ ನಕ್ಕು—"ಸರದಾರಸಾಹೇಬ, ಮರಾಟರು ಮೋಸಗಾರರೆಂದು ತಿಳಿಯಬೇಡಿರಿ? ಅವರು ತಾವು ನಂಬಿದ ಒಡೆಯನ ವಿಷಯವಾಗಿ ಜೀವಕ್ಕೆ ಜೀವಾ ಕೊಡುವರು; ಬೇಕಾದರೆ ನೀವು ಒಮ್ಮೆ ನಮ್ಮನ್ನು ಪರೀಕ್ಷಿಸಿ ನೋಡಿರಿ! ನಿಮಗೆ ಮನವರಿಕೆಯಾಗುವದು," ಎಂದನು.

ಸ್ವಾರ್ಥ ಪಿಶಾಚಿಯಿಂದ ಗ್ರಸ್ತನಾದ ಆ ಕಿರಾತಸಿಂಗನು ಆತುರಪಟ್ಟು-- "ಇತ್ತ ಬಾ, ನಿನಗೆ ಆ ಗುಪ್ತಕೆಲಸವನ್ನು ಹೇಳುತ್ತೇನೆ" ಎಂದು ನುಡಿದು, ಅವನ ಕಿವಿಯಲ್ಲಿ ಏನೋ ಹೇಳಿದನು. ಅದನ್ನು ಕೇಳಿ ಆ ಶಿಪಾಯಿಯು ಮನಸ್ಸಿಲ್ಲಿ ವಿಸ್ಮಯಪಟ್ಟು ಬಹಿರಂಗದಲ್ಲಿ ಸಂತೋಷವನ್ನು ಪ್ರಕಟಿಸಿ—ಯಾಕಾಗಲೊಲ್ಲದು; ನೀವು ಹೇಳಿದ ಕೆಲಸವನ್ನು ನಾವು ಮನಸ್ಸುಗೊಟ್ಟು ಮಾಡುವೆವು, ಎಂದು ನುಡಿದು ಅವನ ಅಪ್ಪಣೆಪಡೆದು ತನ್ನ ಯಜಮಾನನಿದ್ದಲ್ಲಿಗೆ ನಡೆದನು. ಇತ್ತ ಕಿರಾತಸಿಂಗನು ಅನಾಯಾಸವಾಗಿ ಕಾರ್ಯವು ಸಾಧಿಸಿತೆಂದು ಆನಂದಪಟ್ಟನು!

ಒಂದುದಿನ ಮುಂಜಾವಿನಲ್ಲಿ ತಾಸೆರಡು ತಾಸು ಹೊತ್ತು ಏರಿರುವದು; ಮಾರ್ಗದಲ್ಲಿ ಎಡಬಲಗಳಲ್ಲಿ ವೃಕ್ಷಗಳು ದಟ್ಟವಾಗಿ ಬೆಳೆದದ್ದರಿಂದ ಸೂರ್ಯನ ಪ್ರಕಾಶಕ್ಕೆ ಸಹ ಆಸ್ಪದವಿಲ್ಲದಾಗಿರುವದು. ಪಕ್ಷಿಗಳ ಕಿಲಕಿಲಾಟದ ಹೊರತು ಅನ್ಯ ಶಬ್ದಗಳು ಅಲ್ಲಿ ಕೇಳಬರುತ್ತಿರಲಿಲ್ಲ ಇಂಥ ನಿರ್ಜನವಾದ ಒಂದು ಮಾರ್ಗವಿಡಿದು ಕೆಲವು ಜನ ರಜಪೂತ ಶಿಪಾಯಿಗಳು ಒಬ್ಬ ಮರಾಟಶಿಪಾಯಿಯೊಡನೆ ಒಂದು ಮೇಣೆಯನ್ನು ಬಹು ಜಾಗರೂಕತೆಯಿಂದ ಸಾಗಿಸಿಕೊಂಡು ಹೋಗುತ್ತಿದ್ದರು. ಅಷ್ಟರಲ್ಲಿ ಆ ಗಿಡಗಳ ಗುಂಪಿನೊಳಗಿಂದ ಕೆಲವು ಜನ ಮರಾಟಾವೀರರು ಆ ರಜಪೂತ ಶಿಪಾಯಿಗಳ ಮೇಲೆ ಬಿದ್ದು, ಅವರನ್ನು ಚದರಿಸಿ ಆ ಮೇಣೆಯನ್ನು ಹೊತ್ತುಕೊಂಡು ಶೀಘ್ರವಾಗಿ ನಡೆದರು.

ಪ್ರಿಯವಾಚಕರೇ, ಆ ಮೇಣೆಯು ಯಾರದು? ಅದರ ಮೇಲೆ ಅಕಸ್ಮಾತ್ತಾಗಿ ಹಲ್ಲೆಯನ್ನು ಮಾಡಿದ ಮರಾಟರು ಯಾರು? ಎಂಬ ಬಗ್ಗೆ ನಿಮಗೆ ಶಂಕೆಯು ಉತ್ಪನ್ನವಾಗಿರಬಹುದಷ್ಟೇ; ಮೇಲೆ ಬರೆದಂತೆ ಕಿರಾತಸಿಂಗನು ಆಗಂತುಕನಾದ ಒಬ್ಬ ಮರಾಟ ಶಿಪಾಯಿಗೆ ಒಂದು ಗುಪ್ತ ಕೆಲಸವನ್ನು ಹೇಳಿದ್ದನಷ್ಟೇ? ಆ ಗುಪ್ತ ಕೆಲಸವೆಂದರೆ ನೂರ್‌ಎಲ್‌ಹುದಾಳನ್ನು ಮರಾಟರೇ ಸೆರೆಹಿಡಿದು, ಮರಾಟರೇ ಬಹಾಚಾದನಿಗೆ ಮುಟ್ಟಿಸಿದರೆಂದು ಪ್ರಸಿದ್ಧಿಸುವದು. ಅದರಂತೆ

ಅವನು ಆ ಶಿಪಾಯಿಯನ್ನು ಹುರಿದುಂಬಿಸಿ, ಅವನ ವಶಕ್ಕೆ ನೂರ್‌ಎಲ್‌ಹುದಾಳನ್ನೂ ತನ್ನ ಕೆಲವು ಜನ ರಜಪೂತ ಶಿಪಾಯಿಗಳನ್ನೂ ಕೊಟ್ಟನು. ಆ ಶಿಪಾಯಿಯು ಅವರೆಲ್ಲರನ್ನು ಕರಕೊಂಡು ಹೋಗುತ್ತಿರುವಾಗ, ಆ ಶಿಪಾಯಿಯೂ ಅವನ ಯಜಮಾನನಾದ ಆ ಮರಾಟಾಸರದಾರನೂ ಮೊದಲೇ ಆಲೋಚಿಸಿಟ್ಟಂತೆ ಆ ಸ್ತ್ರೀಯ ಪಾತಿವ್ರತ್ಯವನ್ನು ರಕ್ಷಿಸುವದಕ್ಕಾಗಿ ಮರಾಟರು ಬಂದು, ಆಕೆಯನ್ನು ಕಿರಾತಸಿಂಗನ ಜನರಿಂದ ಬಿಡಿಸಿಕೊಂಡು ನಡೆದರು.

ಆ ಬಳಿಕ ಮರಾಟರು ನೂರಎಲ್‌ಹುದಾಳನ್ನು 'ಬೋರಗಾಂವ' ಎಂಬ ಪಟ್ಟಣಕ್ಕೆ ಕರಕೊಂಡು ಹೋಗಿ ಒಂದು ದೊಡ್ಡ ಮನೆಯಲ್ಲಿ ಆಕೆಯನ್ನು ಇಟ್ಟರು. ಅಲ್ಲಿ ಒಬ್ಬ ಮರಾಟಾ ಸ್ತ್ರೀಯು ಆಕೆಯ ಬಳಿಗೆ ಬಂದು ಆಕೆಯನ್ನು ಸಂತೈಸತೊಡಗಿದಳು. ಮೊದ ಮೊದಲು ನೂರಎಲ್‌ಹುದಾಳಿಗೆ ನಾನು ಎಲ್ಲಿ ಬಂದೆನು? ಈಗ ಯಾರ ವಶದಲ್ಲಿರುವೆನು? ಎಂಬ ಯಾವ ಸಂಗತಿಗಳೂ ತಿಳಿಯದೆ ದಿಙ್ಮೂಢಳಾದಳು. ಬಳಿಕ ಒಂದೆರಡು ದಿನಗಳ ಮೇಲೆ ಆ ಮರಾಟಾ ಸ್ತ್ರೀಯಿಂದ ಎಲ್ಲ ಸಂಗತಿಗಳು ತಿಳಿಯಲು ಆಕೆಗೆ ಸಮಾಧಾನವಾಯಿತು. ರಜಪೂತರು ತನ್ನನ್ನು ಶಹಾಜಾದನ ಕಡೆಗೆ ಎಳೆದೊಯ್ಯುತ್ತಿರುವಾಗ, ಮರಾಟರು ಕನಿಕರಪಟ್ಟು ಪತಿವ್ರತೆಯರ ಮಾನವನ್ನು ಕಾಯುವದಕ್ಕಾಗಿ ತನ್ನನ್ನು ಅವರಿಂದ ಬಿಡಿಸಿಕೊಂಡು ಬಂದು ಇಲ್ಲಿ ಇಟ್ಟಿರುವರೆಂದೂ, ಇನ್ನು ಸ್ವಲ್ಪ ದಿವಸಗಳಲ್ಲಿಯೇ ತಾನು ತಂದೆಯ ಬಳಿಗೆ ಹೋಗುವೆನೆಂದೂ ವಿದಿತವಾಗಿ ಆ ನೂರಎಲ್‌ಹುದಾಳಿಗೆ ಪರಮಾನಂದವಾಯಿತು. ಆ ಆನಂದದ ಭರದಲ್ಲಿ ಆಕೆಯು ಆ ಮರಾಟರನ್ನೂ, ಆ ಮರಾಟಾ ಸ್ತ್ರೀಯನ್ನೂ ಬಹು ವಿಧವಾಗಿ ಅಭಿನಂದಿಸಿದಳು. ಪ್ರಿಯ ವಾಚಕರೇ, ಹೀಗೆ ನೂರಎಲ್‌ಹುದಾಳ ಮಾನಧನವನ್ನು ರಕ್ಷಿಸಿ, ಅವಳ ಅಭಿನಂದನಕ್ಕೆ ಪಾತ್ರರಾದ ಆ ಮರಾಟರು ಯಾರಾಗಿರಬಹುದು?



## ೧೨—ಮುರಾರ ಬಾಜಿ.

ಹಿಂದಿನ ಪ್ರಕರಣದಲ್ಲಿ ಕಿರಾತಸಿಂಗನಿಗೆ ದಾರಿಯಲ್ಲಿ ಭೆಟ್ಟಿಯಾದ ಆ ಮರಾಟ ಸರದಾರನೇ ನೂರಎಲ್‌ಹುದಾಳ ಮಾನರಕ್ಷಕನು. ಆತನು ಶಿವ ರಾಜನ ಪಕ್ಷದವನು. ಒಪ್ಪಂಬಡಿಕೆಯ ಸಂಧಾನದ ಸಲುವಾಗಿ ಶಹಾಜಾದನ ಕಡೆಗೆ ಹೊರಟಿದ್ದನು. ಮಾರ್ಗದಲ್ಲಿ ಒಬ್ಬ ಪತಿವ್ರತೆಯ ಗೋಳಾಟವನ್ನು ಕೇಳಿ, ಮರಾಟರ ಶೀಲಕ್ಕನುಸರಿಸಿ ತಾನು ತನ್ನ ಶಿಪಾಯಿಯನ್ನು ಕೂಡಿಕೊಂಡು ಹಲವು ಹಂಚಿಕೆಗಳನ್ನು ಮಾಡಿ ಕಿರಾತಸಿಂಗನಿಗೆ ಮಂಕುಬೂದಿಯನ್ನು ಹಚ್ಚಿ ದನು. ಹೀಗೆ ಮರಾಟರು ಅರ್ಥಾತ್ ಶಿವರಾಜನ ಪಕ್ಷದವರು ನೈತಿಕ ದೃಷ್ಟಿ ಯಿಂದ ಶತ್ರುಗಳಿಗೆ ಕೂಡಾ ಉಪಕಾರವ ಮಾಡುತ್ತಿರಲು, ಇತ್ತ ನೀಚನಾದ ಔರಂಗಜೇಬ ಬಾದಶಹನಿಂದ ಪ್ರೇರಿತನಾದ ದಿಲೇರಖಾನನು ಮರಾಟರನ್ನು ಪರಿಪರಿಯಾಗಿ ಗೋಳಾಡಿಸುತ್ತಿದ್ದನು. ತನ್ನ ಮಗಳಾದ ನೂರಎಲ್‌ಹುದಾಳನ್ನು ಮರಾಟರೇ ಅಪಹರಿಸಿದರೆಂದು ಭ್ರಾಮಕ ಕಲ್ಪನೆಯಿಂದ ಅವನು ಪುರಂಧರ ಕೋಟೆಗೆ ಮುತ್ತಿಗೆಯನ್ನಿಟ್ಟನು. ಆ ಕೋಟೆಯ ಸುತ್ತಲಿನ ಬೆಳೆಯುಳ್ಳ ಪ್ರದೇಶಗಳನ್ನೆಲ್ಲ ಹಾಳುಮಾಡಿದನು. ಕೋಟೆಯ ಒಳಗಿನವರಿಗೆ ಅನ್ನ ನೀರು ಗಳು ದೊರೆಯಬಾರದೆಂದು ಎಲ್ಲ ದ್ವಾರಗಳನ್ನು ಬಂದೋಬಸ್ತ ಮಾಡಿದನು. ಧೂರ್ತನಾದ ಕಿರಾತಸಿಂಗನು ತನ್ನ ಬೇಳೆಯನ್ನು ಬೇಯಿಸಿಕೊಳ್ಳುವದಕ್ಕಾಗಿ ದಿಲೇರಖಾನನಿಗೂ ಜಯಸಿಂಗನೂ ಒಡಕು ಹುಟ್ಟಿಸಬೇಕೆಂದು ಹಲವು ಸುಳ್ಳು ಸುದ್ದಿಗಳನ್ನು ಹುಟ್ಟಿಸಿಕೊಂಡು ದಿಲೇರಖಾನನ ತಲೆಯಲ್ಲಿ ತುಂಬತೊಡಗಿದನು. ಕಿರಾತಸಿಂಗನ ಈ ವಿಷಬೀಜಾರೋಪಣದಿಂದ ದಿಲೇರಖಾನನ ತ್ವೇಷವು ಹೆಚ್ಚಾಗಿ, ಆತನು ಪುರಂಧರ ಕೋಟೆಯನ್ನು ನೆಲಸಮ ಮಾಡುವ ಸಂಕಲ್ಪ ಮಾಡಿದನು. ಆತನು ಮಣ್ಣಿನ ದೊಡ್ಡ ದೊಡ್ಡ ದಿನ್ನೆಗಳನ್ನು ಏರಿಸಿ ಅವುಗಳ ಮೇಲೆ ತೋಫು ಗಳನ್ನಿಟ್ಟು ಕೋಟೆಗೆ ಹೊಡೆಯತೊಡಗಿದನು. ಇದೇ ಸಂಧಿಯಲ್ಲಿ ಪುರಂಧರ ಕೋಟೆಯ ಸಮೀಪದಲ್ಲಿರುವ 'ರುದ್ರಮಾಳ' ಎಂಬ ಕೋಟೆಯು ಮೊಗಲರ ಕೈಸೇರಿದ್ದರಿಂದ ಅವರಿಗೆ ಮತ್ತಿಷ್ಟು ಹುರುಪು ಬಂದಿತು.

ಈ ಮೇರೆಗೆ ದಿಲೇರಖಾನನು ಎಷ್ಟು ತ್ವೇಷದಿಂದ ಜಿಗಿದಾಡಿದರೂ ಕೋಟೆಯೊಳಗಿನ ಮರಾಟರು ಹಸೆಯುಡಾದರು. ಖಾನನು ಹೊರಗಿನ ಮಾರ್ಗ

ಗಳನ್ನು ಬಂದುಮಾಡಿದರೂ ಆ ಕೋಟೆಗೆ ಭೂಗತವಾದ ಗುಪ್ತಮಾರ್ಗಗಳು ಹಲವು ಇದ್ದದರಿಂದ ಕೋಟೆಯ ಒಳಗಿನವರಿಗೆ ಯಾವ ತರದ ತೊಂದರೆಯೂ ಒದಗಲಿಲ್ಲ. ಶೂರನಾದ ಮುರಾರಬಾಜಿ ಎಂಬವನು ಕೋಟೆಯ ಕಿಲ್ಲೇದಾರನಿದ್ದದರಿಂದ ಅವನು ಹಲವು ಉಪಾಯಗಳಿಂದ ಮುಸಲ್ಮಾನರ ಆಟವನ್ನು ನಡೆಯಗೊಡದಾದನು. ಈ ಮುರಾರಬಾಜಿಯು ಮೇಲಾದ ಸ್ವಾಮಿಭಕ್ತನು. ಈತನಲ್ಲಿದ್ದ ಸ್ವದೇಶ-ಸ್ವಧರ್ಮಗಳ ಮೇಲಿನ ಭಕ್ತಿಯು ಅವರ್ಣನೀಯವಾಗಿತ್ತು. ಈತನ ಸಂಬಂಧವಾಗಿ ಇರತಕ್ಕ ಆಖ್ಯಾಯಿಕೆಯೇನಂದರೆ:--ಮುರಾರಬಾಜಿಯು ಮೊದಲು ಶಿವಾಜಿಯ ಕಡುವೈರಿಯಾದ ಚಂದ್ರರಾವ ಮೋರೆ ಎಂಬ ಸರದಾರನ ಬಳಿಯಲ್ಲಿರುತ್ತಿದ್ದನು. ಶಿವಾಜಿಯು ಚಂದ್ರರಾಯನ ಮೇಲೆ ಸ್ವಾರೀಮಾಡಿದಾಗ ಮುರಾರಬಾಜಿಯ ಶೌರ್ಯ ಸ್ವಾಮಿಭಕ್ತ್ಯಾದಿ ಸದ್ಗುಣಗಳು ಅವನ ದೃಷ್ಟಿಗೆ ಬಿದ್ದವು. ಮುಂದೆ ಶಿವಾಜಿಯು ಚಂದ್ರರಾಯನನ್ನು ಸಂಹರಿಸಿ, ಅವನ ತಮ್ಮನಾದ ಕೃಷ್ಣರಾಯನನ್ನು ಸೆರೆಹಿಡಿದು, ಅವನನ್ನೂ ಕೊಲ್ಲಿಸುವ ಹೆದರಿಕೆಯನ್ನು ತೋರಿಸಿದನು ಮುರಾರಬಾಜಿಯು ಚಂದ್ರರಾಯನಿಂದ ಅನಂತ ಉಪಕಾರಗಳನ್ನು ಹೊಂದಿದ್ದರಿಂದ ಅವನು ಸ್ವಾಮಿಭಕ್ತಿಪ್ರೇರಿತನಾಗಿ ಸಿಕ್ಕಷ್ಟು ದಂಡಿನಿಂದ ಶಿವಾಜಿಯ ಕೂಡ ಯುದ್ಧಮಾಡಿದನು; ಆದರೆ ಶಿವಾಜಿಯು ಮುಂದೆ ಪಾರಾಗುವದು ಅವನಿಂದಾಗಲಿಲ್ಲ. ಆಗ ಶಿವಾಜಿಯು ಸೆರೆಸಿಕ್ಕ ಮೋರೇ ಕೃಷ್ಣರಾಯನಿಗೆ---"ನಿನಗೆ ಜೀವದಾನವು ಬೇಕಾಗಿದ್ದರೆ, ಮುರಾರಬಾಜಿಯು ತನ್ನ ಸರಂಜಾಮುದೊಡನೆ ನಮ್ಮ ಚಾಕರಿಯನ್ನು ಮಾಡಿಕೊಂಡಿರುವಂತೆ ಮಾಡು" ಎಂದು ಹೇಳಿಕಳಿಸಿದನು. ಆ ಪ್ರಸಂಗದಲ್ಲಿ ಮುರಾರಬಾಜಿಯು ತನ್ನ ಒಡೆಯನ ಪ್ರಾಣರಕ್ಷಣಕ್ಕಾಗಿ ಕೃಷ್ಣರಾಯನ ಅಪ್ಪಣೆಯಂತೆ ಶಿವಾಜಿರಾಜನ ಚಾಕರಿಯನ್ನು ವಹಿಸಿದನು. ಅಂದಿನಿಂದ ಅವನು ಶಿವಪ್ರಭುವಿನ ನಂಬಿಗಸ್ತ ಸೇವಕರಲ್ಲಿ ಒಬ್ಬನಾಗಿ, ಅತ್ಯುತ್ಕಟ ದೇಶಭಕ್ತಿಯಿಂದ ಸ್ವರಾಜ್ಯದ ಸೇವೆಯನ್ನು ಮಾಡಿದನು.

ಇಂಥ ಅಸಾಧಾರಣ ವ್ಯಕ್ತಿಯಾದ ಮುರಾರಬಾಜಿಯು ಖಾನನಿಗೆ ಕೈ ತೋರಿಸುವದಕ್ಕಾಗಿ ಅನೇಕ ಉಪಾಯಗಳನ್ನು ಯೋಚಿಸಿದನು. ಮುರಾರಬಾಜಿಯ ಯುಕ್ತಿ-ಪ್ರಯುಕ್ತಿಗಳಿಗೆ ಬೆದರಿ, ಪುಕ್ಕನಾದ ದಿಲೇರಖಾನನು ಪುರಂಧರ ಕೋಟೆಯಿಂದ ೩ ಮೈಲುಗಳ ಮೇಲೆ ತಳವೂರಿದ್ದನು. ಒಮ್ಮೆ ಮುರಾರಬಾಜಿಯು ಮೊಗಲಸಿಪಾಯಿಯ ವೇಷವನ್ನು ಧರಿಸಿ, ಖಾನನ ಸೈನ್ಯವನ್ನು ಹೊಕ್ಕು ಅದನ್ನೆಲ್ಲ ನೋಡಿಕೊಂಡು ಆತನ ಮದ್ದಿನ ಖಜಾನೆಗೆ ಬೆಂಕಿಯನ್ನು ಹಚ್ಚಿ

ಬಂದನು. ಈ ತರದ ಕೃತಿಗಳಿಂದ ಖಾನನಲ್ಲಿ ಸಂತಾಪವು ಹೆಚ್ಚಿ, ಅವನು ಔರಂಗಾಬಾದದಿಂದ ಹೊಸ ಸಹಾಯವನ್ನು ತರಿಸಿಕೊಂಡು ಕೋಟೆಗೆ ಕೊಳ್ಳಿಯಿಟ್ಟನು. ಮುರಾರಬಾಜಿಯು ನಾಮಾಂಕಿತ ಶೂರನಾದ್ದರಿಂದ ಕೋಟೆಯ ಸಂರಕ್ಷಣೆಗಾಗಿ 'ಬಂಧು ಶಂಕರಾಜಿ', 'ಬಾಜಿ ಸಭಾಸದ' ಎಂಬ ಶೂರರನ್ನು ನೇಮಿಸಿ, ಕೋಟೆಯ ಬಾಗಿಲವನ್ನು ತೆರೆದು, ಅರ್ಧ ಸೈನ್ಯದೊಡನೆ ದಿಲೇರಖಾನನ ದಂಡಿನ ಮೇಲೆ ಬಿದ್ದನು. ಕೋಟೆಯೊಳಗಿನ ಉಳಿದ ಸೈನಿಕರು ದೊಡ್ಡ ದೊಡ್ಡ ಬಂಡೆಗಳ ವರ್ಷಣದಿಂದಲೂ, ಗುಂಡಿನ ಹೊಡೆತಗಳಿಂದಲೂ ಶತ್ರುಸೈನ್ಯವನ್ನು ನುಗ್ಗು ಮಾಡಹತ್ತಿದರು; ಇತ್ತ ಮುರಾರಬಾಜಿಯು 'ಹರಹರ ಮಹಾದೇವ' ಎಂದು ಗರ್ಜಿಸಿ ಕಾಳಗಕ್ಕೆ ಪ್ರಾರಂಭಿಸಿದನು. ಶತ್ರುಗಳು ಕೋಟೆಯ ಮೇಲಿಂದಲೇ ಯುದ್ಧ ಮಾಡುವರೆಂಬ ನಂಬಿಗೆಯಿಂದ ದಿಲೇರಖಾನನ ದಂಡಿನವರು ಮೈಮರೆತು ಕುಳಿತಿದ್ದರು. ನೋಡಿದತ್ತೆಲ್ಲ ಅವರಲ್ಲಿ ಅವ್ಯವಸ್ಥೆಯು ಕಂಡು ಬರುತ್ತಿತ್ತು. ಮೊಗಲರ ಈ ಮೈಮರಸುತನದ ಲಾಭವನ್ನು ನಮ್ಮ ಮುರಾರಬಾಜಿಯು ಚನ್ನಾಗಿ ತಕ್ಕೊಂಡನು. ಮೊಗಲರ ದಂಡಿನಲ್ಲಿ 'ಅರೇಅಲ್ಲಾ ಅರೇಅಲ್ಲಾ' ಎಂದು ಹಾಹಾಕಾರವು ಉತ್ಪನ್ನವಾಯಿತು.

ದಿಲೇರಖಾನನು ಇದನ್ನೆಲ್ಲ ನೋಡಿ ವಿಸ್ಮಯಪಟ್ಟು ಓಡಿಹೋಗುತ್ತಿರುವ ತನ್ನ ದಂಡಿನವರನ್ನು ತಡೆದು, ಯುದ್ಧಕ್ಕೆ ನಿಂತನು. ಮುರಾರಬಾಜಿಯು ತೀರ ಸ್ವಲ್ಪ ದಂಡಿನಿಂದ ತನ್ನ ಅಪಾರವಾದ ದಂಡನ್ನು ಚದರಿಸಿದ್ದನ್ನು ಕಂಡು ಅವನಿಗೆ ಸಖೇದಾಶ್ಚರ್ಯವಾಯಿತು. ಆಗ ಎರಡೂ ಬಣದವರಿಗೂ ಕೈಗೆ ಕೈಹತ್ತಿ ಬಡಿದಾಟಕ್ಕೆ ಪ್ರಾರಂಭವಾಯಿತು. ಆರು ತಾಸುಗಳ ವರೆಗೆ ಉಭಯ ಪಕ್ಷಗಳಲ್ಲಿಯ ವೀರರು ಘನಘೋರವಾಗಿ ಕಾದಾಡಿದರು. ಮೊಗಲಸೈನ್ಯವು ಮರಾಟರ ಏರಾಟವನ್ನು ತಡೆಯಲಾರದೆ ಹಿಂದಕ್ಕೆ ಸರಿಯಹತ್ತಿತು. ಮುರಾರಬಾಜಿಯು ತನ್ನ ಐವತ್ತು ಜನರೊಂದಿಗೆ ಕಾದುತ್ತ ಕಾದುತ್ತ ದಿಲೇರಖಾನನ ಡೇರೆಯ ಬಳಿಗೆ ಹೋದನು. ದಿಲೇರಖಾನನ ಸೇಡನ್ನು ತೀರಿಸಿಯೇ ಬರುವೆನೆಂದು ಪ್ರತಿಜ್ಞೆ ಮಾಡಿ ಬಂದ ಮುರಾರಬಾಜಿಯು ಖಾನನ ಡೇರೆಯನ್ನು ನೋಡಿ ಸ್ಫೂರ್ತಿಗೊಂಡನು ಆಗ ಆತನು ತನ್ನ ಯುದ್ಧಾವೇಶವನ್ನು ಖಾನನಿಗೆ ಚನ್ನಾಗಿ ತೋರಿಸಿದನು. 'ಮರಾಟರೆಂದರೆ ವೀರ ಸಿಂಹಗಳು' ಎಂದು ಜಯಸಿಂಗನು ಅನ್ನುತ್ತಿದ್ದ ಮಾತು ಈಗ ಖಾನನಿಗೆ ಪ್ರತ್ಯಕ್ಷವಾಗಿ ಅನುಭವಕ್ಕೆ ಬಂದಿತು. ಖಾನನು ಮುರಾರಬಾಜಿಯ ನಿಜವಾದ ಕ್ಷಾತ್ರತೇಜಸ್ಸನ್ನು ನೋಡಿ ನುಡಿದನೇನಂದರೆ:-"ಮುರಾರಜೀ,

ನೀನು ಯುದ್ಧಮಾಡಬೇಡ; ನಿನ್ನ ಅತುಲ ಪರಾಕ್ರಮವನ್ನು ನೋಡಿ ನನಗೆ ಅತ್ಯಂತ ಸಂತೋಷವಾಗಿರುವದು. ನಿನಗೆ ನಾನು ಅಭಯವನ್ನು ಕೊಡುತ್ತೇನೆ. ನೀನು ನಮ್ಮ ದಂಡಿನಲ್ಲಿ ಕೂಡಿಕೋ; ನಾನು ಬಾದಶಹನ ಮುಂದೆ ನಿನ್ನ ಶಿಫಾರಸ್ಸನ್ನು ಮಾಡಿ, ನಿನಗೆ ಬಾದಶಹನ ಕಡೆಯಿಂದ ದಕ್ಷಿಣದ ಸುಭೇದಾರಿಕೆಯನ್ನು ಕೊಡಿಸುವೆನು. ನೀನು ಶಸ್ತ್ರವನ್ನು ಕೆಳಗಿಳಿಸಿ ನಾನು ಹೇಳಿದಂತೆ ಮಾಡು.''

ಈ ಪ್ರಕಾರ ಶಬ್ದಗಳು ದಿಲೇರಖಾನನಿಂದ ಹೊರಬಿದ್ದ ಕೂಡಲೆ ಮುರಾರಬಾಜಿಯ ಅಂಗಾಲೊಳಗಿನ ಉರಿಯು ನಡುನೆತ್ತಿಗೆ ಮುಟ್ಟಿತು. ಆಗ ಅವನು ತ್ವೇಷದಿಂದ ಖಾನನನ್ನು ನಿಂದಿಸಿ:-“ಮೂರ್ಖಾ, ನಿನ್ನ ಅಭಯವನ್ನು ತಕ್ಕೊಂಡು ಮಾಡುವದೇನು? ನಿನ್ನ ವೈರಿಯಾಗಿ ಬಂದ ನಾನು ನಿನ್ನ ದಾಸನಾಗುವೆನೇ? ನಿನ್ನ ದಂಡು ಬೇಕಾದಷ್ಟು ಇರಲಿ? ನೀನು ಬೇಕಾದಷ್ಟು ಶೌರ್ಯದಿಂದ ಕಾದಾಡು; ಆದರೆ ನನ್ನ ದೇಹದಲ್ಲಿ ಪಂಚಪ್ರಾಣಗಳು ಇರುವ ವರೆಗೆ ಪುರಂಧರ ಕೋಟೆಯು ನಿನ್ನ ಕೈವಶವಾಗದೆಂದು ತಿಳಿ'' ಎಂದು ನುಡಿಯಲು, ಖಾನನಿಗೆ ಆತನ ಈ ಮಾತುಗಳಿಂದ ಅತಿಶಯವಾದ ಸಂತಾಪವಾಯಿತು. ಆಗ ಆತನು ರೊಚ್ಚಿಗೆದ್ದು ತಾನೇ ಮುಂದುವರಿದು ಮುರಾರಬಾಜಿಯ ಕೂಡ ಕಾದಲಾರಂಭಿಸಿದನು. ಖಾನನು ಸ್ವತಃ ಮುಂದುವರಿದದ್ದನ್ನು ನೋಡಿ ಅವನ ದಂಡಾಳುಗಳಿಗೆ ನಾಚಿಕೆಯುಂಟಾಯಿತು. ಈ ಕಾಲಕ್ಕೆ ಮುರಾರಬಾಜಿಯ ಎಷ್ಟೋಜನ ಸೇವಕರು ಮಡಿದರು, ಎಷ್ಟೋಜನ ಘಾಯಹೊಂದಿದರು. ಹೀಗಿರಲು ಮುರಾರಬಾಜಿಯ ಢಾಲು ಎರಡು ತುಂಡುಗಳಾಗಿ ಬಿದ್ದಿತು. ಆಗ ಆತನು ಮುಂಗೈಗೆ ಶಲ್ಲೆಯನ್ನು ಸುತ್ತಿಕೊಂಡು ಅದನ್ನೇ ಢಾಲಿನಂತೆ ಉಪಯೋಗಿಸಿ ಯುದ್ಧಮಾಡತೊಡಗಿದನು. ಇಂಥ ಕೃತ್ರಿಮ ಢಾಲಿನಿಂದ ಘಾಯದಲ್ಲಿ ಎಷ್ಟರ ಮಟ್ಟಿಗೆ ಪ್ರಯೋಜನವಾಗಬೇಕು? ಆದರೂ ಆ ಮುರಾರಬಾಜಿಯು ಒಳ್ಳೇ ನಿಶ್ಚಯದ ಸ್ವಭಾವದವನಾದ್ದರಿಂದ ಅಂಥ ಸ್ಥಿತಿಯಲ್ಲಿಯೂ ಕಾದತೊಡಗಿದನು. ಖಾನನು ಬಾಜಿಯು ಹೊಡತಕ್ಕೆ ನುಗ್ಗಾಗ ತೊಡಗಿದನು. ಆಗ ಖಾನನು ಸಿಟ್ಟಿನಿಂದ ಒಮ್ಮಿಂದೊಮ್ಮೆ ಮುಗಿಬೀಳಲು ಆತನದೊಂದು ಬಾಣವು ತಾಕಿ ಮುರಾರಬಾಜಿಯ ಚಂಡು ಹಾರಿಹೋಯಿತು. ಹೀಗೆ ಆತನ ರುಂಡವು ದಿಂಡದಿಂದ ಬೇರೆಯಾದರೂ ಕಾದಿಕಾದಿ ಆವೇಶಗೊಂಡಿದ್ದ ಆತನ ಧಡವು ೩೦೦ಜನ ಮೊಗಲರನ್ನು ಸಂಹರಿಸಿ ತಾನು ನೆಲಕ್ಕೆ ಬಿದ್ದಿತಂತೆ ! !

ಪ್ರಿಯ ವಾಚಕರೇ, ಮುರಾರಬಾಜಿಯ ದಿವ್ಯಜ್ಯೋತಿಯು ಐಕ್ಯವಾಯಿ

ತಲ್ಲ! ಇಂಥ ವ್ಯಕ್ತಿಯು ಹುಟ್ಟಿಬೆಳೆಯುವದು ಅಪರೂಪವಲ್ಲವೆ! ಆ ಪುಣ್ಯ ಪ್ರತಾಪಿಯು ದೇಹಪತನವಾಗುವ ಮೊದಲು ತನ್ನ ಜನರನ್ನು ಕುರಿತು ನುಡಿದದ್ದೇನಂದರೆ:—"ನನ್ನ ಶರೀರವು ಶತ್ರುಗಳ ಹೊಡತಗಳಿಂದ ಚೂರು ಚೂರಾದರೂ ಅವನ್ನೆಲ್ಲ ಒಟ್ಟುಗೂಡಿಸಿ ಈ ಮುರಕಡಾಲಿನಮೇಲೆ ಅವನ್ನು ಹಾಕಿಕೊಂಡು ಶಿವಪ್ರಭುವಿನ ಚರಣಕಮಲಗಳಲ್ಲಿ ಅರ್ಪಿಸಬೇಕು; ಮತ್ತು ಆ ಪ್ರಭುವಿಗೆ ಹೇಳತಕ್ಕದ್ದೇನಂದರೆ:—"ನಿಮ್ಮ ಬಳಿಯಲ್ಲಿ ಪರಾಕ್ರಮಶಾಲಿಗಳು ಬಹು ಜನರಿರುತ್ತಾರೆ. ದುಷ್ಟಯವನರಿಂದ ದುರ್ಬಲರಾದ ಹಿಂದುಜನರಿಗೆ ಆಗುತ್ತಿದ್ದ ದುಃಖವನ್ನು ಹೋಗಲಾಡಿಸುವದಕ್ಕಾಗಿ ಹೀಗೆಯೇ ಪ್ರಯತ್ನಮಾಡುತ್ತಿರಬೇಕು. ನನ್ನ ಸಂತತಿಯವರು ನಿಮ್ಮ ಸೇವೆಯನ್ನು ಆಸ್ಥೆಯಿಂದ ಮಾಡಲಿ!!"

ಈ ಪ್ರಕಾರ ಬಾಜಿಯ ನಿರೂಪವನ್ನು ಸೇವಕರು ಶಿವಪ್ರಭುವಿಗೆ ಮುಟ್ಟಿಸಿದರು; ಮತ್ತು ಬಾಜಿಯ ಶರೀರದ ತುಂಡುಗಳನ್ನು ಥಾಲಿನಮೇಲೆ ಹಾಕಿಕೊಂಡು ಹೋಗಿ ಮಹಾರಾಜರ ಮುಂದೆ ಇಟ್ಟರು ಈ ಸ್ವಾಮಿಭಕ್ತನ ನಿರೂಪವನ್ನು ಕೇಳಿಯೂ ಆತನು ಶತ್ರುಗಳ ಸಂಗಡ ಮಾಡಿದ ಪ್ರತಿಜ್ಞೆ ಹಾಗು ಮುತ್ಸದ್ದಿಗಿರಿ ಇವುಗಳನ್ನು ವಿಚಾರಿಸಿಯೂ ಮತ್ತು ಆತನಲ್ಲಿರುವ ಸದ್ಗುಣಗಳು ಕಣ್ಣುಮುಂದೆ ಕಟ್ಟಿದಂತಾದ್ದರಿಂದಲೂ ಮಹಾರಾಜರಿಗೆ ಕಡುದುಃಖವಾಯಿತು. "ಮುರಾರಬಾಜಿಯು ಇದ್ದನೆಂತಲೇ ನಮ್ಮ ಪುರಂಧರಕೋಟೆಯು ಸಂರಕ್ಷಣವಾಯಿತು. ಇನ್ನು ಅಂಥ ವಸ್ತಾದಿಯು ಸಿಗುವದು ದುರ್ಲಭವು" ಎಂಬ ಉದ್ಗಾರವನ್ನು ತೆಗೆದು ಮಹಾರಾಜರು ಥಾಲಿನಮೇಲಿರುವ ಮುರಾರಬಾಜಿಯ ದೇಹದ ಚೂರುಗಳ ಮೇಲೆ ಬಳಬಳ ಅಶ್ರುಗಳನ್ನು ದುರಿಸಿದರು!!

ಮುರಾರಬಾಜಿಯು ಬಿದ್ದ ಬಳಿಕ ದಿಲೇರಖಾನನು ಪುರಂಧರ ಕೋಟೆಯ ಮೇಲೆ ಸಾಗಿಹೋದನು; ಆದರೆ ಅಲ್ಲಿಯ ಶೂರಮರಾಟರು ತಮ್ಮ ನಾಯಕನು ಮಡಿದಿದ್ದರೂ ಎದೆಗುಂದದೆ ಜೀವದ ಹಂಗುದೊರೆದು ಕಾದಿದ್ದರಿಂದ ಮೊಗಲರು ಹತವೀರ್ಯರಾಗಿ ಹಿಂದಿರುಗಬೇಕಾಯಿತು! ದಿಲೇರಖಾನನು ತಳಮಳಿಸುತ್ತ ಪುನಃ ರಾಹುಟಿಗೆ ಬಂದನು. ಮಹಾರಾಜರು ಮುರಾರಬಾಜಿಯ ಮಕ್ಕಳನ್ನು ಕರೆಯಿಸಿಕೊಂಡು ಅವರಿಗೆ ಪಲ್ಲಕ್ಕಿ ಹಾಗು ವಸ್ತ್ರಭೂಷಣಗಳನ್ನು ಪಾರಿತೋಷಕವಾಗಿ ಕೊಟ್ಟರು! ಸ್ವದೇಶಹಿತಕ್ಕಾಗಿ ದೇಹನ್ನರ್ಪಿಸಿದ ಮುರಾರಬಾಜಿಯ ಶುಭ್ರಕೀರ್ತಿಯು ಆಚಂದ್ರಾರ್ಕ ಸ್ಥಿರವಾಯಿತು!!

---

## ೧೩—ದೇವಿಯ ದೃಷ್ಟಾಂತ.

ಮೊರಾರಬಾಜಿಯ ಮರಣದಿಂದ ಮಹಾರಾಜರಿಗೆ ಬಹಳ ವ್ಯಸನವಾಯಿತು. ಅವರು ಒಂದು ದಿನ ರಾಯಗಡದ ಮೇಲೆ ತಾವು ಕೂಡ್ರತಕ್ಕ ಏಕಾಂತಸ್ಥಳದಲ್ಲಿ ವಿಚಾರ ಮಾಡುತ್ತ ಕುಳಿತುಕೊಂಡಿದ್ದರು. ಮೊರಾರಬಾಜಿಯ ಪ್ರಕರಣದಂಥ ಎಷ್ಟೋ ಅನಿಷ್ಟಸಂಗತಿಗಳು ಅವರಿಗೆ ಗೊತ್ತಾದ್ದರಿಂದ ಅವುಗಳನ್ನೇ ಕುರಿತು ಅವರಲ್ಲಿ ವಿಚಾರವು ನಡೆದಿತ್ತು. ನಾವು ಈ ಕಾಲಕ್ಕೆ ಎಷ್ಟು ಸಾಹಸ ಮಾಡಿದರೂ ನಮ್ಮ ಪಾಲಿಗೆ ಯಶಃಪ್ರಾಪ್ತಿಯಾಗುವ ಸುಲಕ್ಷಣವು ತೋರುವದಿಲ್ಲ, ಎಂದು ಅವರು ನಿಟ್ಟುಸುರು ಬಿಡಹತ್ತಿದರು. ನಮ್ಮ ತಂತ್ರಗಳೆಲ್ಲ ಇಂದಿಗೆ ಲಯವಾಗುವವೋ ಏನು? ಇಷ್ಟುದಿನ ಕಷ್ಟಪಟ್ಟದ್ದು ನೀರಲ್ಲಿ ಹೋಮಮಾಡಿದಂತಾಗುವದೊ? ಎಂಬ ಸಂಗತಿಗಳು ಅವರ ಮರ್ಮಸ್ಥಳವನ್ನು ಇರಿಯುತ್ತಿದ್ದವು. ಅವರ ಮುಖಮುದ್ರೆಯ ಮೇಲೆ ದೀರ್ಘಚಿಂತೆಯ ಲಕ್ಷಣವು ಒಡೆದು ಕಾಣುತ್ತಿತ್ತು. ಆಗ ಅವರು ಒಂದು ದೀರ್ಘಶ್ವಾಸವನ್ನು ಬಿಟ್ಟು ಮನಸ್ಸಿನಲ್ಲಿ ಯೋಚಿಸಿದ್ದೇನಂದರೆ:—“ನಾನು ಯುಕ್ತಿಪ್ರಯುಕ್ತಿಗಳಿಂದ ಜಯಸಿಂಗನ ಮನವೊಲಿಸಿಕೊಳ್ಳಲಿಕ್ಕೆ ಪ್ರಯತ್ನ ಮಾಡಿದೆನು; ಆದರೆ ಅದರಿಂದ ಏನಾದರೂ ಫಲಪ್ರಾಪ್ತಿಯಾದೀತೆಂಬದರ ಆಶೆಯು ತೋರುವದಿಲ್ಲ. ಮೊದಲು ಶರಣು ಬರಬೇಕು, ಬಳಿಕ ಒಡಂಬಡಿಕೆಯ ಮಾತುಗಳನ್ನಾಡಬೇಕು, ಎಂದು ಜಯಸಿಂಗನು ಖಂಡಿತವಾಗಿ ಹೇಳಿಬಿಟ್ಟದ್ದರಿಂದ ನಮಗೆ ಒಡಂಬಡಿಕೆಯ ಸಂಧಾನ ಹಚ್ಚಲಿಕ್ಕೆ ಮಾರ್ಗವೇ ಇಲ್ಲದಂತಾಗಿದೆ. ಇಂಥ ಸೊಕ್ಕಿನ ಮಾತುಗಳನ್ನು ಜಯಸಿಂಗನು ಬಾದಶಹನ ಬೆಂಬಲದಿಂದ ಆಡುತ್ತಿರುವನಲ್ಲವೆ! ನಮಗೆ ಶರಣುಬರುವದರ ಹೊರ್ತು ಅನ್ಯ ಮಾರ್ಗವೇ ಇಲ್ಲೆಂದು ಅವನು ತಿಳಿದಿರುವನೋ ಏನು? ಇರಲಿ; ನಾವು ಎಂಥ ಪ್ರಸಂಗ ಬಂದರೂ ಧೈರ್ಯ ಬಿಡದೆ ಎದುರಾಗಿ ನಿಲ್ಲಲಿಕ್ಕೆ ಬೇಕು. ನಮ್ಮ ಗುಪ್ತಹೇರರು ಇನ್ನೂ ಯಾಕೆ ಬಂದಿರಲಿಕ್ಕಿಲ್ಲ? ಅವರಿಗೂ ಜಯಸಿಂಗನಿಂದ ತೊಂದರೆಯುಂಟಾಗಿರಬಹುದೇನು? ಒಟ್ಟಿಗೆ ನಾವು ಈಗ ಯಾತಕ್ಕೂ ಚಲಿಸಲು ಬಾರದಂತಾಗಿದೆ. ರಘುನಾಥಪಂಡಿತನಾದರೂ ಇನ್ನೂ ಸುಳಿಯಲಿಲ್ಲ. ಮುಂದೆ ಏನು ಮಾಡಬೇಕು? ತಟ್ಟನೆ ಪ್ರತಾಪಗಡಕ್ಕೆ ಹೋಗಿ ಅಂಬಾಭವಾನಿಯ ದರ್ಶನವನ್ನಾದರೂ ತಕ್ಕೊ

ಳ್ಳಲಾ! ಏನು ಮಾಡಲಿ!

ಈ ಮೇರೆಗೆ ಮಹಾರಾಜರು ಬಹಳ ಹೊತ್ತಿನವರೆಗೆ ಚಿಂತೆಮಾಡಿ ಬೇಸತ್ತು ರಘುನಾಥಪಂಡಿತನು ಜಯಸಿಂಗನ ಪ್ರಥಮ ದರ್ಶನ ತಕ್ಕೊಂಡು ಬರೆದಿದ್ದ ಪತ್ರವನ್ನು ಪುನಃ ಓದತೊಡಗಿದರು:—"ತಮ್ಮ ಚರಣಗಳ ಅನುಜ್ಞೆಯನ್ನು ಪಡೆದು ಇಲ್ಲಿಗೆ ಬಂದೆನು. ಹಾದಿಯಲ್ಲಿ ಸಂಭವಿಸಿದ ಸಂಗತಿಗಳ ಮೇಲಿಂದ ಮಿರ್ಝಾರಾಜನು ಪೂರ್ಣ ನಿಶ್ಚಯದಿಂದ ಇಲ್ಲಿಗೆ ಬಂದಿರುವನೆಂಬದು ಕಂಡು ಬಂತು. ಅವನ ನಿಶ್ಚಯಕ್ಕೆ ಭಂಗ ಬರುವದು ಕಾಲತ್ರಯದಲ್ಲಿಯೂ ಅಸಾಧ್ಯ ವಾಗಿರುವದು. ಒಡಂಬಡಿಕೆಯ ಪ್ರಸ್ತಾಪವನ್ನು ತೆಗೆಯಬೇಕಾದರೆ ಎಲ್ಲ ಮುಲುಖುಗಳ ಮಾಲಕಿಯು ಬಾದಶಹನದು, ಎಂದು ಒಪ್ಪಿಕೊಳ್ಳಬೇಕಾಗುತ್ತದೆ ನಾನು ರಾಜನ ಛಾವಣಿಗೆ ಮುಟ್ಟಿ ಮುಟ್ಟುತ್ತಿರುವಷ್ಟರಲ್ಲಿ ಮೇಲೆ ಬರೆದಂತೆ ಒಪ್ಪಿಕೊಳ್ಳುತ್ತಿದ್ದರೆ ನಿಮ್ಮೊಡನೆ ನಾಲ್ಕು ಮಾತುಗಳನ್ನಾಡುವೆನು. ಇಲ್ಲದಿದ್ದರೆ ಬಂಡದಾರಿಯು ನಿಮ್ಮ ಸಲುವಾಗಿ ತೆರವೇ ಇರುವದು, ಎಂದು ಜಯಸಿಂಗ ರಾಜನು ನನಗೆ ಹೇಳಿಕಳಿಸಿದನು. ಈ ಪ್ರಕಾರದ ಮಿರ್ಝಾರಾಜನ ನಿರೂಪ ವನ್ನು ನೋಡಿ ನನಗೆ ಬಹಳ ವಿಷಾದವಾಯಿತು. ಒಪ್ಪಂದದ ಮಾತು ಮುಂದೆ ಏನೇ ಆಗಲಿ; ಈಗ ಸಮಕ್ಷಮ ಭೆಟ್ಟಿಯಾಗಿ ನಾಲ್ಕು ಮಾತು ಆಡಲಿಕ್ಕಾದರೂ ಮಿರ್ಝಾರಾಜನಲ್ಲಿ ಅವಕಾಶವಿಲ್ಲವಲ್ಲ! ಎಂಬ ವಿಚಾರವು ನನ್ನನ್ನು ಪೀಡಿಸಿತು. ಮೊದಲು ರುಮಾಲದಿಂದ ಕೈಕಟ್ಟಿಕೊಂಡು ಶರಣುಬಂದು, ಸರ್ವ ಮುಲುಖು ಗಳನ್ನು ತೆರವುಮಾಡಿ ಬಾದಶಹನಿಗೆ ಬಿಟ್ಟುಕೊಡಬೇಕು; ನಂತರ ಒಡಂಬಡಿ ಕೆಯ ಮಾತುಗಳನ್ನಾಡಬೇಕು, ಎಂದು ಮಿರ್ಝಾರಾಜನು ಹಂಡಿತನವನ್ನು ಹಿಡ ಕೊಂಡು ಕುಳಿತುಬಿಟ್ಟಿರುವನಾದ್ದರಿಂದ, ಇಂಥವನಲ್ಲಿ ಏನು ಮಾತಾಡಬೇಕೆಂ ಬದು ತಿಳಿಯದಾಗಿದೆ. ನಮ್ಮ ಕಡೆಯ ಕೆಲವು ಗುಪ್ತಚಾರರನ್ನು ಜಯಸಿಂಗ ರಾಜನು ಪ್ರತಿಬಂಧಿಸಿಟ್ಟಿದ್ದಾನೆ; ಆದರೆ ಆ ಗುಪ್ತಚಾರರು ಯಾರು ಎಂಬದು ಮಾತ್ರ ಇನ್ನೂ ಗೊತ್ತಾಗಿಲ್ಲ. ಶೋಧದಲ್ಲಿದ್ದೇನೆ. ಏನಾದರೂ ಕೆಲವು ಮುಲುಖುಗಳನ್ನು ಕೊಟ್ಟರೆ ಕಾರ್ಯ ಸಾಧಿಸೀತೆಂಬ ವಿಶ್ವಾಸವು ತೋರುವ ದಿಲ್ಲ. ಪ್ರಯತ್ನವನ್ನಂತೂ ನಡಿಸಿಯೇ ಇದ್ದೇನೆ; ಆದರೆ ಹೇಳತಕ್ಕದ್ದಿಷ್ಟೇ, ಅವಿಂಥರ ಸೇವೆಯನ್ನು ಮಾಡುತ್ತ ಗೋಬ್ರಾಹ್ಮಣರ ಹಿತಕ್ಕಾಗಿ ಯತ್ನಮಾಡು ವಂಥವರ ಕಾರ್ಯದಲ್ಲಿ ವಿಘ್ನಮಾಡುತ್ತ ಬಾದಶಾಹೀ ಹಿತವನ್ನು ಮನಮುಟ್ಟಿ ಬಯಸುತ್ತಿದ್ದ ಜಯಸಿಂಗರಾಜನನ್ನು ನೋಡಿ ನನಗೆ ಅತ್ಯಂತ ವಿಷಾದವಾಗು

ತ್ತದೆ. ಮುಂದೆ ನಡೆದ ವೃತ್ತಾಂತವನ್ನು ಆಗಾಗ್ಗೆ ತಿಳಿಸುತ್ತಿರುವೆನು.''

ಈ ಪ್ರಕಾರದ ಪತ್ರವನ್ನು ಓದಿ ಮಹಾರಾಜರಿಗೆ ಬಹಳ ಕೆಡಕೆನಿಸಿತು. ಕ್ಷಣಮಾತ್ರ ಅವರು ಸ್ತಬ್ಧರಾಗಿ ಕುಳಿತರು. ಯಾವದೊಂದು ಕೆಲಸದಲ್ಲಿ ಹೆಚ್ಚು ಚಿಂತೆಮಾಡುವದು ಮಹಾರಾಜರಿಗೆ ಗೊತ್ತೇ ಇರಲಿಲ್ಲ. ಹ್ಯಾಗೆ ಮಾಡಲಿ? ಏನು ಮಾಡಲಿ? ಎಂಬ ದಶಾಕ್ಷರೀಮಂತ್ರದ ಪುರಶ್ಚರಣವನ್ನು ಅವರು ಎಂದೂ ಕೈಕೊಂಡಿದ್ದಿಲ್ಲ. ಆದ್ದರಿಂದ ಆ ಕೂಡಲೆ ಅವರಿಗೆ ಜಗದಂಬೆಯ ಚರಣಗಳು ನೆನಪಾದವು. ಈ ಪ್ರಸಂಗದಲ್ಲಿ ಸುಮ್ಮನೆ ಬಣ ಆಲೋಚನೆಯನ್ನು ಮಾಡುವ ದಕ್ಕಿಂತ ಪ್ರತಾಪಗಡಕ್ಕೆ ಹೋಗಿ ದೇವಿಯ ಅಪ್ಪಣೆಯು ಏನಾಗುವದೋ ತಿಳಕೊಂಡು ಅದರಂತೆ ಕಾರ್ಯವನ್ನು ಮಾಡಬೇಕೆಂದು ಅವರು ನಿಶ್ಚಯಿಸಿದರು. ಶಿವರಾಜನು ಯಾವದಾದರೊಂದು ಸಂಗತಿಯನ್ನು ನಿಶ್ಚಯ ಮಾಡಿದನೆಂದರೆ ತೀರಿತು, ಅದನ್ನು ಆ ಕೂಡಲೆ ಅಮಲಿನಲ್ಲಿ ತಂದೇತೀರುತ್ತಿದ್ದನು. ಅದರಂತೆ ಅವನು ಪ್ರತಾಪಗಡಕ್ಕೆ ಹೊರಡುವದಕ್ಕಾಗಿ ತನ್ನ ಸಂಗಡಿಗರಿಗೆ ಸೂಚಿಸಿದನು. ಶಿವಾಜಿಯ ಸಂಗಡ ಯಾವಾಗಲೂ ನಾಲ್ಕು ಜನರು ಹೊರಡುತ್ತಿದ್ದರು. ಶಿವರಾಜನ ಬಾಯಿಂದ ಅಕ್ಷರಗಳು ಹೊರಟದ್ದೊಂದೇ ತಡ; ಅವರು ಕುದುರೆಯ ಮೇಲೆ ಸ್ವಾರರಾಗಿ ನಿಂತುಕೊಂಡರು. ಆಗ ಶಿವಬಾನೂ ಒಂದು ಕುದುರೆಯನ್ನೇರಿ ನಡೆದನು. ದಾರಿಯಲ್ಲಿ ಮೊಗಲರ ದಾಳಿಯಿಂದ ನಾಶವಾದ ಬೆಳೆಯುಳ್ಳ ಹೊಲಗಳನ್ನೂ, ತೆನೆಗಳಿಲ್ಲದೆ ಭಣಗುಟ್ಟುತ್ತಿರುವ ಬಣ ಮೇವು ನಿಂತ ಹೊಲಗಳನ್ನೂ ನೋಡಿ ನೋಡಿ ಮಹಾರಾಜರ ಮನಸ್ಸು ಉದಾಸವಾಯಿತು

ಈ ಮೇರೆಗೆ ಪ್ರಯಾಣಮಾಡುತ್ತಿರುವಾಗ ಮಹಾರಾಜರ ಮನಸ್ಸಿನಲ್ಲಿ ಅನೇಕ ವಿಚಾರಗಳು ಒಂದರ ಹಿಂದೊಂದರಂತೆ ಬರತೊಡಗಿದವು. ನಾನು ಈವೊತ್ತಿನ ವರೆಗೆ ಯಾವ ಉದ್ದೇಶದಿಂದ ಕಷ್ಟಪಡುತ್ತಿರುವೆನೋ ಆ ಉದ್ದೇಶವಾದರೂ ಶುದ್ಧವಿದೆಯೋ ಇಲ್ಲವೋ ಎಂಬದು ಅವರ ಮನಸ್ಸಿನಲ್ಲಿ ಬಂದು ಹೋಯಿತು. ಹಾಯ್, ಹಾಯ್, ಎಷ್ಟು ಅನರ್ಥವಿದು! ಸಾವಿರಾರು ಜನರು ಪ್ರಾಣಕ್ಕೆ ಎರವಾಗುತ್ತಿರುವರು. ಸಾವಿರಾರು ಮನೆತನಗಳು ನೆಲಸಮವಾಗಿರುವವು. ಸಾವಿರಾರು ಮನೆತನಗಳು ಮುಳುಗಿ ಏಳುತ್ತಿರುವವು. ಇಷ್ಟೆಲ್ಲ ಅನರ್ಥಗಳು ಒದಗುತ್ತಿದ್ದರೂ ನಾನು ಅವರ ಕಡೆಗೆ ನೋಡದೆ ಯಾವಕಾರ್ಯದ ಕಡೆಗೆ ಲಕ್ಷ್ಯಗೊಟ್ಟು ನಡೆಯುತ್ತಿರುವನೋ ಆ ಕಾರ್ಯವಾದರೂ ಕೈಗೂಡುವ ಆಶೆಯು ತೋರುವದಿಲ್ಲವಲ್ಲ? ಅದಕ್ಕೆ ನಮ್ಮ ನಮ್ಮ ಜನರೇ ಅಡ್ಡ ಬರುತ್ತಿರು

ವರು! ಆ ವಿರುದ್ಧ ಜನರ ಕಾಟದಿಂದ ನಮ್ಮ ಜನರನ್ನು ಮುಕ್ತರನ್ನಾಗ ಮಾಡ ಲಿಕ್ಕೆ ನಾನು ಮಾಡುವ ಪ್ರಯತ್ನದಲ್ಲಿ ಮಣ್ಣು ಕಲಿಸಲು ನಮ್ಮ ಜನರೇ ಮುಂದುವರಿಯುವರಲ್ಲವೇ? ಎಂಥ ವಿಪರೀತ ಕಾಲವಿದು!! ಇದಕ್ಕೇ ಸೋಜಿಗ ವೆನಬೇಕು!!! ಜಯಸಿಂಗನೇ ಆಗಲಿ, ಜಸವಂತಸಿಂಗನೇ ಆಗಲಿ ಎಲ್ಲರೂ ಬಾದ ಶಾದಶಹನ ಪ್ರಷ್ಠವನ್ನು ಬೆಳಿಸತಕ್ಕವರೇ; ಇವರಲ್ಲೇನು ಸಾಮರ್ಥ್ಯವಿಲ್ಲೆನ್ನ ಬೇಕೇ? ಇವರ ಪರಾಕ್ರಮದಿಂದಲೇ ಬಾದಶಹನ ಬೆಳಕು. ಇವರಿಂದಲೇ ಬಾದಶಹನ ಆಟವು? ಇವರಿಲ್ಲವಿದ್ದರೆ ಬಾದಶಹನನ್ನು ಕೇಳುವರಾರು?

ಹೀಗೆ ಸರ್ವತ್ರೋಪರಿ ಬಾದಶಹನ ಉನ್ನತಿಗೆ ಕಾರಣರಾಗುತ್ತಿರುವ ನಮ್ಮ ಜನರಿಗೆ ತಮ್ಮ ಧರ್ಮದ ಹಾಗು ಬಾಂಧವರ ಪರವಿಯು ಇರಬಾರದೆಂದರೆ ಆಶ್ಚರ್ಯವಲ್ಲವೇ' ಮಾಡುವದೇನು? ಶ್ರೀ ಅಂಬಾಮಾತೆಯ ಇಚ್ಛೆಗೆ ಬಂದಂ ತಾಗಲಿ; ಎಂದು ಉಸುರ್ಗಳೆದರು. ಅಷ್ಟರಲ್ಲಿ ಪ್ರತಾಪಗಡವು ಎದುರಿಗೆ ಕಾಣ ತೊಡಗಿತು ಅದರ ಭವ್ಯಸ್ವರೂಪವನ್ನು ನೋಡಿ, ಅಸ್ವಸ್ಥವಾದ ಮಹಾರಾ ಜರ ಮನಸ್ಸು ಸಮಾಧಾನವನ್ನು ಹೊಂದಿತು. ಅವರ ಮನಸ್ಸಿನ ಭಾರವು ಕಡಿಮೆಯಾಯಿತು. ಅವರು ಬಹು ಶೀಘ್ರವಾಗಿ ಕೋಟೆಯನ್ನೇರಿ ಶ್ರೀ ಅಂಬಾ ದೇವಿಯ ಎದುರಿಗೆ ಹೋಗಿ ನಿಂತುಕೊಂಡರು. ಮಹಾರಾಜರ ಸಂಗಡ ಇದ್ದ ಜನರಲ್ಲಿ ಮಹಾಸ್ವಾಮಿನಿಷ್ಠನಾದ ಬಾಳಾಜಿಆವಜಿಯೂ ಇದ್ದನು. ಮಹಾರಾ ಜರು ಮೊದಲು ದೇವಿಯ ಧೂಲಿದರ್ಶನವನ್ನು ತಕೊಂಡು ಬಳಿಕ ತಮ್ಮ ಮಾತೃ ಶ್ರೀಯವರಾದ ಜಿಜಾಬಾಯಿಯವರ ದರ್ಶನಕ್ಕೆ ಹೋದನು. ಈ ಕಾಲಕ್ಕೆ ಜಿಜಾಬಾಯಿಯವರು ಪ್ರತಾಪಗಡದಲ್ಲಿಯೇ ಇರುತ್ತಿದ್ದರು. ಅವರು ಅಕಸ್ಮಾ ತ್ತಾಗಿ ಬಂದ ಮಹಾರಾಜರನ್ನು ನೋಡಿ ಬಹು ಆನಂದಪಟ್ಟರು. ಆಗ ಮಹಾ ರಾಜರು ಮಾತೃದೇವತೆಗೆ ಪೊಡಮಟ್ಟು, ತಾವು ಪ್ರತಾಪಗಡಕ್ಕೆ ಬಂದಕಾರಣ ವನ್ನು ತಿಳಿಸಿ, ಪುನಃ ದೇವಿಯ ಗುಡಿಗೆ ನಡೆದರು.

ಶಿವಾಜಿಮಹಾರಾಜರು ದೇವಿಯ ಸನ್ನಿಧಿಯಲ್ಲಿ ಹೋದರೆಂದರೆ, ಅವರು ದೇವಿಯ ಬಳಿಯಲ್ಲಿ ಸ್ವಸ್ಥವಾಗಿ ಕುಳಿತು ಬಿಡುತ್ತಿದ್ದರು. ಹೀಗೆ ಕುಳಿತಾಗ ಅವರಿಗೆ ಸಮಾಧಿಯು ಹತ್ತುವದು; ಭವಾನೀಮಾತೆಯು ಆಗ ಅವರ ಮೈಯಲ್ಲಿ ಸಂಚಾರ ಮಾಡಿ, ತಾನು ಮಾಡತಕ್ಕ ಆಜ್ಞೆಯನ್ನು ಅವರ ಬಾಯಿಂದ ನುಡಿಸು ತ್ತಿದ್ದಳು. ಹತ್ತರ ಇದ್ದವರು ಅವುಗಳನ್ನು ಬರೆದಿಟ್ಟು ಮಹಾರಾಜರು ಶುದ್ಧಿಯ ಮೇಲೆ ಬಂದಬಳಿಕ ನಿವೇದಿಸುತ್ತಿದ್ದರು. ವಿಶೇಷತರದ ಸಂಕಟವು ಪ್ರಾಪ್ತ

ವಾದಾಗ ಮಾತ್ರ ಮಹಾರಾಜರು ಮೇಲಿನ ಕ್ರಮವನ್ನು ಆಚರಿಸುತ್ತಿದ್ದಿಲ್ಲ. ಆಗ ಅವರು ತಾವೊಬ್ಬರೇ ದೇವಿಯ ಮಂದಿರದಲ್ಲಿ ಪ್ರವೇಶ ಮಾಡಿ, ಬಾಗಿಲವನ್ನು ಹಾಕಿಕೊಂಡು ಮೈಮೇಲಿನ ಬಟ್ಟೆಗಳನ್ನು ತೆಗೆದು ದೇವಿಯ ಚರಣಗಳ ಹತ್ತರ ಕೂತುಕೊಳ್ಳುತ್ತಿದ್ದರು. ಆಗ ಅವರ ಬಳಿಯಲ್ಲಿ ಭವಾನೀತರವಾರವು ಇರುತ್ತಿತ್ತು. ಹೀಗೆ ಮಹಾರಾಜರು ದೇವಿಯ ಒಳಿಯಲ್ಲಿ ಕೂತರೆಂದರೆ ಅವರಿಗೆ ಸಮಾಧಿಯು ಹತ್ತಿ, ಅವರು ದೇವಿಯ ಚರಣಗಳ ಮೇಲೆ ಬಿದ್ದುಬಿಡುತ್ತಿದ್ದರು. ಬಳಿಕ ಅವರಿಗೆ ಸ್ವಪ್ನದೃಷ್ಟಾಂತವಾಗುತ್ತಿತ್ತು. ಇದೇ ಕ್ರಮವನ್ನೇ ಈ ಸಾರೆ ಮಹಾರಾಜರು ಆಚರಿಸಿದರು. ದೇವಿಯ ಚರಣಗಳ ಮೇಲೆ ಮಹಾರಾಜರು ಒರಗಿರಲು, ಅವರಿಗೊಂದು ವಿಲಕ್ಷಣವಾದ ಸ್ವಪ್ನದೃಷ್ಟಾಂತವಾಯಿತು; ಅದು ಏನಂದರೆ:—

"ಮಹಾರಾಜರು ಒಂದು ಗಹನವಾದ ಅರಣ್ಯವನ್ನು ಹೊಕ್ಕ ಹಾಗಾಯಿತು. ಆಗ ಪ್ರಚಂಡವಾದ ಗಾಳಿಯು ಬೀಸಹತ್ತಿ ಆ ಅರಣ್ಯದೊಳಗಿನ ವೃಕ್ಷಗಳು ಬಡಬಡ ಮುರಿದು ಬೀಳತೊಡಗಿದವು ಜಿಗರಿ ಸಿಂಹ, ಹುಲಿ, ಕರಡಿ ಮೊದಲಾದ ಪ್ರಾಣಿಗಳು ಹುಚ್ಚೆದ್ದು ಓಡಹತ್ತಿದವು. ನೋಡಿದತ್ತೆಲ್ಲ ಹಾ ಹಾಕಾರವು ಉತ್ಪನ್ನವಾಯಿತು. ಇಂಥ ಭಯಂಕರವಾದ ಸಂಕಟವನ್ನು ದಾಟಿ ಹ್ಯಾಗೆ ಉಳಿದೇವೆಂಬ ಚಿಂತೆಯು ಸಮಸ್ತ ಪ್ರಾಣಿಗಳಲ್ಲಿಯೂ ವ್ಯಾಪಿಸಿತು. ಸಿಂಹ ಮೊದಲಾದ ಹಿಂಸ್ರಪಶುಗಳು ಜಿಗರೆ ಮೊದಲಾದ ಪ್ರಾಣಿಗಳನ್ನು ಸಂಹರಿಸ ಹತ್ತಿದವು. ಇದೆಲ್ಲ ಪ್ರಕಾರವನ್ನು ಮಹಾರಾಜರು ಒಬ್ಬರೇ ನೋಡುತ್ತಿದ್ದರು. ಅಲ್ಲಿ ಅನ್ಯ ಮನುಷ್ಯಪ್ರಾಣಿಗಳು ಯಾರೂ ಇರಲಿಲ್ಲ ಹೀಗೆ ನಡೆದಿರುವಾಗ ಅಲ್ಲಿಯೊಂದು ಸಂಗತಿಯು ವರ್ತಿಸಿತು. ಭಯಗ್ರಸ್ತವಾದ ಒಂದು ಆಕಳ ಹಿಂಡು ಅಲ್ಲಿಗೆ ಬಂದಿತು. ಅದರೊಳಗಿನ ಆಕಳುಗಳು ತಮ್ಮ ಪ್ರಾಣರಕ್ಷಣೆಗಾಗಿ ಯಾರನ್ನು ಮೊರೆ ಹೊಗಬೇಕೆಂದು ಕಕ್ಕಾಬಿಕ್ಕಿಯಾಗಿ ನೋಡುತ್ತಿರಲು, ಆ ಹಿಂಡಿನಲ್ಲಿ ನಾಲ್ಕಾರು ಹುಲಿಗಳೂ, ೧೦-೧೨ ತೋಳಗಳೂ ಸೇರಿ ಆ ಆಕಳುಗಳನ್ನು ಮುರಿದು ಚಲ್ಲತೊಡಗಿದವು; ಈ ಪ್ರಕಾರದ ನೋಟವು ಕಣ್ಣಿಗೆ ಬಿದ್ದ ಕೂಡಲೆ ಮಹಾರಾಜರಿಗೆ ದೇಹಭಾನ ಉಳಿಯಲಿಲ್ಲ

ಅವರು ಆಕೂಡಲೆ ತಮ್ಮ ಖಡ್ಗವನ್ನು ಸೆಳೆದು ಆ ಹಿಂಡಿನೊಳಗೆ ಧುಮುಕಿದರು. ತನ್ನ ಜೀವದ ಪರವೆಯಿಲ್ಲದೆ ಬರುತ್ತಿರುವ ಈ ವೀರ ಪುರುಷನು ಯಾರಿರಬಹುದೆಂದು ಆ ಹಿಂಸ್ರಪಶುಗಳು ಕ್ಷಣಮಾತ್ರ ಸ್ತಬ್ಧವಾಗಿ ನಿಂತು

ನೋಡಿದವು. ಆಗ ಮಹಾರಾಜರು ಒಂದು ದೊಡ್ಡ ಹುಲಿಯನ್ನು ನೆಲಕ್ಕುರುಳಿಸಿ, ಒಂದು ತೋಳವನ್ನು ಹರಿಗಡಿದರು. ಇದನ್ನು ನೋಡಿ ಉಳಿದ ಹಿಂಸ್ರ ಪಶುಗಳು ದಿಕ್ಕಾಪಾಲ ಗಿ ಓಡಿಹೋದವು. ಅಷ್ಟರಲ್ಲಿ ಗಾಳಿಯೂ ಶಾಂತವಾಯಿತು; ಆಕಾಶವು ನಿರಭ್ರವಾಯಿತು; ದಿಕ್ಕುಗಳು ಪ್ರಸನ್ನವಾದವು; ಸೂರ್ಯನು ಉದಯನಾಗಿ ಎಲ್ಲ ಕಡೆಗೂ ರಮಣೀಯತೆಯು ಕಂಗೊಳಿಸತೊಡಗಿತು. ಸರ್ವ ಪ್ರಾಣಿಗಳಿಗೂ ಆನಂದವಾಯಿತು. ಅಷ್ಟರಲ್ಲಿಯೇ ಮತ್ತೆ ಮೊದಲಿನಂತೆ ಝಂಝಾವಾತವು ಬೀಸುವ ಲಕ್ಷಣವು ತೋರಹತ್ತಿತು. ಸೂರ್ಯನಾರಾಯಣನು ಮೋಡಗಳಿಂದ ಪರಿವೇಷ್ಟಿತನಾಗತೊಡಗಿದನು. ಸ್ವಲ್ಪ ಹೊತ್ತಿನಲ್ಲಿ ಗಾಢಾಂಧಃಕಾರವು ಮುಸುಗಿತು. ಹರಿಣಾದಿ ಪ್ರಾಣಿಗಳು ಪ್ರಾಣರಕ್ಷಣೆಗಾಗಿ ಓಡತೊಡಗಿದವು. ಆಗ ಮೊದಲಿನಂತೆ ಮತ್ತೊಂದು ಆಕಳ ಗುಂಪು ಒಂದಿತು. ಅದರಲ್ಲಿ ಒಂದು ಸಿಂಹ, ಮತ್ತೊಂದು ಹುಲಿ ಇವೆರಡೂ ಸೇರಿ ಆ ಗೋಗಣವನ್ನು ಸಂಹರಿಸತೊಡಗಿದವು. ಇದನ್ನು ಕಣ್ಮುಟ್ಟ ನೋಡುವದು ಮಹಾರಾಜರಿಂದ ಆಗಲಿಲ್ಲ. ಆಗ ಅವರು ಮತ್ತೆ ತಮ್ಮ ಖಡ್ಗವನ್ನು ಹಿಡಿದು ಆ ಹಿಂಸ್ರ ಪಶುಗಳ ಸಮಾಚಾರಕ್ಕೆ ಆ ಹಿಂಡಿನೊಳಗೆ ಸೇರಿದರು. ಹೀಗೆ ಅಕಸ್ಮಾತ್ತಾಗಿ ಒಬ್ಬ ಮನುಷ್ಯನು ಬಂದದ್ದನ್ನು ನೋಡಿ, ಆ ಸಿಂಹ ಮತ್ತು ಹುಲಿಗಳು ಮಹಾರಾಜರ ಮೇಲೆ ಸಾಗಿ ಬಂದವು. ಆಗ ಮಹಾರಾಜರು ನೋಡುತ್ತಾರೆ; ತಮ್ಮ ಕೈಯೊಳಗಿನ ಖಡ್ಗವೇ ಇಲ್ಲ; ಹತ್ತಿರ ಬೇರೆ ಯಾವ ಆಯುಧಗಳೂ ಇರಲಿಲ್ಲ. ಅವರು ಇನ್ನು ಆಯುಧಗಳನ್ನು ಹುಡುಕಬೇಕೆನ್ನುತ್ತಿರುವಷ್ಟರಲ್ಲಿ ಆ ಸಿಂಹವೂ, ಹುಲಿಯೂ ಮಹಾರಾಜರ ಒಂದೊಂದು ರಟ್ಟೆಯನ್ನು ಹಿಡಿದು ಅವರನ್ನು ದೂರ ಎಳೆದುಕೊಂಡು ಹೋದವು.

ನಿಜವಾಗಿ ನೋಡಿದರೆ ಆ ಸಿಂಹ ಮತ್ತು ಹುಲಿಗಳು ತಮ್ಮ ತಮ್ಮೊಳಗೆ ಬಡಿದಾಡಿ ಮಹಾರಾಜರ ಪ್ರಾಣವನ್ನು ಹೀರತಕ್ಕವಿದ್ದವು; ಆದರೆ ಸಿಂಹವು ಹುಲಿಯ ಆಟವನ್ನು ನಡೆಯಗೊಡಲಿಲ್ಲ. ಆದ್ದರಿಂದ ಹುಲಿಯು ನಿರುಪಾಯವಾಗಿ ಮಹಾರಾಜರ ಪ್ರಾಣವನ್ನು ಹಿಂಡದೆ ಹಾಗೇ ಬಿಡಬೇಕಾಯಿತು ಬಳಿಕ ಅವು ಮಹಾರಾಜರನ್ನು ಒಂದು ಗವಿಗೆ ತಕ್ಕೊಂಡು ಹೋದವು. ಆ ಗುಹೆಯಲ್ಲಿ ಒಂದು ಮುದಿಹುಲಿಯಿದ್ದು ಅದರ ಸುತ್ತಲೂ ಎಷ್ಟೋ ಹುಲಿಗಳು ಕೂತಿದ್ದವು. ಮತ್ತು ಕೆಲವು ತೋಳಗಳು ಕೆಲವು ಸಿಂಹಗಳು ಸಹ ಇದ್ದವು. ಈ ಮನುಷ್ಯನನ್ನು ಹುಲಿ ಮತ್ತು ಸಿಂಹಗಳು ಕೂಡಿ ಎಳಕೊಂಡು ಬಂದದ್ದರಿಂದ

ಆ ಗುಹೆಯಲ್ಲಿ ಒಮ್ಮೆಲೆ ಜಯಘೋಷವಾಯಿತು. ಆ ಜಯಘೋಷದ ಆನಂದವು ಅಲ್ಲಿದ್ದ ನಾಲ್ಕಾರು ಸಿಂಹಗಳಿಗೆ ಮಾತ್ರ ಸರಿದೋರಲಿಲ್ಲ. ಈ ಮನುಷ್ಯನನ್ನು ನೋಡಿ ಆ ಮುದಿಹುಲಿಗೆ ಬಹಳ ಆನಂದವಾಯಿತು. ಅದು ಆ ಮನುಷ್ಯನನ್ನು ಹಿಡತಂದ ಆ ಹುಲಿಸಿಂಹಗಳನ್ನು ಆನಂದ ದೃಷ್ಟಿಯಿಂದ ನೋಡಿತು. ನಂತರ ಆ ವೃದ್ಧ ವ್ಯಾಘ್ರವು—"ಈ ಮನುಷ್ಯನ ಕೂಡ ಗೌರವದಿಂದ ನಡೆಯಿರಿ; ಆದರೆ ಇವನನ್ನು ಕೈದಿನಲ್ಲಿ ಮಾತ್ರ ಇಡಬೇಕು!" ಎಂದು ಹುಕುಮು ಮಾಡಿತು.

ವೃದ್ಧವ್ಯಾಘ್ರನ ಈ ಹುಕುಮನ್ನು ಕೇಳಿ ಅಲ್ಲಿದ್ದ ಎಲ್ಲ ಪ್ರಾಣಿಗಳಿಗೂ ಆಶ್ಚರ್ಯವಾಯಿತು; ಆದರೆ ಯಾವ ಪ್ರಾಣಿಗಳಿಗೂ ಆ ಹುಲಿಯ ಮುಂದೆ ಮಾತಾಡುವ ಧೈರ್ಯವಿಲ್ಲದ್ದರಿಂದ ಎಲ್ಲವೂ ಸುಮ್ಮನೆ ಕುಳಿತವು. ಕೂಡಲೆ ಆ ಹುಕುಮು ಅಮಲಿನಲ್ಲಿ ಬಂದಿತು. ಮಹಾರಾಜರನ್ನು ಹಿಡಕೊಂಡು ಹೋದ ಸಿಂಹವು ಮಾತ್ರ ಮಹಾರಾಜರ ಬಳಿಗೆ ಬಂದು ಏನೋ ಆಶ್ವಾಸನ ಕೊಟ್ಟಿತು; ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಅಷ್ಟರಲ್ಲಿ ಕೆಲವು ಹುಲಿಗಳು ಮಹಾರಾಜರನ್ನು ಎಳೆದೊಯ್ದು ಕೈದಿನಲ್ಲಿಟ್ಟವು. ಅವರ ಸುತ್ತಲೂ ಎಷ್ಟೋ ಹುಲಿಗಳು, ನರಿಗಳು ಕಾವಲಿಗಾಗಿ ಕುಳಿತವು ಆಗ ಮಹಾರಾಜರಿಗೆ ಬಹಳ ಉದಾಸವಾಯಿತು. ನಾನು ಈ ಹುಲಿಸಿಂಹಗಳ ಹಿಂದಿನಲ್ಲಿ ಯಾಕೆ ಬಂದೆನು; ಅಲ್ಲೇ ಗುದ್ಯಾಡಿ ಕೊಸರಿಕೊಂಡು ಹೋಗಿದ್ದೆನೆಂದರೆ ಇಂಥ ಸ್ಥಿತಿಯಾಗುತ್ತಿದ್ದಿಲ್ಲವೆಂದು ಚಿಂತಿಸಿ ಅವರು ಆ ಸ್ವಪ್ನದಲ್ಲಿಯೇ ಭವಾನೀಮಾತೆಗೆ ಶರಣು ಹೋದರು. ಆಗ ಅವರಿಗೆ ಸಮಾಧಿ ಹತ್ತಿತು. ಸಮಾಧಿ ಹತ್ತಿದ ಕೂಡಲೆ ಪ್ರಲಯಾಂಧಃಕಾರವು ಲೋಪವಾಯಿತು. ಸೂರ್ಯನು ತೇಜಃಪುಂಜನಾಗಿ ಕಾಣತೊಡಗಿದನು. ಸೂರ್ಯನ ಖಗ್ರಾಸ ಗ್ರಹಣವು ಬಿಟ್ಟಿತು. ಸರ್ವತ್ರ ಆನಂದಮಯವಾಯಿತು. ಆಗ ದೇವಿಯು ಮಹಾರಾಜರ ತಲೆಯ ಮೇಲೆ ವರದಹಸ್ತವನ್ನು ಇಟ್ಟು—'ವತ್ಸಾ, ಅಂಜಬೇಡ. ನೀನು ಈಗ ಯಾವ ಪ್ರಕಾರವನ್ನು ನೋಡಿದೆಯೋ, ಅದರಂತೆ ಆಗುವ ಯೋಗಾಯೋಗವಿರುತ್ತದೆ ನೀನು ನೋಡಿದ ಸಂಗತಿಯನ್ನು ಚನ್ನಾಗಿ ಅರ್ಥಮಾಡಿಕೋ;' ಎಂದು ನುಡಿದಳು.

ಈ ಪ್ರಕಾರ ಮಹಾರಾಜರಿಗೆ ದೃಷ್ಟಾಂತವು ನಡೆದಿರಲು, ಇತ್ತ ಬಾಳಾಜಿ ಆವಜಿಯು ಯಾಕೋ ಮಹಾರಾಜರಿಗೆ ಈ ದಿನ ವಿಶೇಷವಾಗಿ ಸಮಾಧಿಯು ಹತ್ತಿತು. ಏನಾದರೂ ವಿಪರೀತ ಸಮಯವಿರಲಿಕ್ಕಿಲ್ಲವಷ್ಟೇ; ಎಂದು ಗುಡಿಯ

ಬಾಗಿಲ ತೆರೆದು ಒಳಗೆ ಬಂದು ಮಹಾರಾಜರು ಏನಾದರೂ ಬಡಬಡಿಸುತ್ತಾ ರೇನೆಂದು ಕಿವಿಗೊಟ್ಟು ಕೇಳಿದನು. ಮಹಾರಾಜರು ಉಸಿರು ಕೂಡ ಬಿಡು ತ್ತಿರಲಿಲ್ಲ. ಆಗ ಬಾಳಾಜಿಯು ಗಾಬರಿಯಾಗಿ ಜೀಜಾಬಾಯಿಯವರನ್ನು ಕರ ಕೊಂಡು ಬಂದನು. ಜೀಜಾಬಾಯಿಯವರು ಒಂದು ಮಗನನ್ನು ಬಗ್ಗಿ ನೋಡಿ ಆತನ ತಲೆಯ ಮೇಲೆ ತಮ್ಮ ಹಸ್ತವನ್ನು ಇಟ್ಟರು. ಮಹಾರಾಜರ ಸ್ವಪ್ನದಲ್ಲಿ ಶ್ರೀ ಅಂಬಾಭವಾನಿಯು ವರದ ಹಸ್ತವನ್ನಿಡುವದಕ್ಕೂ, ಇತ್ತ ಗುಡಿಯಲ್ಲಿ ಜೀಜಾಬಾಯಿಯವರು ಮಹಾರಾಜರ ತಲೆಯ ಮೇಲೆ ಕೈ ಇಡುವದಕ್ಕೂ ಗಂಟು ಬಿದ್ದಿತು. ಆಗ ಮಹಾರಾಜರು ದೇವಿಯ ಅಭಯವನ್ನು ಹೊಂದಿ, ಸಮಾಧಿಯು ಇಳಿಯುತ್ತ ಬರಲು ಕಣ್ಣು ತೆರೆದು ನೋಡಲು, ಪ್ರತ್ಯಕ್ಷ ಮಾತೃಮೂರ್ತಿಯ ದರ್ಶನವಾಯಿತು. ಆಗ ಮಹಾರಾಜರ ಆನಂದಕ್ಕೆ ಪಾರವೇ ಇರಲಿಲ್ಲ. ಅವರು ತಮ್ಮ ಮಾತೃಶ್ರೀಯವರ ಚರಣಗಳನ್ನು ಗಟ್ಟಿಯಾಗಿ ಹಿಡಿದು ನಮಸ್ಕರಿಸಿ, ಬಳಿಕ ದೇವಿಯನ್ನು ನಮಸ್ಕರಿಸಿ ಆಸನದಿಂದ ಎದ್ದು ಬಂದರು. ತಾವು ಸ್ವಪ್ನಾಂತ ದಲ್ಲಿ ಕಂಡ ಸಂಗತಿಯನ್ನು ತಾಯಿಗೆ ತಿಳಿಸಿದರು; ಮತ್ತು ಬಾಳಾಜಿಆವಜಿ ಯನ್ನು ಕುರಿತು—ಏನಾದರೂ ಹಾನಿಯಾಯಿತೇನೆಂದು ಕೇಳಿದರು. ಅದಕ್ಕೆ ಬಾಳಾಜಿಯು ಏನೂ ಹಾನಿಯಾಗಲಿಲ್ಲವೆಂದು ಹೇಳಿದನು. ಮಹಾರಾಜರೂ, ಜೀಜಾಬಾಯಿಯವರೂ, ಬಾಳಾಜಿ ಆವಜಿಯೂ ಕೂಡಿ ಸ್ವಪ್ನಾಂತದ ಅರ್ಥವನ್ನು ಮಾಡುತ್ತಿರಲು, ಶ್ರೀ ಸಮರ್ಥರು ಅಲ್ಲಿಗೆ ಪ್ರಾಪ್ತರಾದರು. ಹೀಗೆ ಆಕಸ್ಮಿಕ ವಾಗಿ ತಮ್ಮ ಪ್ರಿಯ ಸದ್ಗುರುವಿನ ದರ್ಶನವಾದದ್ದನ್ನು ನೋಡಿ, ಮಹಾರಾಜರು ಸಂತೋಷಪಟ್ಟು ಅವರಿಗೆ ದಂಡವತ್‌ನಮಸ್ಕಾರ ಹಾಕಿದರು. ಆಗ ಸಮ ರ್ಥರು ಮಹಾರಾಜರನ್ನು ಹಿಡಿದೆಬ್ಬಿಸಿ—"ಏಳು ಶಿವಬಾ, ನೀನು ಬಹಳ ಅಂಜಿಕೊಂಡಂತೆ ಕಾಣುತ್ತದೆ. ಅಷ್ಟೇನೂ ಹೆದರುವ ಕಾರಣವಿಲ್ಲ. ಎಷ್ಟು ಸಂಕಟಬಂದರೂ ಕಡೆಗೆ ನಿನಗೆ ಜಯವೇ ಆಗುವದು ಈ ಕಾಲಕ್ಕೆ ನೀನು ಜಯ ಸಿಂಗನು ಹೇಳುವಂತೆ ಕೇಳು ಅದರಿಂದ ನಿನ್ನ ಕಲ್ಯಾಣವೇ ಆಗುವದು. ಗಾಳಿಯು ಬಿಟ್ಟಕಡೆಗೆ ಬೆನ್ನು ಮಾಡಲಿಕ್ಕೆ ಬೇಕು. ಶ್ರೀ ರಘುವೀರನ ಪರಮಾನುಗ್ರಹವು ನಿನ್ನ ಮೇಲೆ ಇದ್ದದರಿಂದ ನಿನ್ನ ಯಾವ ಕೆಲಸಗಳಿಗೂ ಅಡಚಣೆಯು ಬರ ಲಾರದು. ನಿನಗೆ ಬರುವ ವಿಘ್ನಗಳೆಲ್ಲ ದೂರವಾಗುವವು" ಎಂದು ನುಡಿದು, ನಾವು ಕೆಲವು ದಿವಸಗಳವರೆಗೆ ತೀರ್ಥ-ಯಾತ್ರೆಗಳಿಗಾಗಿ ಹೋಗುತ್ತೇವೆ, ಎಂದು ಹೇಳಿ ಅಲ್ಲಿಯೇ ಅದೃಶ್ಯರಾದರು. ಮಹಾಜರು ಈ ಅಪೂರ್ವಯೋಗವನ್ನು

ನೋಡಿ ಸಂತೋಷಪಟ್ಟು ದೇವಿಯ ದೃಷ್ಟಾಂತಕ್ಕೂ, ಸಮರ್ಥರ ಉಪದೇಶಕ್ಕೂ ಮೇಳುಹಾಕುತ್ತ ಜಿಜಾಬಾಯಿಯವರೊಡನೆ ನಿಜಮಂದಿರಕ್ಕೆ ನಡೆದರು. ಅವರ ಹಿಂದಿಂದೆ ಬಾಳಾಜೀ ಚಿತ್ರವಣಿಯೂ ಹೋದನು.

## ೧೪—ಒಪ್ಪಂದ.

ಪ್ರತಾಪಗಡದಲ್ಲಿ ಶ್ರೀ ಅಂಬಾಭವಾನಿಯ ದೃಷ್ಟಾಂತದಿಂದಲೂ, ಶ್ರೀ ಸಮರ್ಥರ ಅಪ್ಪಣೆಯಿಂದಲೂ ಮಹಾರಾಜರು ಜಯಸಿಂಗನ ಕೂಡ ಒಪ್ಪಂದ ಮಾಡಿಕೊಳ್ಳುವದನ್ನೇ ನಿಶ್ಚಯಿಸಿ ರಾಜಗಡಕ್ಕೆ ಬಂದರು; ಆದರೆ ಮಹಾರಾಜರಿಗೆ ಮನಸ್ಸಿನಲ್ಲಿ ಸಮಾಧಾನವಿರಲಿಲ್ಲ. ಜಯಸಿಂಗನಂಥವನಿಗೆ ಸೊಪ್ಪುಹಾಕುವ ಸಮಯವು ಬಂದದ್ದಕ್ಕೆ ಅವರಿಗೆ ಹ್ಯಾಗೆ ಹ್ಯಾಗೋ ಅನಿಸಿತು. ಆದರೂ ಸ್ವರಾಜ್ಯಮಂದಿರದ ಕಡೆಗೆ ಲಕ್ಷ್ಯಗೊಟ್ಟು ಹ್ಯಾಗೆ ಹ್ಯಾಗೆ ಒಪ್ಪಂದಮಾಡಿಕೊಳ್ಳಬೇಕೆಂದು ಎಣಿಕೆ ಹಾಕುತ್ತಿರಲು, ಹೊರಗಿನಿಂದ ಹುಜರಾತಿಯವನು ಬಂದು ರಘುನಾಥಪಂಡಿತರಿಂದ ಬಂದ ಪತ್ರವನ್ನು ತಂದು ಮುಂದಿಟ್ಟನು. ರಘುನಾಥಪಂಡಿತನು ಮಹಾರಾಜರ ವಕೀಲನಿದ್ದು, ಅವನು ಈ ಮೊದಲೇ ಜಯಸಿಂಗನ ಕಡೆಗೆ ಹೋದ ಸಂಗತಿಯನ್ನು ನಮ್ಮ ವಾಚಕರಿಗೆ ಹಿಂದಿನ ಪ್ರಕರಣದಲ್ಲಿಯೇ ತಿಳಿಸಿರುತ್ತೇವಷ್ಟೇ; ಆತನು ಜಯಸಿಂಗನೊಡನೆ ಮಾತುಕಥೆಗಳನ್ನಾಡಿ ಈ ಎರಡನೇ ಪತ್ರವನ್ನು ಬರೆದು ಮಹಾರಾಜರಿಗೆ ಕಳಿಸಿದ್ದನು.

ಪತ್ರವು ಮುಂದೆ ಬಂದು ಬೀಳಲು ಮಹಾರಾಜರು ಅದನ್ನು ತಕ್ಕೊಂಡು ಲಕ್ಕೋಟೆಯನ್ನು ಒಡೆದು ಓದತೊಡಗಿದರು. ಅದರ ಸಾರಾಂಶವೇನಂದರೆ:—"ಜಯಸಿಂಗರಾಜನಿಗೂ ನನಗೂ ಒಪ್ಪಂದದಬಗ್ಗೆ ಹಲವು ಮಾತುಕಥೆಗಳಾದವು. ಅವನ ಮನಸ್ಸು ಏನಾದರೂ ಹಾದಿಗೆ ಬಂದೀತೇನೆಂದು ನಾನು ಅವನಿಗೆ ಕೆಲವು ಮಾತುಗಳನ್ನಾಡಿದೆನು. "ತಾವು ಹಿಂದುಗಳಿದ್ದು ವೇದಧರ್ಮದ ಪ್ರತಿಪಾಲಕರಿದ್ದು ಹೀಗೆ ಅವಿಂಧರ ವಿಜಯ ಪತಾಕೆಯನ್ನು ಹೊತ್ತುಕೊಂಡು ತಿರುಗುವದು ಧರ್ಮವೋ ಅಧರ್ಮವೋ? ಪಿತೃಘಾತಕಿಯೂ, ಭ್ರಾತೃಘಾತಕಿಯೂ, ಆದ ಬಾದಶಹನ ಪ್ರಸ್ಥವನ್ನು ಬೆಳಿಸುವದರಲ್ಲಿ ನೀವು ವೇದಧರ್ಮವನ್ನು ಹಬ್ಬಿಸುವವರ ಸಂಗಡ ಹಗೆತನ ಬೆಳೆಯಿಸುವಿರಲ್ಲ? ಇದು ಧರ್ಮವೋ ಅಧರ್ಮವೋ?"

ಈ ಪ್ರಕಾರ ನಾನು ಸ್ವಲ್ಪ ಗೌರವದಿಂದ, ಆದರೆ ಅವನ ಮನಸ್ಸಿಗೆ ಹತ್ತುವಂತೆ ಅಂದೆನು; ಆದರೆ ಅದರ ಪ್ರಯೋಜನವಾಗದೆ ಸೇರಿಗೆ ಸವ್ವಾ ಸೇರಿನಂತೆ ಇರುವ ಜಯಸಿಂಗನು ತಿರುಗಿ ನನ್ನನ್ನು ಕುರಿತು—ನೀವು ಇಂಥ ಮಾತುಗಳ ನ್ನಾಡಿದರೆ ಜಯಸಿಂಗನು ಮರುಳಾಗಬಹುದೆಂದು ತಿಳಿದಿರಬಹುದು. ನಾವು ಯಾವಾಗ್ಗೆ ಬಾದಶಹನಿಗೆ ಕುರ್ನಿಸಾತನ್ನು ಮಾಡಿ ಆತನ ಮನಸಬದಾರಿಯನ್ನು ಕೈಕೊಂಡೆವ್ವೋ, ಆಗ್ಗೇ ಈ ಮಾತಿನ ಇತ್ಯರ್ಥವಾಗಿರುವದು. ಆ ಮಾತಿಗೆ ಈಗ ಎಷ್ಟೋ ವರ್ಷಗಳು ಕಳೆದು ಹೋದವು ಬಾದಶಹನ ಅನ್ನವು ನಮ್ಮ ರೋಮ ರೋಮಗಳಲ್ಲಿ ಸಹ ಸೇರಿಕೊಂಡಿರುವದು. ಆತನ ಪಿತೃ-ಭ್ರಾತೃದ್ರೋಹಗಳಲ್ಲಿಯು ಕೆಲವು ಪಾಲು ನಮ್ಮಲ್ಲಿ ಸಂಗ್ರಹವಾಗಿರುವದು. ಈಗ ಯಾವ ಧರ್ಮಾಧರ್ಮ ವಿಚಾರವು? ಅದನ್ನು ಬಿಟ್ಟು ಮುಂದೆ ನ⁻ಕಾಡತಕ್ಕದ್ದಿದ್ದರೆ ಮಾತಾಡಬೇಕು" ಎಂದು ಸ್ಪಷ್ಟವಾಗಿ ಹೇಳಿದನು. ಜ[illegible] ಗನ ಈ ಮಾತು ಕೇಳಿ ನನಗೆ ಆಶ್ಚರ್ಯವಾಯಿತು. ಒಳಿಕ ಅವರ, ಅನೇಕ ಮಾತುಕಥೆಗಳಾಗಲು ಜಯಸಿಂಗರಾಜನಿಗೆ ಒಪ್ಪಂದದ ಕರಾರ [illegible]ನ್ನು ಕೇಳಿದೆನು. ಅವನು ಅವನ್ನು ಹೇಳಿದ ಮೇರೆಗೆ ಇದರಡಿಯಲ್ಲಿ ಒರೆದಿ[illegible] ಪಾರಾಂಬರಿಸುವದಾಗಬೇಕು:—

| | |
|---|---|
| ೧ ಬಾದಶಾಹೀ ರಾಜ್ಯ ಅದರ ಕೆಳಗಿನ ಪ್ರಾಂತ ಸ[illegible] ಕಿಲ್ಲೆಗಳು ೨೭ ಇರುವವ[illegible] | ಪ್ರತಿಯೊಂದು ಕಿಲ್ಲೆಯನ್ನು [illegible]ಡಬೇ[illegible] |
| ೨ ಅಜ್ಞವಾಸು [illegible] ತ್ತವಾಗಿ ಶಿವರಾಯನ ಈ ಕಾಗದ ಪತ್ರಗಳಿ | |
| ೩ [illegible]ಂಭಾಜಿ ಮೇಲಿನ ಮನಸಬ | |
| ೪ ವಿಜಾಪ್ತ ಗಳನ್ನು ಎಂದಿನ ಬಾದಶಹನಿಗೆ ಕಂತಗಳಿಂದ | |

ಈ ಮೇರೆಗೆ ಬರೆದಿರುವ ರಘುನಾಥಪಂಡಿತರ ಪತ್ರವನ್ನೂ ಒಪ್ಪಂದದ ಕರಾರುಗಳನ್ನೂ ಓದಿನೋಡಿ ಮಹಾರಾಜರಿಗೆ ಅತ್ಯಂತವಿಷಾದವಾಯಿತು. ಇಷ್ಟು ದಿವಸ ಕಷ್ಟಬಟ್ಟು ದೊರಕಿಸಿದ ದುರ್ಗಗಳನ್ನು ಈಗ ಬಾದಶಹನಿಗೆ ಒಪ್ಪಿಸುವ ದೆಂದರೆ ಅವರ ಜೀವದ ಸುತ್ತ ಬಂತೆಂದು ಹೇಳಲವಶ್ಯವಿಲ್ಲ; ಆದರೆ ಸಮರ್ಥರ ಅಪ್ಪಣೆಯನ್ನು ಸ್ಮರಿಸಿ ಅವರು ಆ ಕರಾರುಗಳಿಗೆ ತಮ್ಮ ಸಮ್ಮತಿಯನ್ನು ಪ್ರಕಟಿಸ ಬೇಕಾಯಿತು.

ಈ ಪ್ರಕಾರ ಜಯಸಿಂಗನಿಗೂ ಶಿವಾಜಿಮಹಾರಾಜರಿಗೂ ಒಡಂಬಡಿಕೆಯ ಸಂಧಾನವು ನಡೆದಿರಲು ಅತ್ತ ದಿಲೇರಖಾನನು ಕಿರಾತಸಿಂಗನ ಸುಳ್ಳುಮಾತುಗಳಿಗೆ ಕಿವಿಕೊಟ್ಟು ಜಯಸಿಂಗನನ್ನೂ ಶಿವಾಜಿಮಹಾರಾಜನನ್ನೂ ತಿರಸ್ಕರಿಸುತ್ತಿದ್ದನು.
ಮರಾಟರು ಮೋಸಗಾರರು ಇರುತ್ತಿ ಗಲು, ಅವರು ನನ್ನ ಬಹು ಚಲುವೆಯಾದ
ಮಗಳನ್ನು ಅಪಹರಿಸಿಕೊಂಡು ( ರಲು, ಇಂಥ ನೀಚರ ಸಂಗಡ ಜಯ
ಸಿಂಗನು ಒಪ್ಪಂದ ಮಾಡಿಕೊಳ ? ಮಾಡಿಕೊಳ್ಳಲಿ! ನಾನಂತೂ ಅದಕ್ಕೆ
ಸಮ್ಮತಿಸುವದಿಲ್ಲ; ಇದ್ದ ಸಂಗತಿ ಬಾದಶಹನಿಗೆ ಅರುಹಿಬಿಟ್ಟರಾಯಿತು.
ಹಿಂದು ಹಿಂದುಗಳೆಲ್ಲರೂ ಒಂದೇ ನ್ನು ನಂಬಬಾರದು, ಎಂದು ವಿಚಾರ
ಮಾಡುತ್ತ ಕುಳಿತಿದ್ದನು. ಇ ಹೀಗೆ ವಿಚಾರ ಮಾಡುತ್ತಿರುವ
ಜಯಸಿಂಗನು ಮಾಡಿಕೊಳ್ಳಬೇಕಾದ ಒಪ್ಪಂದದ
ಬಿದ್ದಿತು. ದಿಲೇರಖಾನನು
ಡಿ ಸಿಟ್ಟಿನಿಂದ ದೂರ ಚಲ್ಲಿ
ಕೆ ಅವನು ಆ ಪತ್ರವನ್ನು
ನೋಪಾಯವನ್ನು ನೀವು
ಕೊಟ್ಟನು. ಚತುರನಾದ
ಕಂಡು ಹಿಡಿದು, ಅದರ
ದಿಲೇರಖಾನನ ಕಡೆಗೆ

ಡಂಬಟ್ಟನು. ತನ್ನ
ದುಬಿಡಬೇಕೆಂದು
ಹೀಗಾಗುತ್ತಾ
ವಸವು ಬಂದಿತು.

ಅಂದೇ ಒಪ್ಪಂದದ ಕಡೆಯ ನಿರ್ಣಯವಾದ್ದರಿಂದ ಆ ದಿವಸ ಮಹಾರಾಜರು ಅತಿ ಕಷ್ಟದಿಂದ ಜಯಸಿಂಗನ ಛಾವಣಿಯ ಕಡೆಗೆ ಹೊರಟರು. ಛಾವಣಿಯು ಸಮೀಪಕ್ಕೆ ಬಂದ ಕೂಡಲೆ ಮಹಾರಾಜರು ತಾವು ಬಂದ ವರದಿಯನ್ನು ಜಯಸಿಂಗನ ಕಡೆಗೆ ಕಳಿಸಿದರು. ಆಗ ಜಯಸಿಂಗನು ತಾನು ಸ್ವಾಗತಕ್ಕಾಗಿ ಹೋಗದೆ, ಜಾನಿಬೇಗ, ಒಕ್ಷಿ ಎಂಬವರನ್ನು ಕಳಿಸಿದನು. ಮಹಾರಾಜರು ಪ್ರಕೃತದ ಸ್ಥಿತಿಯ ಕಡೆಗೆ ಲಕ್ಷಗೊಟ್ಟು, ಜಯಸಿಂಗನ ಸಿಂಹಾಸನದ ಬಳಿಗೆ ಹೋಗಿ ಎರಡೂ ಕೈಗಳನ್ನು ಮುಂದಕ್ಕೆ ಚಾಚಿದರು. ಜಯಸಿಂಗನು ಅವರ ಕೈಗಳನ್ನು ಹಿಡಿದು ಅವರನ್ನು ತನ್ನ ಸಿಂಹಾಸನದ ಮೇಲೆ ಕುಳ್ಳಿರಿಸಿಕೊಂಡನು. ಅಷ್ಟರಲ್ಲಿ ದಿಲೇರಖಾನನ ಸ್ವಾರಿಯು ಬಂದಿತು. ಆತನು ಶಿವಾಜಿ ಮಹಾರಾಜರನ್ನು ಕೆಟ್ಟಗಣ್ಣಿನಿಂದ ನೋಡಿದನು ; ಮಹಾರಾಜರ ಸಂಗಡ ಯಾವ ಮಾತುಗಳನ್ನೂ ಆಡಲಿಲ್ಲ.

ದಿಲೇರಖಾನನು ಮಹಾರಾ ... ಯಕ್ಕಿದ್ದ ದ್ವೇಷಬುದ್ಧಿಯನ್ನು ಈ
ಒಪ್ಪಂದದಿಂದ ಅಭಿವೃದ್ಧಿಯಾಗವು ... ಇದಕ್ಕೆ ಕಿರಾತಸಿಂಗನ ದುರ್ಬೋ
ಧವೇ ಕಾರಣವೆಂದು ಹೇಳಬಹು ... ರೂ ತಮ್ಮ ತಮ್ಮ ಆಸನಗಳಮೇಲೆ
ಕುಳಿತ ಬಳಿಕ ಜಯಸಿಂಗನು ... ಕುರಿತು—"ಖಾನಸಾಹೇಬ,
ಒಪ್ಪಂದದ ಕರಾರುಗಳ ಕೆ ... ಇದಲು ಶಿವರಾಯನು ನಿಮ
ಗೊಂದು ಕಾಣಿಕೆಯನ್ನು ಸ ... ಕು. ಆ ಕಾಣಿಕೆಯು
ಆ ಪರದೆಯ ಒಳಭಾಗದಲ್ಲ ... ನೋಡಿಬರಬೇಕು."
ಎಂದು ಹೇಳಿದನು. ದು ... ಯಸಿಂಗನ ಈ ಮಾತು
ಗಳು ವಿನೋದಪರವಾಗಿ ... ಂದ ಕೆಳಗೆ ಇಳಿಯಲಿಲ್ಲ.
ಆಗ ಜಯಸಿಂಗನು ಪ್ರ ... ಸ್ತನಾದ ಖಾನನು ಆಗ
ಜಯಸಿಂಗನನ್ನು ಕುರಿ ... ನ್ನು ಮಾಡುವಿರೊ ಏನು?
ಬೈಲಿಗೆ ತಾರದಂಥ ಕ ... ಇಂಥ ಕಾಣಿಕೆಯ ಅವ
ಶ್ಯಕತೆಯು ನನಗಿಲ್ಲ. ... " ಎಂದು ಸಂತಾಪದಿಂದ
ನುಡಿದನು. ಖಾನ ... ನು ನಕ್ಕು, ಮತ್ತೆ ಅವ
ನಿಗೆ ಸಮಾಧಾನ ಹೇ ... ನನ್ನು ಪರದೆಯ ಬಳಿಗೆ
ಕಳಿಸಿದನು. ಖಾ ... ಸರಮಾಡಿ ಸ್ವಲ್ಪ ದೂರ
ಸಾಗಿಹೋಗಲು, ... ಕಣ್ಣಿಗೆ ಬಿದ್ದಿತು. ಅವನು

ಆದನ್ನೂ ಓರೆಮಾಡಿ ಒಳಗೆ ಕಾಲಿಡಲು, ಚಿಕ್ಕಪ್ರಾಯದ ಒಬ್ಬ ಸುಂದರಿಯು ಬಾಬಾ, ಎಂದು ಉಚ್ಚರಿಸಿ, ಆತನ ಕೊರಳಿಗೆ ಗಾಢಾಲಿಂಗನವನ್ನಿತ್ತಳು. ಬಾಬಾ ಎಂಬ ಮಂಜುಳವಾದ ಶಬ್ದವು ಕಿವಿಗೆ ಬೀಳಲು ಖಾನನು ಎಚ್ಚತ್ತು—"ಇದೇನು ನೂರ್‌ಎಲ್‌ಹುದಾ, ಇಲ್ಲಿಗೆ ಹ್ಯಾಗೆ ಬಂದೆ?" ಎಂದು ನುಡಿದು ಮಗಳನ್ನು ಮುದ್ದಾಡಿದನು. ಆಗ ಖಾನನಿಗೆ ಕ್ಷಣಮಾತ್ರ ಆನಂದದ ಅತಿರೇಕ ವಾಗಿ ಮಗಳನ್ನು ಮಿಕಿ ಮಿಕಿ ನೋಡುತ್ತ ನಿಂತು ಬಿಟ್ಟನು. ಬಳಿಕ ಅವನು ಮಗಳನ್ನು ತಬ್ಬಿಕೊಂಡು—

"ಈ ನೀಚ ಮರಾಟರು ಇಷ್ಟು ದಿನ ನನ್ನ ಮಗಳನ್ನು ಬಚ್ಚಿಟ್ಟು ಈಗ ಒಪ್ಪಂದದ ಕಾಲಕ್ಕೆ ನನಗೆ ತಂದು ಕೊಟ್ಟರೇ? ಶಾಬಾಸ್! ನಿಮ್ಮ ಮುತ್ಸದ್ದಿ ಗಿರಿಯು ನಿಜವಾದದ್ದು!! ಎಂದು ..ಯುತ್ತಿರಲು, ನೂರಎಲ್‌ಹುದಾಳು

ನಡುವೇಬಾಯಿಹಾಕಿ—ಅಪ್ಪಾ, ವ ನ್ನು ಬಯ್ಯಬೇಡ; ಅವರ ರಾಜನಾದ

ಶಿವಾಜಿಯು ಬಹು ಪುಣ್ಯಶಾಲಿಯಾ ಆತನು ಪರಸ್ತ್ರೀಯನ್ನು ತಾಯಿ

ಯಂತೆ, ಬೆನ್ನಿಲೆ ಬಿದ್ದ ಅಕ್ಕ-ತಂಗಿ ತಿಳಿಯುತ್ತಿರುವನು. ಆ ಮಹಾ

ರಾಯನ ಸಹಾಯದಿಂದಲೇ ನಾ ದ್ಧ ಸ್ಥಿತಿಯಿಂದ ನಿನ್ನ ಬಳಿಗೆ

ಬಂದೆನು. ಇಲ್ಲದಿದ್ದರೆ ಆ ನೀಚ ನ್ನನ್ನು ಯಾವ ಗತಿಗೆ ಮುಟ್ಟಿ

ಸುತ್ತಿದ್ದರೋ ತಿಳಿಯದು!! ನಾನು ತಂದೆಯ ಮನೆಯಿಂದ

ಹೊರಟಾಗಿನಿಂದ ಇ ತಾಂತವನ್ನು ಹೇಳಿದಳು.

ಆಕೆಯು ಆ ಎಲ್ಲ ಸ ಲಿಂದ ಮೇಲೆ ಶಿವಾಜಿಯು

ಉಪಕಾರವನ್ನು ಹೊ ಕಡೆಯಿಂದ ಮರಾಟರು

ತನ್ನನ್ನು ಬಿಡಿಸಿಕೊಂಡು ಯು ತನ್ನನ್ನು ಸಂರಕ್ಷಿ

ಸಿದ್ದನ್ನೂ ಹೇಳಿ ಆಕೆ ಸೌಜನ್ಯವನ್ನು ಎಷ್ಟು

ಹೇಳಲಿ? ಅವರು ನನ್ನ ದೊಡ್ಡವಾಡೆಯೊಳಗೆ

ಇಟ್ಟಿದ್ದರಷ್ಟೇ; ನಾನು ಟನಾದರೂ ಸುಳಿಯು

ಲಿಲ್ಲ. ಅಲ್ಲಿ ಇದ್ದಾಗ ನ ತ್ತಿದ್ದಿಲ್ಲ. ಆ ಪುಣ್ಯ

ಪುರುಷನಾದ ಶಿವಾಜಿ ಂಡು ಹೋಗದಿದ್ದರೆ

ನಾನು ಇಷ್ಟೊತ್ತಿಗೆ ಯಾ ಗೆ ಆಹುತಿಯಾಗುತ್ತಿ

ದ್ದೆನು! ಅಪ್ಪಾ ಬಹಳ ವ ಘಟ್ಟಿಯು ಯೋ-

ಗವು ಆ ಮರಾಟರ ವರು ಯುದ್ಧದಲ್ಲಿ

ಹೋಸಗಾರಿಕೆಯನ್ನು ಮಾಡುತ್ತಿರಬಹುದು; ಆದರೆ ಹೆಂಗಸರ ವಿಷಯವಾಗಿ ಅವರಷ್ಟು ಶುದ್ಧ ಮನಸಿನವರನ್ನು ಕಾಣುವದು ದುರ್ಲಭವು'' ಎಂದು ನುಡಿದಳು.

ನೂರಎಲ್‌ಹುದಾಳ ಈ ಮಾತುಗಳನ್ನು ಖಾನನು ಏಕಚಿತ್ತದಿಂದ ಕೇಳುತ್ತಿದ್ದನು. ತನ್ನ ವೈರಿಗಳಾದ ಮರಾಟರು ತನ್ನ ಮಗಳ ವಿಷಯವಾಗಿ ಇಷ್ಟು ಸೌಜನ್ಯವನ್ನು ತೋರಿಸಿದ್ದು ಅವನಿಗೆ ಪರಮಾಶ್ಚರ್ಯವಾಗಿ ತೋರಿತು. ಮಗಳ ನಿರ್ಮಲ ಮುಖಮುದ್ರೆಯನ್ನೂ, ಸರಳ ಸ್ವಭಾವವನ್ನೂ, ಆಕೆಯಲ್ಲಿ ಕಂಡುಬರುವ ಪವಿತ್ರತೆಯ ಭಾವವನ್ನೂ ನೋಡಿ ಖಾನನ ಅಂತಃಕರಣವು ಉಕ್ಕಿಬಂದಿತು! ಅವನು ತನ್ನ ಪಂಚಪ್ರಾಣವಾದ ನೂರ್‌ಎಲ್‌ಹುದಾಳನ್ನು ತನಗೆ ತಂದುಕೊಟ್ಟಿದ್ದಕ್ಕೆ ಮರಾಟರನ್ನು ಮನಃಪೂರ್ವಕವಾಗಿ ಅಭಿನಂದಿಸಿದನು. ಮರಾಟರೇ ತನ್ನ ಮಗಳನ್ನು ಅಪಹರಿಸಿದರೆಂಬ ಅವನ ಭ್ರಾಮಕಕಲ್ಪನೆಯು ದೂರಾಗಿ ಆ ಕಲ್ಪನೆಯ ಸ್ಥಳದಲ್ಲಿ ಮರಾಟರ ವಿಷಯವಾಗಿ ಪೂಜ್ಯಬುದ್ಧಿಯು ನೆಲೆಗೊಂಡಿತು. [illegible] ಅವನಿಗೆ ತಮ್ಮ ದಂಡಿನೊಳಗಿನ ರಜಪೂತರು ಯಾರು ಇಂಥ ನೀಚ ಕೆಲಸ[illegible] ಮಾಡಿದರು? ಎಂಬದು ತಿಳಿಯದಾಯಿತು. ಅವನು ಶಕ್ಯವಾದಷ್ಟು ಸ[illegible]ಯನ್ನು ಮ[illegible]ಗಳಿಂದ ತಿಳಕೊಂಡು, ಹೊರಗಿನವರು ಎಷ್ಟುಹೊತ್ತು ಕು[illegible]ರುವರು? ಎಂದು ಯೋಚಿಸಿ ಮಗಳ ಮುಖವನ್ನು ಮತ್ತೊಮ್ಮೆ ನೋಡಿ ಹೊರಗೆ ಬಂದನು.

ಹೊರಗೆ [illegible]ಗ ದಿಲೇರಖಾನನ ಮೋರೆಯ ಮೇಲೆ ಸಂತೋಷವು ಮಿನುಗುತ್ತಿತ್ತು. [illegible] ತನು ಬಂದ ಕೂಡಲೆ ಶಿವಾಜಿಯನ್ನು ಅಭಿನಂದಿಸಿ, ನುಡಿದದ್ದೇನೆಂದರೆ [illegible]ರಾವ, ನೀವು ಕೊಟ್ಟ [illegible]ಕಾಣಿಕೆಯನ್ನು ಸ್ವೀಕರಿಸದಿದ್ದರೆ ದಿಲೇ[illegible]ನಿಗೆ ದ[illegible]ಂತರವೇ ಇಲ್ಲದಾಯಿತು. ಇನ್ನು ನಾನು ನಿಮ್ಮನ್ನು ಸನ್ನ[illegible]ಕ್ಕೆ [illegible]ರೆಂದು ತಿಳಿಯುತ್ತೇನೆ.'' ಪ್ರಿಯ ವಾಚಕರೇ, ಈಗ ನೋಡಿರಿ, ಖಾ[illegible]ಹ್ಯಾಗೆ ಮಿತ್ರನಾದನು? ಶಿವಾಜಿಯೆಂದರೆ ಬೆಂಕಿಯನ್ನು ಕಾರುತ್ತಿದ್ದ [illegible]ಹೇಬರು ಇಷ್ಟು ವಿನಯವನ್ನು [illegible]ತರಿಂದ ತಾಳಿದರು? ಯಾತರಿಂದ [illegible] ಶಿವರಾಜನ ಪರೋಪಕೃತಿಯ ನೀತಿಮತ್ತೆಯ ಧರ್ಮದಿಂದ!! ಒಳ[illegible] ಒಪ್ಪಂದದ ಮಾತುಕಥೆಗಳು ಹೊರಟವು. ಖಾನಸಾಹೇಬರಂತೂ ಈಗಿದ[illegible]ಪ್ಪಂದದ ಕರಾರುಗಳಲ್ಲಿ ಸಹ ಶಿಥಿಲ ಮಾಡುತ್ತಿದ್ದರೆ ಮಾಡಬಹುದೆಂದು [illegible]ಟ್ಟರು. ಹೀಗೆ ಖಾನಸಾಹೇಬರ ಒಪ್ಪಿಗೆಯು ಸಿಕ್ಕಕೂಡಲೆ ಸ್ವಲ್ಪ ಚರ್ಚೆ[illegible] ರುಷಕರಾರನಾಮೆಯು ಬರೆದು ಸಿದ್ಧವಾಯಿತು. ಒಪ್ಪಂದದಲ್ಲಿ ಶಿವ

ರಾಯನು ಬಾದಶಹನಿಗೆ ೪ ಲಕ್ಷ ಹೊನ್ನು ಉತ್ಪನ್ನವಾಗುವ ಮುಲುಖುಗಳನ್ನು ಬಿಟ್ಟುಕೊಡಬೇಕೆಂತಲೂ, ಶಿವಾಜಿಯು ೧ ಲಕ್ಷ ಹೊನ್ನು ಉತ್ಪನ್ನವಾಗುವ ೧೨ ಕಿಲ್ಲೆಗಳನ್ನು ಇಟ್ಟುಕೊಂಡು ಅವುಗಳ ಕಾರಭಾರವನ್ನು ಬಾದಶಹನ ತರ್ಫೆನಿಂದ ಮಾಡಬೇಕೆಂತಲೂ, ವಿಜಾಪುರಪ್ರಾಂತದಲ್ಲಿ ವಸೂಲ ಮಾಡುತ್ತಿದ್ದ ಚೌಥಾಯಿ ಸರದೇಶಮುಖಿಗಳ ಸಲುವಾಗಿ ವರುಷಾ ೩ ಲಕ್ಷ ಹೊನ್ನಿನಂತೆ ಶಿವಾಜಿಯು ಬಾದಶಹನಿಗೆ ಖಂಡಣಿಯನ್ನು ಕೊಡಬೇಕೆಂತಲೂ, ಬಾದಶಹನು ಸಂಭಾಜಿಗೆ ೫ ಸಾವಿರ ರಾವುತರ ಮನಸಬದಾರಿಯನ್ನು ಕೊಡಬೇಕೆಂತಲೂ ಗೊತ್ತಾಯಿತು. ಕರಾರನಾಮೆಯ ಮೇಲೆ ಉಭಯಪಕ್ಷದವರ ಸಹಿಗಳು ಆಗಿ, ಅದು ಬಾದಶಹನ ಕಡೆಗೆ ರವಾನಿಸಲ್ಪಟ್ಟಿತು. ಆಗ ಜಯಸಿಂಗನು ಶಿವರಾಯನನ್ನು ಕುರಿತು—"ನೀವು ನಮ್ಮ ಖಾನಸಾಹೇಬರಿಗೆ ಮೌಲ್ಯವಾದ ಒಂದು ಕಾಣಿಕೆಯನ್ನು ಕೊಟ್ಟಿರಷ್ಟೇ; ಅದರ ಪ್ರತ್ಯುಪಕಾರವಾಗಿ ನಾನು ನಿಮಗೆ ಎರಡು ಕಾಣಿಕೆಗಳನ್ನು ಕೊಡುತ್ತೇನೆ" ಎಂದು ನುಡಿದು, ಓಳಿಯಲ್ಲಿ ಕುಳಿತ ಒಬ್ಬ ಮನುಷ್ಯನಿಗೆ ಸಾಂಕೇತಿಕ ಶಬ್ದಗಳಿಂದ ಏನೋ ಸನ್ನೆ ಮಾಡಿದನು. ಕೂಡಲೆ ಅವನು ಅಲ್ಲಿಂದ ಎದ್ದು ಹೋಗಿ, ತನ್ನ ಎರಡು ಕೈಗಳಲ್ಲಿ ವಿಚಿತ್ರ ವೇಷದ ಇಬ್ಬರು ಮನುಷ್ಯರನ್ನು ಹಿಡಕೊಂಡು ಬಂದನು. ಆ ಇಬ್ಬರನ್ನು ನೋಡಿ ಶಿವಾಜಿಯು ದಂಗುಬಟ್ಟು ಮೌನವಾಗಿ ಕುಳಿತನು. ಮನುಷ್ಯರಿಬ್ಬರಿಗೂ ಶಿವಾಜಿಯನ್ನು ನೋಡಿ ಅತ್ಯಂತ ನಾಚಿಕೆಯುಂಟಾಯಿ. ಆಗ ಅವರು ಮೇಲಕ್ಕೆ ಮುಖವನ್ನೆತ್ತಿ ಶಿವರಾಯನನ್ನು ನೋಡಲು ಧೈರ್ಯಾಲದೆ ಕೆಳಕ್ಕೆ ಮೋರೆಯನ್ನು ಹಾಕಿಕೊಂಡು ನಿಂತರು. ಪ್ರಿಯವಾಚಕರೇ! ಮನುಷ್ಯರು ಯಾರೆಂಬದು ನಿಮ್ಮ ಸ್ಮರಣೆಯಲ್ಲಿ ಬಂದಿರಬಹುದಲ್ಲವೇ? ಆ ಅವರ ಪರಿಚಯವನ್ನು ಇನ್ನೊಮ್ಮೆ ಮಾಡಿಕೊಡುವೆವು ಕೇಳಿರಿ; ಹಿಂದೈನರಾಜನ ಓಳಿಯಲ್ಲಿ ಪ್ರತಿಜ್ಞೆಮಾಡಿ ಜಯಸಿಂಗನ ಛಾವಣಿಯೊಳಗಿನ ಸಂಗನ್ನು ತಿಳಿಯಲಿಕ್ಕೆ ಗುಪ್ತಚಾರರಿಬ್ಬರು ಹೋಗಿದ್ದರಷ್ಟೇ; ಅವರೇ ಈಗ್ಗಿರುವ ಆ ಮನುಷ್ಯರು, ಒಬ್ಬನು ಕೊಂಗಾಡಿಯು! ಇನ್ನೊಬ್ಬನು ಜೋಗನು!

ಇತ್ತ ರವಾನಿಸಲ್ಪಟ್ಟ ಕರಾರನಾಮೆಯನ್ನು ಧೂರ್ತನ ಬಾದಶಹನು ಓದಿನೋಡಿ, ಕಪಟಪಂಜಿಕೆಯನ್ನು ತೆಗೆದು ಅದಕ್ಕೆ ಉತ್ತರವನ್ನು ಬರೆದನೇನಂದರೆ—"ನೀವು ಕಳಿಸಿದ ಕರಾರನಾಮೆಯಿಂದ ನನಗೆ ಬಲುಸಂತೋಷವಾಯಿತು. ಅದರೊಳಗಿನ ಎಲ್ಲ ಕರಾರುಗಳಿಗೆ ನನ್ನ ಪೂರ್ಣ ಸಮ್ಮತಿ ಇದೆ; ಆದರೆ

ಶಿವಾಜಿಯನ್ನು ಇಲ್ಲಿಯವರೆಗೆ ಕರಕೊಂಡು ಬರಬೇಕು. ನಾನು ಅವನಿಗೆ ನನ್ನ ಕೈಮುಟ್ಟಿ ಪೋಷಾಕುಗಳನ್ನು ಕೊಟ್ಟು, ಅವನಿಗೆ ಪ್ರಾಂತಗಳ ಅಧಿಕಾರ ಕೊಡ ಶಕ್ಯವನಿದ್ದೇನೆ."

ಈ ಪ್ರಕಾರ ಬಾದಶಹನಿಂದ ಬಂದ ಉತ್ತರವನ್ನು ಜಯಸಿಂಗನು ಶಿವರಾಯನಿಗೆ ತಿಳಿಸಿದನು. ಅದನ್ನು ಕೇಳಿ ಶಿವರಾಯನು ಮೊದಲು ಸ್ವಲ್ಪ ಅನುಮಾನಕ್ಕೊಳಗಾದನು. ಯಾಕಂದರೆ ಬಾದಶಹನು ಮಹಾ ಕಪಟಿಯಾದ್ದರಿಂದ ಎಲ್ಲಿ ತನ್ನನ್ನು ಮೋಸಗೊಳಿಸುವನೋ ಎಂಬ ಹೆದರಿಕೆಯು ಶಿವಾಜಿಯಲ್ಲಿ ಉಂಟಾಯಿತು. ನಿಜವಾಗಿ ನೋಡಿದರೆ ಅವನ ಈ ಅನುಮಾನವಾದರೂ ಯಥಾರ್ಥವಾಗಿತ್ತು. ಮಹಾರಾಜರ ಹಿತೈಷಿಗಳೂ ಬಾದಶಹನ ಭೆಟ್ಟಿಯನ್ನು ತಿರಸ್ಕರಿಸಿದರು; ಆದರೆ ಮಹಾರಾಜರ ಮನಸ್ಸಿನಲ್ಲಿ ಒಮ್ಮೆ ಔರಂಗಜೇಬಬಾದಶಹನನ್ನೂ, ಆತನ ದರ್ಬಾರವನ್ನೂ, ಉತ್ತರಕಡೆಯ ರಜಪೂತರ ಸ್ಥಿತಿಯನ್ನೂ ನೋಡಬೇಕೆಂಬ ಕುತೂಹಲವಿದ್ದದರಿಂದ ಅವರು ಬಾದಶಹನ ಭೆಟ್ಟಿಗೆ ಹೋಗುವದನ್ನು ನಿರ್ಧರಿಸಿದರು. ಬಳಿಕ ಅವರು ಜಯಸಿಂಗನ ಭೆಟ್ಟಿಗಾಗಿ ಹೋದರು. ಜಯಸಿಂಗನಾದರೂ ಮಹಾರಾಜರಿಗೆ ಬಾದಶಹನ ಭೆಟ್ಟಿಗೆ ಹೋಗಲಿಕ್ಕೆ ಅಭಯವನ್ನು ಕೊಟ್ಟನು. ಒಂದುವೇಳೆ ಬಾದಶಹನು ಮೋಸಮಾಡಿದರೆ ನಮ್ಮ ಪಕ್ಷದ ಜನರು ನಿಮಗೆ ಸಹಾಯ ಮಾಡಿ ನಿಮ್ಮನ್ನು ರಕ್ಷಿಸುವರೆಂದು ಸಹ ಹೇಳಿದನು.

ಒಪ್ಪಂದದ ಕರಾರುಗಳಿಗೆ ಬಾದಶಹನ ಒಪ್ಪಿಗೆಯು ಸಿಕ್ಕದ್ದರಿಂದ ಯುದ್ಧವು ಸಮೂಲವಾಗಿ ನಿಂತು ಪ್ರಜೆಗಳ ಗೋಳಾಟವು ತಪ್ಪಿತು. ಮೊಗಲರು ಶಿವರಾಯನು ಕೊಟ್ಟ ಕೋಟೆಗಳಮೇಲೆ ಯಾರು ಯಾರನ್ನು ನೇಮಿಸಬೇಕೆಂದು ಹಂಚಿಕೆ ಹಾಕಹತ್ತಿದರು. ಈ ಒಪ್ಪಂದದಿಂದ ಶಿವರಾಜನಲ್ಲಿ ಅಸಂತುಷ್ಟತೆಯು ನೆಲೆಗೊಂಡಿದ್ದರೂ, ಏನಾಗುವದೆಲ್ಲ ಅಂಬಾಭವಾನಿಯ ಕೃಪೆಯಿಂದಲೇ ಆಗುವದೆಂದು ತಿಳಿದು ಆಗ್ರಾಕ್ಕೆ ಹೊರಡುವ ಮುಹೂರ್ತವನ್ನು ನಿರೀಕ್ಷಿಸುತ್ತ ಕುಳಿತನು.



## ೧೫—ಗ್ರಹಣ.

ಸೂರ್ಯೋದಯ ಸಮಯವು; ಪ್ರಾಕ್‌ದಿಗ್‌ವಧುವು ಶುಭ್ರವಸ್ತ್ರವನ್ನು ಆದೇ ಪರಿಧಾನ ಮಾಡುತ್ತಿರುವಳು; ತಮಸ್ಸೆಂಬ ರಾಕ್ಷಸಿಯ ಸೆರೆಯಿಂದ ವಿಮುಕ್ತವಾದ ಪಕ್ಷಿಸಮೂಹವು ಉಲ್ಲಾಸದಿಂದ ಈ ಗಿಡದಿಂದ ಆ ಗಿಡಕ್ಕೆ ಆ ಗಿಡದಿಂದ ಈ ಗಿಡಕ್ಕೆ ಹಾರಾಡುತ್ತ ಕಿಲಿಬಿಲಿ ಎಂದು ಶಬ್ದಗೈಯುತ್ತಲಿರುವದು. ಸುಖಮಯವಾದ ಗಾಳಿಯು ಸುಳಿದಾಡಿ ಪ್ರಾಣಿಗಳ ಮನಸ್ಸನ್ನು ರಮಿಸುತ್ತಿರುವದು; ಇಂಥ ಪ್ರಶಾಂತವಾದ ಸಮಯದಲ್ಲಿ ಆಗ್ರಾಪಟ್ಟಣದಿಂದ ಕೆಲವು ಅಂತರದಲ್ಲಿ ಯಾವದೋ ಒಂದು ರಾಜಪರಿವಾರವು ಸಾವಕಾಶವಾಗಿ ಮಾರ್ಗಕ್ರಮಣ ಮಾಡುತ್ತಿತ್ತು. ಆ ಪರಿವಾರದಲ್ಲಿ ಎಷ್ಟೋ ಒಂಟೆಗಳೂ, ಆನೆಗಳೂ, ಕುದುರೆಗಳೂ ಇದ್ದವು; ಅದರಲ್ಲಿ ಸಾಮಾನಗಳಿಂದ ತುಂಬಿದ ಗಾಡಿಗಳಾದರೂ ಹಲ ಕೆಲವು ಇದ್ದವು. ಆ ಪರಿವಾರದೊಳಗಿನ ಎಷ್ಟೋ ಜನರು ಕುದುರೆಗಳ ಮೇಲೆ ಸ್ವಾರರಾಗಿದ್ದರು; ಕೆಲವರು ಕಾಲುನಡಿಗೆಯಿಂದ ನಡೆಯುತ್ತಿದ್ದರು; ಬೇರೆ ಹಲವರು ಮೇಣೆ-ಪಲ್ಲಕ್ಕಿಗಳಲ್ಲಿ ಕುಳಿತಿದ್ದರು. ಶಸ್ತ್ರಾಸ್ತ್ರಗಳಿಂದ ಸಜ್ಜಾಗಿದ್ದ ಆ ಪರಿವಾರವು ವೀರಶ್ರೀಯಿಂದ ಒಪ್ಪುತ್ತಲಿತ್ತು.

ಆ ಪರಿವಾರದ ಮಧ್ಯದಲ್ಲಿ ಒಂದು ಸುಂದರವಾದ ಪಲ್ಲಕ್ಕಿಯು ಇತ್ತು. ಅದಕ್ಕೆ ದೊಡ್ಡ ಮುತ್ತುಗಳ ಗೊಂಡೆಯನ್ನು ಹಚ್ಚಿದ್ದರು. ಅದರೊಳಗಿನ ಮೃದು ತಲ್ಪದ ಮೇಲೆ ಮಧ್ಯಮ ನಿಲುವಿಕೆಯ ಒಬ್ಬ ಮನುಷ್ಯನು ಕೂತುಕೊಂಡಿದ್ದನು. ಆತನು ತೀರ ಸಾದಾಪೋಷಾಕನ್ನು ಧರಿಸಿದ್ದನು. ಅವನ ಮುಖವು ಸ್ವಲ್ಪ ಬಾಡಿದಂತೆ ತೋರುತ್ತಿದ್ದು; ಯಾವದೋ ಒಂದು ಚಿಂತೆಯು ಅವನನ್ನು ಆವರಿಸಿಕೊಂಡಂತೆ ಭಾಸವಾಗುತ್ತಿತ್ತು; ಅವನು ಒಂದು ತುಟಿ ಎರಡುಮಾಡದೆ ಎದುರಿಗೆ ಕಾಣುವ ಆಗ್ರಾಪಟ್ಟಣದ ಶೋಭೆಯನ್ನು ಶೂನ್ಯದೃಷ್ಟಿಯಿಂದ ನೋಡುತ್ತ ಕುಳಿತುಕೊಂಡಿದ್ದನು. ಹೀಗೆ ಆ ಪರಿವಾರವು ಸಾಗುತ್ತ ಆಗ್ರಾದ ನೆರೆಯಲ್ಲಿ ಹೋಗಿ ಒಂದು ಪ್ರಶಸ್ತವಾದ ಬೈಲಲ್ಲಿ ತಳವೂರಿತು.

ಪ್ರಿಯವಾಚಕರೇ, ಮೇಲೆ ವರ್ಣಿಸಿದ ಆ ಪರಿವಾರವು ಯಾರದೆಂಬದು ನಿಮಗೆ ಹೊಳೆದಿರಬಹುದಷ್ಟೇ; ಶಿವಾಜಿ ಮಹಾರಾಜರು ಬಾದಶಹನ ಭೆಟ್ಟಿಗೆ ಹೊರಡುವದನ್ನು ನಿಶ್ಚಯಿಸಿದ ಬಳಿಕ ಅವರು ಮೇಲೆ ಹೇಳಿದಂತೆ ಪರಿವಾರವನ್ನು

ತಕ್ಕೊಂಡು ಪಯಣದ ಮೇಲೆ ಪಯಣ ಮಾಡುತ್ತ, ದಾರಿಯಲ್ಲಿ ಅನೇಕ ಜನ ಸರದಾರರು, ಕಿಲ್ಲೇದಾರರು, ಸುಭೇದಾರರಿಂದ ಮಾನಮರ್ಯಾದೆಗಳನ್ನು ಹೊಂದುತ್ತ ಒಮ್ಮೆ ಆಗ್ರಾಕ್ಕೆ ಬಂದು ಮುಟ್ಟಿದರು. ಬಳಿಕ ಶಿವಾಜಿ ಮಹಾರಾಜರು ಮೇಲೆ ವರ್ಣಿಸಿದ ಪಲ್ಲಕ್ಕಿಯಿಂದಿಳಿದು ಜಯಸಿಂಗನ ಮಗನಾದ ರಾಮಸಿಂಗನಿಗೆ ತಾವು ಬಂದ ವರದಿಯನ್ನು ಕಳಿಸಿದರು. ಈ ರಾಮಸಿಂಗನು ಶಿವಾಜಿರಾಜರ ಪಕ್ಷದವನೆಂಬದನ್ನು ಹಿಂದೆ ೪ನೇ ಪ್ರಕರಣದಲ್ಲಿ ಕೊಟ್ಟ ಪತ್ರದ ಸಂಗತಿಯಿಂದ ವಾಚಕರು ತಿಳಕೊಂಡಿರಬಹುದು. ಈಗ ಜಯಸಿಂಗನಾದರೂ ತನ್ನ ಮಗನ ಹೆಸರಿನಿಂದ ಒಂದು ಪತ್ರವನ್ನು ಬರೆದು ಶಿವಾಜಿ ಮಹಾರಾಜರ ಕೈಯಲ್ಲಿ ಕೊಟ್ಟಿದ್ದನು. ರಾಮಸಿಂಗನು ಶಿವಾಜಿರಾಜರು ಬಂದರೆಂಬ ಸುದ್ದಿಯನ್ನು ಕೇಳಿ ಆನಂದಪಟ್ಟನು; ಅದರಲ್ಲಿ ತನ್ನ ತಂದೆಯು ಬರೆದ ಪತ್ರವನ್ನು ಓದಿಯಂತೂ ಅವನಿಗೆ ಹಿಡಿಸಲಾರದಷ್ಟು ಆನಂದವಾಯಿತು. ಆಗ ಅವನು ಮಹಾರಾಜರಿಗೆ ಬೇಕಾಗುವ ಅನುಕೂಲತೆಗಳನ್ನು ಒದಗಿಸಿಕೊಡುವದಕ್ಕಾಗಿ ತನ್ನ ಸರಂಜಾಮಿನಲ್ಲಿಯ ಕೆಲವು ಮುಖ್ಯ ಮನುಷ್ಯರನ್ನು ಕಳುಹಿಸಿ ಬಾದಶಹನ ಭೆಟ್ಟಿಗೆ ಹೋದನು.

ರಾಮಸಿಂಗನು ಹೋದಾಗ ಔರಂಗಜೇಬನು ಯಾರಿಗೋ ಪತ್ರಗಳನ್ನು ಬರೆಯುತ್ತಿದ್ದನು. ಬಾದಶಹನು ವಿಶೇಷ ಮಹತ್ವದ ಪತ್ರಗಳನ್ನು ತಾನೇ ಕೈಮುಟ್ಟಿ ಬರೆಯುತ್ತಿದ್ದನು. ರಾಮಸಿಂಗನು ಬಾದಶಹನ ಒಪ್ಪಿಗೆಯಿಂದ ಒಳಗೆ ಹೋಗಿ ಕುರ್ನಿಸಾತಮಾಡಿ ನಿಂತುಕೊಂಡನು. ರಾಮಸಿಂಗನು ಬಂದದ್ದನ್ನು ನೋಡಿಯೂ ಬಾದಶಹನು ಮಾತಾಡಲಿಲ್ಲ. ಗುಪ್ತಚಾರರ ಮುಖದಿಂದ ಶಿವಾಜಿರಾಜನು ಬಂದ ಸುದ್ದಿಯನ್ನು ಬಾದಶಹನು ಈ ಮೊದಲೇ ತಿಳಿದಿದ್ದನು. ಆದ್ದರಿಂದ ಅವನು ರಾಮಸಿಂಗನು ಶಿವಾಜಿಯ ವಿಷಯವಾಗಿಯೇ ಮಾತಾಡಲಿಕ್ಕೆ ಬಂದಿರುವನೆಂದು ತಿಳಿದು ಬುದ್ಧಿಪೂರ್ವಕವಾಗಿ ಸುಮ್ಮನಿದ್ದನು. ಇದರಿಂದ ರಾಮಸಿಂಗನಿಗೆ ಅಸಮಾಧಾನವಾಯಿತು; ಕೂಡಲೆ ಧೂರ್ತನಾದ ಆ ಬಾದಶಹನು ರಾಮಸಿಂಗನನ್ನು ಕುರಿತು:-"ಯಾಕೆ ಬಂದಿರುವಿ?" ಎಂದು ವಿಚಾರಿಸಿದನು; ಆಗ ರಾಮಸಿಂಗನು:- "ಶಿವಾಜಿಮಹಾರಾಜರು ಬಂದಿರುವರು; ಅವರ ಸ್ವಾಗತಕ್ಕಾಗಿ ಯಾರನ್ನು ಕಳಿಸಬೇಕು? ಖಾವಂದರ ಅಪ್ಪಣೆಯಾದಂತೆ ನಡಕೊಳ್ಳುವೆನು" ಎಂದು ನುಡಿದನು. 'ಮಹಾರಾಜ' ಎಂಬ ಶಬ್ದವನ್ನು ಕೇಳಿದ ಕೂಡಲೆ ಔರಂಗಜೇಬನ ಕಣ್ಣುಗಳು ಕಿಡಿಕಿಡಿಯಾದವು; ಆದರೂ ಅವನು ಸ್ವಲ್ಪ ಸಮಾಧಾನ ತಕ್ಕೊಂಡು:— "ರಾಮಸಿಂಗ, ನಮ್ಮಿಂದ ೮-೧೦ ಕಿಲ್ಲೆಗಳನ್ನು ಭಿಕ್ಷೆಬೇಡಿ ಇಸಕೊಂಡಿರುವಂಥ

ಕ್ಷುದ್ರಮನುಷ್ಯನಿಗೆ ಮಹಾರಾಜನೆನ್ನುವಿರಾ? ಇತಃಪರ ನನ್ನೆದುರಿಗೆ ಆ ಶಿವಾಜಿಗೆ ಮಹಾರಾಜನೆನ್ನಕೂಡದು, ಎಂದು ಗದ್ದರಿಸಿ—ಆ ಶಿವಾಜಿಗೆ ಯಾತರ ಸ್ವಾಗತವು? ಯಾವನಾದರೊಬ್ಬ ಶಿಲೇದಾರನನ್ನು ಕಳಿಸು; ಅವನ ಸಲುವಾಗಿ ಸಾಧಾರಣ ಪ್ರತಿಯದೊಂದು ಮನೆಯನ್ನು ತೆರವು ಮಾಡಿಸಿ ಇಡು; ಎಂದು ನುಡಿದನು. ಬಾದಶಹನ ಈ ವಿಲಕ್ಷಣ ಮಾತುಗಳನ್ನು ಕೇಳಿ ರಾಮಸಿಂಗನು ಖಿನ್ನನಾದನು; ಅವನು ತನ್ನ ಮನಸ್ಸಿನಲ್ಲಿ—ಈ ದಿನ ಯಾಕೋ ಬಾದಶಹನ ತಲೆತಿರುಗಿರುವದು. ಈಗ ಸುಮ್ಮನೆ ಮನೆಗೆ ಹೋಗುವದೇ ಲೇಸು, ಎಂದು ಎಣಿಸಿ, ಬಾದಶಹನಿಗೆ ಕುರ್ನಿಸಾತನ್ನು ಮಾಡಿ ಮನೆಗೆ ಹೋಗುವ ಇಚ್ಛೆಯನ್ನು ಪ್ರಕಟಿಸಿದನು. ಕೂಡಲೆ ಬಾದಶಹನು ರಾಮಸಿಂಗನನ್ನು ಕುರಿತು—"ಶಿವಾಜಿಯ ಯೋಗ್ಯತೆಗಿಂತ ಹೆಚ್ಚಾಗಿ ಅವನ ಸ್ವಾಗತವನ್ನು ಮಾಡು; ಅವನನ್ನು ಒಂದು ವಾಡೆಯೊಳಗೆ ಇಳಿಸು; ಅವನಿಗೆ ಯಾತರಿಂದಲೂ ಕೊರತೆ ಬಾರದಂತೆ ನೋಡಿಕೋ, ಎಂದು ಸಕ್ಕರೆಯಂಥ ಮಾತುಗಳನ್ನಾಡಿದನು. ಬಾದಶಹನ ಕಪಟ ಹೃದಯವನ್ನು ಬಲ್ಲವನಾದ ರಾಮಸಿಂಗನು ಮಹಾಪ್ರಸಾದವೆಂದು ಅಪ್ಪಣೆ ತಕ್ಕೊಂಡು ಹೊರಟು ಹೋದನು.

ಮೊಗಲರನ್ನು ಬಗ್ಗುಬಡಿಯುವದಕ್ಕಾಗಿ ಅವತರಿಸಿದ ಶಿವಾಜಿ ಮಹಾರಾಜರು ಬಂದಿರುವರೆಂಬ ಸುದ್ದಿಯನ್ನು ಕೇಳಿ, ಆಗ್ರಾದೊಳಗಿನ ಆಬಾಲವೃದ್ಧರೂ ಅವರ ದರ್ಶನಕ್ಕೆ ಉತ್ಸುಕರಾದರು ರಜಪೂತ ಸರದಾರರೆಲ್ಲರೂ ಬಾದಶಹನ ಅಪ್ಪಣೆಯನ್ನು ಸಹ ಪಡೆಯದೆ, ಆ ಮಹಾಪುರುಷನನ್ನು ಎದುರ್ಗೊಳ್ಳುವದಕ್ಕಾಗಿ ನಡೆದರು. ಪೌರಜನರು ಪಟ್ಟಣವನ್ನು ಶೃಂಗರಿಸಿದರು. ಶಿವಾಜಿ ಮಹಾರಾಜರು ತಮ್ಮನ್ನು ಕರೆಯಲಿಕ್ಕೆ ಬಂದ ಈ ಅಪೂರ್ವ ಮಹೋತ್ಸವವನ್ನು ನೋಡಿ ಬೆರಗಾದರು ಅವರ ಮನಸ್ಸಿನ ಚಿಂತೆಯು ದೂರವಾಯಿತು. ರಾಮಸಿಂಗನಿಗಂತೂ ಈ ಆಗಂತುಕ ಸಮಾರಂಭದಿಂದ ಪರಮಾವಧಿಯಾದ ಆನಂದವಾಯಿತು. ಸುಮಾರು ೪೦೦ ವರ್ಷಗಳಿಂದ ಮುಸಲ್ಮಾನರ ಸಂಗದಲ್ಲಿದ್ದ ಇಲ್ಲಿಯ ಹಿಂದೂಜನರಲ್ಲಿ ಸ್ವಾತಂತ್ರ್ಯಪ್ರಿಯತೆಯ ಅಭಿರುಚಿಯು ಇನ್ನೂ ಜಾಗ್ರತವಾಗಿರುವದೆಂಬದನ್ನು ತಿಳಿದು, ಮಹಾರಾಜರಿಗೆ ಒಂದು ಬಗೆಯಿಂದ ಸಮಾಧಾನವಾಯಿತು.

ಮಹಾರಾಜರ ಸ್ವಾಗತ ಮಹೋತ್ಸವವು ಒಬ್ಬ ಸಾರ್ವಭೌಮನ ವಿಜಯೋತ್ಸವವನ್ನು ಸರಿಗಟ್ಟಿತು. ಮಹಾರಾಜರ ಮೆರವಣಿಗೆಯು ಆಗ್ರಾದ ವಿಶಾಲ

ವಾದ ಬೀದಿಯಲ್ಲಿ ಸಾಗಿರುವಾಗ, ಪೌರವಾಸಿಗಳೆಲ್ಲರು ಉಪ್ಪರಿಗೆಗಳನ್ನೂ, ಮಾಳಿಗೆಗಳನ್ನೂ, ವೃಕ್ಷಗಳನ್ನೂ ಹತ್ತಿ, ಮಹಾರಾಜರನ್ನು ಅತ್ಯಂತ ಉತ್ಸುಕತೆಯಿಂದ ನೋಡಿದರು. ಖುದ್ದ ಬಾದಶಹನ ಝುನಾನಖಾನೆಯವರು ಸಹ ಈ ದಕ್ಷಿಣೀರಾಜನ ಸ್ವಾಗತೋತ್ಸವವನ್ನು ನೋಡಬಂದಿದ್ದರೆಂದಬಳಿಕ ಮಹಾಪುರುಷರ ತೇಜಸ್ಸಿನ ಮಹಿಮೆಯನ್ನು ಅದಾರು ವರ್ಣಿಸಬೇಕು? ಆಗ್ರಾದ ಜನರೆಲ್ಲರೂ ಮಹಾರಾಜರಲ್ಲಿ ಶ್ರದ್ಧೆಯನ್ನಿಟ್ಟು ಅವರನ್ನು ಅಭಿನಂದಿಸತೊಡಗಿದರು; ಕೆಲವರು ಕುಚೋದ್ಯಗಾರರು:—"ಶಿವಾಜಿಯು ಅವತಾರಿಕನಾಗಿದ್ದರೆ ಹೀಗೇಕೆ ಮೊಗಲರಿಗೆ ಶರಣುಬರುತ್ತಿದ್ದನು?" ಎಂದು ಪ್ರಶ್ನೆ ಮಾಡುತ್ತಿದ್ದರು; ಅದಕ್ಕೆ ಪುರಜನರು ಉತ್ತರಕೊಡುತ್ತಿದ್ದದ್ದೇನಂದರೆ—"ಶ್ರೀ ರಾಮಚಂದ್ರನು ಅವತಾರಿಕನಾದರೂ ವನವಾಸದ ಕಷ್ಟವನ್ನು ಭೋಗಿಸಲಿಲ್ಲವೇ? ಪಾಂಡವರಿಗೆ ಪರದಾಸ್ಯವು ಪ್ರಾಪ್ತವಾಗಲಿಕ್ಕಿಲ್ಲವೇ? ಹಾಗೆಯೇ ಈ ಮಹಾಪುರುಷನಿಗೂ ಈ ಪ್ರಸಂಗವು ಒದಗಿರುವದು."

ಶಿವಾಜಿಮಹಾರಾಜರಿಗಾದ ಈ ಗೌರವವನ್ನು ನೋಡಿ, ಆಗ್ರಾದೊಳಗಿನ ಮುಸಲ್ಮಾನ ಸರದಾರರಿಗೆಲ್ಲ ವಿಲಕ್ಷಣ ಸಂತಾಪವಾಯಿತು ಅವರು ತಮ್ಮೊಳಗೆ:—"ಆ ಕಾಫರನಿಗೆ ಖುದ್ದ ಶಹಾನಶಹಾ ಇರುವ ಪಟ್ಟಣದಲ್ಲಿ ಸಹ ಇಷ್ಟು ಮರ್ಯಾದೆಯೇ?" ಎಂದು ಒಟಗುಟ್ಟುತ್ತಿದ್ದರು. ಇರಲಿ; ಮಹಾರಾಜರ ಪರಿವಾರವು ವೈಭವದಿಂದ ಮೆರವಣಿಗೆಯನ್ನು ಹೊಂದಿ, ಒಂದು ದೊಡ್ಡ ವಾಡೆಯಲ್ಲಿ ಇಳಕೊಂಡಿತು. ಆ ವಾಡೆಗೂ ರಾಮಸಿಂಗನ ಮುಕಾಮಕ್ಕೂ ಅತಿಸಮೀಪವಿತ್ತು; ಆ ಪ್ರಚಂಡವಾದ ವಾಡೆಯ ಬಳಿಯಲ್ಲಿ ರಾಮಸಿಂಗನು ತಂಬುಗಳನ್ನು ಹೊಡೆಯಿಸಿ, ಬೇರೆ ಬೇರೆ ಜನರು ಇಳಕೊಳ್ಳಲಿಕ್ಕೆ ವ್ಯವಸ್ಥೆ ಮಾಡಿದ್ದನು. ಮಹಾರಾಜರು ಆ ವಾಡೆಯೊಳಗಿನ ಒಂದು ಭವ್ಯವಾದ ದಿವಾಣಖಾನೆಯಲ್ಲಿ ಹೋಗಿ ಕುಳಿತುಕೊಂಡರು. ಬಳಿಕ ಸ್ವಲ್ಪ ಅವಧಿಯಲ್ಲಿಯೇ ಎಷ್ಟೋ ಜನ ಹಿಂದು ಅಮೀರ-ಉಮರಾವರು ಬಂದು ಮಹಾರಾಜರ ಭೆಟ್ಟಿಯನ್ನು ತಕ್ಕೊಂಡರು. ನಂತರ ಮಹಾರಾಜರು ಸ್ವಲ್ಪ ವಿಶ್ರಾಂತಿಯನ್ನು ತಕ್ಕೊಳ್ಳಲೆಂದು ಎಲ್ಲರೂ ಹೊರಟುಹೋದರು; ರಾಮಸಿಂಗನು ಮಹಾರಾಜರನ್ನು ಕುರಿತು—"ಸರ್ವ ವ್ಯವಸ್ಥೆಯನ್ನು ಚನ್ನಾಗಿ ಮಾಡಿರುವದು; ಆದರೂ ಏನಾದರೂ ಕಡಿಮೆಬಿದ್ದಲ್ಲಿ ಸಂಕೋಚವಿಲ್ಲದೆ ತಿಳಿಸುವ ಕೃಪೆಮಾಡಬೇಕು; ತಾವು ತಮ್ಮ ರಾಜ್ಯದಲ್ಲಿ, ತಮ್ಮ ರಾಜವಾಡೆಯಲ್ಲಿ ಇದ್ದಂತೆ ಇಲ್ಲಿ ನಿಶ್ಚಿಂತೆಯಿಂದ ಇರಬೇಕು" ಎಂದು ವಿನಯದಿಂದ

ನುಡಿದು, ಅವರ ಎಲ್ಲ ವ್ಯವಸ್ಥೆಯನ್ನು ನೋಡಲಿಕ್ಕೆ ವಾಕನೀಸನಿಗೆ ಆಜ್ಞಾಪಿಸಿ. ಅವರ ಅಪ್ಪಣೆಯನ್ನು ತಕ್ಕೊಂಡು, ತನ್ನ ಮಂದಿರಕ್ಕೆ ಹೊರಟು ಹೋದನು.

ಮಧ್ಯಾಹ್ನದಲ್ಲಿ ಊಟವಾದ ಬಳಿಕ ರಾಮಸಿಂಗನು ಬಾದಶಹನ ಬಳಿಗೆ ಹೋದನು. ಆಗ ಮಾತ್ರ ಅವನು ರಾಮಸಿಂಗನೊಡನೆ ಸರಳವಾಗಿ ಮಾತಾಡಿ- "ರಾಮಸಿಂಗ, ಶಿವಾಜಿಯ ಎಲ್ಲ ವ್ಯವಸ್ಥೆಯನ್ನು ಚನ್ನಾಗಿ ಇಟ್ಟಿರುವಿಯಾ? ಏನೂ ಕೊರತೆಯಾಗಿಲ್ಲವಷ್ಟೇ; ಆತನ ಮನಸ್ಸಿಗೆ ಸಮಾಧಾನವಾಗುವಂತೆ ವ್ಯವಸ್ಥೆಯನ್ನಿಡು; ಮುಂದೆ ನಾವು ಅವನ ಕೂಡ ಸಖ್ಯವನ್ನು ಬೆಳಿಸಬೇಕಾಗಿದೆ. ಆತನ ಮನಸ್ಸಿಗೆ ಯಾವತರದಿಂದಲೂ ಅಸಮಾಧಾನವಾಗಬಾರದು!" ಎಂದು ನುಡಿದನು. ಬಾದಶಹನ ಈ ಮಾತುಗಳನ್ನು ಕೇಳಿ ರಾಮಸಿಂಗನಿಗೆ ಆಶ್ಚರ್ಯವಾಯಿತು. ಯಾಕಂದರೆ ಮುಂಚಾಪಿನಲ್ಲಿ ಶಿವಾಜಿಯನ್ನು ತೀರ ಜರೆದಾಡಿ ಮಾತನಾಡಿದ ಬಾದಶಹನು ಈಗ ಇಷ್ಟು ಸಭ್ಯತನದಿಂದ ಯಾಕೆ ಮಾತಾಡುವನೆಂಬದು ಆತನಿಗೆ ತಿಳಿಯದಾಯಿತು. ಮಹಾರಾಜರ ಅಪೂರ್ವವಾದ ಸ್ವಾಗತೋತ್ಸವದಿಂದ ಬಾದಶಹನ ಮನಸ್ಸು ಸಂತಪ್ತವಾಗಿರಬಹುದೆಂದು ರಾಮಸಿಂಗನು ತರ್ಕಿಸಿರಲು, ಈ ವಿಪರೀತ ಪ್ರಕಾರವು ಕಂಡು ಬಂದದರಿಂದ ಆತನು ಹಾಗೆ ವಿಸ್ಮಯಗೊಂಡದ್ದರಲ್ಲಿ ಆಶ್ಚರ್ಯವಿಲ್ಲ. ಆಗ ರಾಮಸಿಂಗನು ಚಕಿತನಾಗಿ ನಿಂತುಕೊಂಡಿರಲು, ಬಾದಶಹನು ಪುನಃ ಅವನನ್ನು ಕುರಿತು ನುಡಿದದ್ದೇನಂದರೆ:—"ಶಿವಾಜಿಯು ಮಾರ್ಗಾಯಾಸವನ್ನು ಕಳಕೊಳ್ಳಲಿ; ಆತನ ಮನಸ್ಸಿಗೆ ಪೂರ್ಣಸಮಾಧಾನವಾಯಿತೆಂದರೆ ಅವನನ್ನು ದರಬಾರಕ್ಕೆ ಕರೆಯಿಸಿಕೊಳ್ಳಲಾಗುವದು."

ಮಹಾರಾಜರು ಆಗ್ರ್ಯದಲ್ಲಿ ವಸತಿಯನ್ನು ಮಾಡಿ ಒಂದು ದಿನವಾಯಿತು, ಎರಡು ದಿನಗಳಾದವು; ಹೀಗೆ ನಾಲ್ಕೈದು ದಿವಸಗಳು ಕಳೆದು ಹೋದವು; ಬಾದಶಹನು ಮಹಾರಾಜರನ್ನು ದರಬಾರಕ್ಕೆ ಕರೆಯಿಸಿಕೊಳ್ಳಲಿಲ್ಲ ಮಹಾರಾಜರಿಗೆ ಸುಮ್ಮನೆ ಕೂತು ಕೂತು ಬೇಸರ ಒಂದಿತು. ತಾನಾಜಿ, ಏಸಾಜಿ ಕಂಕ, ಶ್ರೀಧರಸ್ವಾಮಿ ಇವರೇ ಮೊದಲಾದವರು ದಿನಾಲು ಆಗ್ರ್ಯಪಟ್ಟಣವನ್ನೆಲ್ಲ ಅಡ್ಡಾಡಿ ಅಲ್ಲಿಯ ಜನರ ಪರಿಚಯವನ್ನು ಮಾಡಿಕೊಂಡು ಬರುತ್ತಿದ್ದರು. ಬಾದಶಹನ ಭೆಟ್ಟಿಯಾಗುವವರೆಗೆ ಮಹಾರಾಜರು ಯಾರ ಭೆಟ್ಟಿಗೂ ಹೋಗುವ ಹಾಗಿಲ್ಲದ್ದರಿಂದ ಅವರಿಗೆ ದಿವಾಣಖಾನೆಯು ಬೇಸರಿಟ್ಟಿತು. ಆಗ ಅವರು ರಾಮಸಿಂಗನೊಡನೆ ಆಲೋಚಿಸಿ ಆಗ್ರ್ಯದೊಳಗಿನ ದೊಡ್ಡ ದೊಡ್ಡ ಗೃಹಸ್ಥರಿಗೆ ಕಾಣಿಕೆಗಳನ್ನು ಕಳಿಸತೊಡಗಿದರು. ಆ ಕಾಣಿಕೆಗಳನ್ನು ಕಳಿಸುವಾಗ ಅವರು ಬಳೆಯು

ತ್ತಿದ್ದ ಪತ್ರದ ಸಂಗತಿಯೇನಂದರೆ:—"ನಾನು ಬಾದಶಹನ ಆಮಂತ್ರಣದಿಂದ ಇಲ್ಲಿಗೆ ಬಂದಿದ್ದು ಬಾದಶಹನ ಆದರಾತಿಥ್ಯವನ್ನು ಕೈಕೊಳ್ಳುತ್ತ ಸುಖವಾಗಿ ಇರುವೆನು ಎಲ್ಲ ಮಾತುಗಳಿಂದ ನಾನೂ ನೀವೂ ಒಂದೇ ಇರುವ ಕಾರಣ ಉಭಯತರಲ್ಲಿ ಪ್ರೇಮವು ಅಭಿವೃದ್ಧಿಯಾಗಬೇಕು."

ಕಾಣಿಕೆಗಳಿಂದ ತುಂಬಿದ ಪೆಟ್ಟಿಗೆಗಳು ದಿನಾಲು ಹೋಗಹತ್ತಿದ್ದವು; ಅದರಲ್ಲಿ ಏನು ಇರುತ್ತದೆಂಬದನ್ನು ಯಾರೂ ತೆಗೆದು ನೋಡುತ್ತಿರಲಿಲ್ಲ; ಈ ಸಂಗತಿಯು ಬಾದಶಹನ ಕಿವಿತನಕ ಹೋದರೂ ಅವನೂ ಅದರ ಕಡೆಗೆ ಲಕ್ಷ್ಯಗೊಡಲಿಲ್ಲ. ಹೀಗೆ ಶಿವರಾಜನ ಕಾಣಿಕೆಗಳ ಪ್ರವಾಹವು ಹಬ್ಬಿ ಹರಿಬಿದ್ದಿರಲು, ಮಹಾರಾಜರನ್ನು ದರಬಾರಕ್ಕೆ ಕರೆಯಿಸುವ ದಿವಸವನ್ನು ಬಾದಶಹನು ಗೊತ್ತುಪಡಿಸಿದನು. ಆ ದಿವಸ 'ಆಮಖಾಸ' ಎಂಬ ದಿವಾಣಖಾನೆಯಲ್ಲಿ ದರಬಾರದ ಸಿದ್ಧತೆಯು ಬಹಳ ಭರದಿಂದ ನಡೆಯಿತು. ಇತ್ತ ಮಹಾರಾಜರು ತಮ್ಮ ಪೋಷಾಕನ್ನು ಹಾಕಿಕೊಂಡು ತಮ್ಮ ಪಲ್ಲಕ್ಕಿಯನ್ನು ಶೃಂಗರಿಸಲಿಕ್ಕೆ ಆಜ್ಞಾಪಿಸಿದರು. ಅಷ್ಟರಲ್ಲಿ ಬಾದಶಹನಿಂದ ಒಂದು ಪಲ್ಲಕ್ಕಿಯು ಬಂದಿತು; ಅದರಲ್ಲಿ ಕುಳಿತುಕೊಳ್ಳಬೇಕೆಂದು ಅಲ್ಲಿಯ ಜನರು ಆಗ್ರಹಮಾಡಿದರು; ಆದರೆ ಮಹಾರಾಜರು ಅದರಲ್ಲಿ ಕುಳಿತುಕೊಳ್ಳದೆ, ಸಂಭಾಜಿಯನ್ನು ಕೂಡ್ರಿಸಿ ತಾವು ತಮ್ಮ ಪಲ್ಲಕ್ಕಿಯಲ್ಲಿಯೇ ಕುಳಿತು ದರ್ಬಾರಕ್ಕೆ ನಡೆದರು ಸಂಗಡ ರಾಮಸಿಂಗನ ಸೈನ್ಯವು ಇದ್ದದರಿಂದ ಮಹಾರಾಜರು ವೈಭವದಿಂದಲೇ ದರ್ಬಾರಕ್ಕೆ ಹೊರಟ ಹಾಗಾಯಿತು ಮಹಾರಾಜರನ್ನು ಎಷ್ಟು ಸಾರೆ ನೋಡಿದರೂ ತೃಪ್ತಿಹೊಂದದ ಆಗ್ರ್ಯಾದ ನಿವಾಸಿಗಳು ಬೀದಿ ಬೀದಿಗಳಲ್ಲಿ ಧಾವಿಸುತ್ತ ನೋಡಬಂದರು; ದೊಡ್ಡ ದೊಡ್ಡ ಸರದಾರರ ಮನೆಯ ಝನಾನಖಾನೆಯವರೂ, ಅಮೀರಉಮರಾವ ಇವರ ಮನೆಗಳ ಹೆಂಗಸರೂ, ಖುದ್ದ ಬಾದಶಾಹೀ ಅಂತಃಪುರದ ಸ್ತ್ರೀಯರೂ ಸೌಧಗಳನ್ನೇರಿ ಮಹಾರಾಜರನ್ನು ನೋಡಲಿಕ್ಕೆ ತವಕಿಸುತ್ತಿದ್ದರು. ಆಗಿನ ಕಾಲದ ಆ ರಾಜಬೀದಿಯ ನೋಟವು ಅಶ್ರುತಪೂರ್ವವಾಯಿತು. ಮಹಾರಾಜರ ಮುಂದೆ ಸನಾದಿ, ಕಹಳೆ, ಕರ್ಣೆ, ಮರ್ಫೆ ಮೊದಲಾದ ವಾದ್ಯಗಳು ಬಾರಿಸುತ್ತಿರಲು, ಚಾಮರಗಳು ಎಡಬಲಗಳಲ್ಲಿ ಒಪ್ಪುತ್ತಿರಲು ಪಲ್ಲಕ್ಕಿಯು ದರ್ಬಾರಖಾನೆಯ ಒಳಗೆ ಬಂದಿತು. ರಾಮಸಿಂಗನು ಮಹಾರಾಜರನ್ನು ಕರಕೊಂಡು ಹೋಗಿ ಅವರನ್ನು ಉಚ್ಚ ಪ್ರತಿಯ ಸರದಾರರ ಆಸನದಲ್ಲಿ ಕುಳ್ಳಿರಿಸಿದನು. ಬಾದಶಹನ ದರ್ಬಾರವೆಂದರೆ ಕೇಳುವದೇನು? ಆ ದಿವಾಣಖಾನೆಯ ವೈಭವಕ್ಕೆ

ಎಣೆಯೇ ಇರಲಿಲ್ಲ ಆದರಲ್ಲಿ ಬಾದಶಹನು ತನ್ನ ವೈಭವದ ಹೆಚ್ಚಳವನ್ನು ಶಿವಾಜಿಗೆ ತೋರಿಸಿ ಅವನನ್ನು ನಾಚಿಸಬೇಕೆಂದು ಬುದ್ಧಿಪೂರ್ವಕವಾಗಿ ದಿವಾಣಖಾನೆಯನ್ನು ಅಲಂಕೃತವಾಗ ಮಾಡಿಸಿದ್ದನು. ಮಹಾರಾಜರು ಆ ದಿವಾಣಖಾನೆಯನ್ನು ದಿಟ್ಟಿಸಿ ನೋಡುತ್ತಿರಲು, ಬಾದಶಹನ ಆಗಮನಸೂಚಕವಾದ ವಾದ್ಯವು ಬಾರಿಸಿತು. ಕೂಡಲೆ ದರ್ಬಾರದೊಳಗಿನ ಎಲ್ಲ ಜನರೂ ಎದ್ದು ನಿಂತರು. ಮಹಾರಾಜರು ಎದ್ದು ನಿಲ್ಲಲಿಕ್ಕೆ ಸಂಕೋಚಪಡಲು, ರಾಮಸಿಂಗನು ಸಂಜ್ಞೆ ಮಾಡಿದನು. ಆಗ ಮಹಾರಾಜರು ಅತಿ ಕಷ್ಟದಿಂದ ಎದ್ದು ನಿಂತರು. ಅಷ್ಟರಲ್ಲಿ ಬಾದಶಹನು ಝನಾನಖಾನೆಯನ್ನು ಪ್ರವೇಶಿಸಿದನು. ಬಾದಶಹನ ಪೋಷಾಕನ್ನು ನೋಡಿ ದರ್ಬಾರದೊಳಗಿನ ಎಲ್ಲ ಜನರಿಗೂ ಆಶ್ಚರ್ಯವಾಯಿತು. ವಸ್ತ್ರಭೂಷಣಗಳ ಆಡಂಬರಕ್ಕೆ ಸೇರದ ಬಾದಶಹನು, ಈ ದಿವಸ ಕೇವಲ ಶಿವಾಜಿ ಮಹಾರಾಜರಿಗೆ ತನ್ನ ವೈಭವವನ್ನು ತೋರಿಸುವದಕ್ಕಾಗಿ ಬಾದಶಾಹೀ ಪೋಷಾಕನ್ನು ಹಾಕಿಕೊಂಡು ಬಂದಿದ್ದನು.

ಹೀಗೆ ಬಾದಶಹನು ಬಂದು ಎಲ್ಲ ಜನರ ಕುರ್ನಿಸಾತನ್ನು ಕೈಕೊಂಡು, ಸಿಂಹಾಸನದ ಮೇಲೆ ಕೂಡ್ರಲು, ಸಭಿಕರೆಲ್ಲರೂ ಕೂತರು. ಆಗ ಬಾದಶಹನು ತನ್ನ ತೀಕ್ಷ್ಣದೃಷ್ಟಿಯಿಂದ ಒಮ್ಮೆ ಸಭೆಯನ್ನೆಲ್ಲ ನೋಡಿ, ಬಳಿಕ ರಾಮಸಿಂಗನ ಕಡೆಗೆ ನೋರೆ ಮಾಡಿದನು. ಆಗ ರಾಮಸಿಂಗನು ಬಾದಶಹನ ಅಭಿಪ್ರಾಯವನ್ನು ತಿಳಿದು, ಮಹಾರಾಜರಿಗೆ ಸಿಂಹಾಸನದ ಬಳಿಗೆ ಹೋಗಿ ಕುರ್ನಿಸಾತನ್ನು ಮಾಡಿಬರಲಿಕ್ಕೆ ಸೂಚಿಸಿದನು. ಆ ಸೂಚನೆಯನ್ನು ಕೇಳಿ ಮಹಾರಾಜರ ಹುಬ್ಬುಗಳು ಗಂಟಿಕ್ಕಿದವು; ಅವರ ತುಟಿಗಳು ನಡುಗಹತ್ತಿದವು; ಅದನ್ನು ಕಂಡು ರಾಮಸಿಂಗನು ಭಯಪಟ್ಟು, ಮಹಾರಾಜರಿಗೆ ಬಹಳ ಆಗ್ರಹವನ್ನು ಮಾಡಿದನು. ಮಹಾರಾಜರು ನಿರ್ವಾಹವಿಲ್ಲದೆ ಎದ್ದು ನಿಂತು, ಬಾದಶಹನ ಬಳಿಗೆ ಹೋಗಿ ಕುರ್ನಿಸಾತನ್ನು ಮಾಡಿದರು. ಗರ್ವಿಷ್ಠನಾದ ಆಲಮಗೀರ ಬಾದಶಹನು ಮಹಾರಾಜರ ಕುರ್ನಿಸಾತನ್ನು ತಕ್ಕೊಂಡೂ-ತಕ್ಕೊಳ್ಳದವನಂತೆ ನಟಿಸಿ, ನಾಲ್ಕನೆ ತರಗತಿಯ ಸರದಾರರಲ್ಲಿ ಕೂಡ್ರಲಿಕ್ಕೆ ಮಹಾರಾಜರಿಗೆ ಸನ್ನೆ ಮಾಡಿದನು; ಆದರೆ ಈ ಭಯಂಕರವಾದ ಅಪಮಾನವನ್ನು ಸಹಿಸುವದು ಮಹಾರಾಜರಿಂದಾಗಲಿಲ್ಲ. ಆಗ ಅವರು ಸಿಟ್ಟಿನಿಂದ ಸಂತಪ್ತರಾದರು. ದಕ್ಷಿಣೀರಾಜನ ಈ ಸಂತಾಪಾಗ್ನಿಯಿಂದ ಆಲಮಗೀರನು ಈಗಲೇ ಭಸ್ಮೀಭೂತನಾಗುವನೋ ಏನೋ ಎಂಬಹಾಗೆ ತೋರಿತು.

ಬಾದಶಹನು ತನ್ನನ್ನು ಗೌರವದಿಂದ ನಡೆಯಿಸಿಕೊಳ್ಳುವನೆಂಬ ನಂಬಿಗೆಯಿಂದ ಬಂದಿದ್ದ ಮಹಾರಾಜರು ಆ ನಂಬಿಗೆಯು ವ್ಯರ್ಥವಾಯಿತೆಂದು ತಿಳಿದ ಕೂಡಲೆ ಬಾದಶಹನ ಕಡೆಗೆ ಬೆನ್ನು ಮಾಡಿ, ಸನ್ನೆಯಿಂದ ತಮ್ಮ ಜನರನ್ನು ಬರ ಮಾಡಿಕೊಂಡು ದರ್ಬಾರದಿಂದ ಹೊರಟು ನಡೆದರು. ರಾಮಸಿಂಗನು ಮುಂದೆ ಏನು ಪ್ರಸಂಗವೊದಗುವದೋ ಎಂದು ಭಯಪಟ್ಟನು. ದರ್ಬಾರದೊಳಗಿನ ಜನರು ಮಹಾರಾಜರ ಧೈರ್ಯವನ್ನು ಕೊಂಡಾಡಿದರು. ಆಗ ರಾಮಸಿಂಗನು ಲಗುಬಗೆಯಿಂದ ಹೋಗಿ, ಮಹಾರಾಜರನ್ನು ಕರೆತರುವ ಪ್ರಯತ್ನ ಮಾಡಿದನು; ಆದರೆ ಅದು ವ್ಯರ್ಥವಾಯಿತು. ಬಳಿಕ ಅವನು ಬಾದಶಹನ ಬಳಿಗೆ ಬಂದು:— "ಜಹಾಂಪನಾ, ಶಿವಾಜಿಯು ಸನ್ನಿಧಿಯಲ್ಲಿ ಒಂದು ವಿಜ್ಞಾಪನೆಯನ್ನು ಮಾಡಿಕೊಂಡಿರುವನು. ಅದು ಏನಂದರೆ:—ನಾನು ಹಳ್ಳಿಗಾಡ ಮನುಷ್ಯನು; ನನಗೆ ದರ್ಬಾರದ ನಡವಳಿಕೆಗಳು ಗೊತ್ತಿಲ್ಲ; ಅದರಲ್ಲಿಯೂ ಇಂಥ ದಿವಾಣಖಾನೆಯನ್ನು ನಾನು ಎಂದೂ ನೋಡಿಲ್ಲ; ಆದ್ದರಿಂದ ದಿವಾಣಖಾನೆಯಲ್ಲಿ ನಿಂತಾಗ ನನಗೆ ಕಣ್ಣಿಗೆ ಬವಳಿಬಂದು. ಇಲ್ಲಿಯೇ ಕಡಕೊಂಡು ಬೀಳುವೆನೋ ಎಂಬಂತಾದ್ದರಿಂದ ನಾನು ದರ್ಬಾರದಿಂದ ಹೊರಟು ಹೋದೆನು; ಕ್ಷಮೆಯಿರಬೇಕು." ಎಂದು ಹೇಳಿಕೊಂಡಿರುವನು. ಅವನ ಈ ತಪ್ಪನ್ನು ಹುಜೂರಿಂದ ಕ್ಷಮಿಸುವದಾಗಬೇಕು; ಎಂದು ಸುಳ್ಳೇ ಹುಟ್ಟಿಸಿಕೊಂಡು ಅರ್ಜಮಾಡಿಕೊಂಡನು. ಆಗ ಬಾದಶಹನು ರಾಮಸಿಂಗನ ಅರಿಕೆಯಂತೆ ಶಿವಾಜಿಯ ಅಪರಾಧವನ್ನು ಕ್ಷಮಿಸಿದ್ದೇನೆಂದು ಜಾಹೀರ ಮಾಡಿದನು; ಮತ್ತು ಸಂಭಾಜಿಗೆ ೫ ಸಾವಿರ ರಾಹುತರ ಮನಸಬದಾರೀ ವಸ್ತ್ರವನ್ನು ಕೊಟ್ಟಿರುವೆನೆಂದು ಪ್ರಸಿದ್ಧ ಮಾಡಿ, ಆ ಅಧಿಕಾರದ ಪತ್ರವನ್ನು ಸಂಭಾಜಿಯ ಕಡೆಗೆ ಕಳಿಸಿಕೊಟ್ಟನು. ಬಾದಶಹನ ಈ ಎಲ್ಲ ಕೃತಿಗಳಿಂದ ಮೊಗಲ ಸರದಾರರಿಗೆ ಅತಿಶಯವಾದ ಸಿಟ್ಟು ಬಂದಿತು. ಹಿಂದೂ ಸರದಾರರು ಮಾತ್ರ ಬಾದಶಹನ ಈ ವಿಲಕ್ಷಣ ಕೃತಿಗೆ ಬೇರೆ ಬೇರೆ ತರ್ಕಗಳನ್ನು ಮಾಡತೊಡಗಿದರು. ಇಷ್ಟಾಗಿ ಸಭೆಯು ಬರಖಾಸ್ತವಾಗಲು, ಎಲ್ಲ ಸರದಾರರೂ ತಮ್ಮ ತಮ್ಮ ಮಂದಿರಗಳಿಗೆ ತೆರಳಿದರು. ದರ್ಬಾರದ ಎಲ್ಲ ಜನರಲ್ಲಿಯೂ ಮಹಾರಾಜರ ದಿಟ್ಟತನದ ಶ್ಲಾಘನೆಯೇ ಕಂಡುಬರತೊಡಗಿತು.

ಈ ಮಾತಿಗೆ ೩-೪ ದಿನಗಳು ಕ್ರಮಿಸಿಹೋದವು; ಮುಂದೆ ಒಂದು ದಿನ ಬಾದಶಹನು ಪುನಃ ಶಿವಾಜಿಯನ್ನು ದರ್ಬಾರಕ್ಕೆ ಕರೆಕಳುಹಿದನು. ಶಿವಾಜಿಯನ್ನು ವಕ್ರದೃಷ್ಟಿಯಿಂದ ನೋಡುತ್ತಿದ್ದ ಬಾದಶಹನು ಈ ದಿನ ದರ್ಬಾರದಲ್ಲಿ ಅವನನ್ನು

ಇನ್ನಿಷ್ಟು ಅಪಮಾನಗೊಳಿಸಬೇಕೆಂದು ಯೋಚಿಸುತ್ತಿರಲು, ತೇಜಸ್ವಿಯಾದ ಶಿವರಾಜನು ಬಾದಶಹನ ಆಮಂತ್ರಣವನ್ನು ಮನ್ನಿಸಲಿಲ್ಲ. ಆಗ ಕ್ರುದ್ಧನಾದ ಆಲಮಗೀರನು ಹಿಂದು-ಮುಂದು ನೋಡದೆ, ಶಿವಾಜಿಯನ್ನು ಸೆರೆಯಲ್ಲಿಡಬೇಕೆಂದು ಹುಕುಮು ಮಾಡಿದನು. ಅಪ್ಪಣೆಯಂತೆ ಕ್ಷಿಪ್ರದಲ್ಲಿಯೇ ಕಾರ್ಯವು ಜರಗಿತು. ಈ ಭಯಂಕರವಾದ ಹುಕುಮಿನಿಂದ ಹಿಂದೂ ಜನರಲ್ಲಿ ಹಾಹಾಕಾರವೆದ್ದಿತು! !



## ೧೬—ಉಪಸಂಹಾರ.

ಪ್ರಿಯ ವಾಚಕರೇ, ನಮ್ಮ ಮಹಾರಾಷ್ಟ್ರ ಸೂರ್ಯನಿಗೆ ಗ್ರಹಣವು ಹಿಡಿದದ್ದರಿಂದ ನಮ್ಮ ಸೂರ್ಯಗ್ರಹಣ ಕಾದಂಬರಿಯು ಮುಗಿದಂತಾಯಿತು. ತೇಜಸ್ವಿಯಾದ ಭಗವಾನ್ ಸೂರ್ಯನಾರಾಯಣನು ರಾಹು-ಗ್ರಹವನ್ನು ದೂಡಿ ತನ್ನ ದರ್ಶನದಿಂದ ಪುನಃ ಲೋಕಕ್ಕೆಲ್ಲ ಆನಂದಕೊಡುತ್ತಿರುವಂತೆ, ನಮ್ಮ ಮಹಾರಾಷ್ಟ್ರ ಸೂರ್ಯನಾದರೂ ಬಹಳ ದಿವಸ ಔರಂಗಜೇಬ ಬಾದಶಹನ ಸೆರೆಯಲ್ಲಿ ಕೊಳೆಯುತ್ತ ಬಿಳಲಿಲ್ಲ; ಶ್ರೀಸಮರ್ಥರ ಹಾಗೂ ಅಂಬಾಭವಾನಿಯ ಕೃಪೆಯು ಅವರ ಮೇಲೆ ಅಖಂಡವಾಗಿ ಇದ್ದದರಿಂದ ಅವರಿಗೆ ಈ ಕಠಿಣ ಪ್ರಸಂಗದಿಂದ ಸಹಜವಾಗಿ ಪಾರಾಗುವ ಒಂದು ಯುಕ್ತಿಯು ಹೊಳೆಯಿತು.

ಸೆರೆಮನೆಯಲ್ಲಿದ್ದಾಗ ಮಹಾರಾಜರು ತಮಗೆ ಜಡ್ಡು ಆಗಿರುವದೆಂದು ಸುದ್ದೀ ಹುಟ್ಟಿಸಿದರು. ಮಹಾರಾಜರ ಪ್ರಕೃತಿಯನ್ನು ನೋಡಲಿಕ್ಕೆ ವೈದ್ಯರೂ, ಹಕೀಮರೂ ಬರತೊಡಗಿದರು. ಮುಂದೆ ಕೆಲವು ದಿವಸಗಳ ಮೇಲೆ ಪ್ರಕೃತಿಯು ಸುಧಾರಿಸಿತೆಂದು ಪ್ರಸಿದ್ಧಿಸಿದರು. ತಾವು ಭಯಂಕರವಾದ ಬೇನೆಯಿಂದ ಪಾರಾಗಿ ಉಳಿದಿರುವೆವಾದ್ದರಿಂದ ಮಿಠಾಯಿ ಹಂಚುತ್ತೇವೆಂದು ಸುದ್ದಿಯನ್ನು ಹುಟ್ಟಿಸಿದರು. ಅದರಂತೆ ಉಮರಾವಾದಿ ದೊಡ್ಡ ದೊಡ್ಡ ಹಿಂದು ಹಾಗೂ ಮುಸಲ್ಮಾನ ಸರದಾರರ ಮನೆಗೆ ಮಿಠಾಯಿ ತುಂಬಿದ ಪೆಟ್ಟಿಗೆಗಳು ಹೋಗಹತ್ತಿದವು. ಸೆರೆಮನೆಯ ಕಾವಲುಗಾರರು ಮೊದಮೊದಲು ಒಂದೆರಡು ದಿನ ಆ ಪೆಟ್ಟಿಗೆಗಳ ಬಾಯಿ ತೆರೆದು ನೋಡುತ್ತಿದ್ದರು. ಶಿವಾಜಿಯು ಬದುಕಿ ಉಳಿದೆನೆಂಬ ಸಂತೋಷದಿಂದ ಮಿಠಾಯಿ ಹಂಚುವನೆಂದು ತಿಳಿದು, ಮುಂದೆ ಪೆಟ್ಟಿಗೆಗಳನ್ನು ಹಾಗೇ ಬಿಡಹತ್ತಿದರು. ಸೆರೆಮನೆಯ ಕಾವಲುಗಾರರು ಮನಸೋಕ್ತವಾಗಿ ಮಿಠಾಯಿಯನ್ನು ತಿಂದರು. ದಿನಾಲು ನೂರಾರು ಪೆಟ್ಟಿಗೆಗಳು ಹೋಗಹತ್ತಿದವು; ಬರಹತ್ತಿದವು. ಹೀಗೆ ಮಿಠಾಯಿ ಹಂಚುವ ಈ ಕೆಲಸವು ೧೫ ದಿವಸಗಳಗಟ್ಟಲೆ ಒಂದೇಸವನೆ ಸಾಗಿತು.

ಈ ಮೇರೆಗೆ ಸೆರೆಮನೆಯಲ್ಲಿ ಪೆಟ್ಟಗೆಗಳ ಸುಳಿದಾಟವು ನಡೆದಿರಲು, ಈ ಸಂಧಿಯನ್ನು ಸಾಧಿಸಿ, ಮಹಾರಾಜರು ಒಂದು ದಿನ ಸಂಭಾಜಿಯನ್ನು ಒಂದು ಪೆಟ್ಟಿಗೆಯಲ್ಲಿ ಕೂಡ್ರಿಸಿ, ತಾವೂ ಒಂದು ಪೆಟ್ಟಗೆಯಲ್ಲಿ ಕುಳಿತರು. ಮಹಾ

ರಾಜರ ನಂಬಿಗೆಯ ಸೇವಕರು ಕೂಡಲೆ ಆ ಪೆಟ್ಟಿಗೆಗಳನ್ನು ಹೊತ್ತುಕೊಂಡ ಆಗ್ರಾದಿಂದ ಬಹು ದೂರ ಹೋದರು ' ಒಳಿಕ ಅವರು ಒಂದು ಗುಪ್ತವಾ ಸ್ಥಳದಲ್ಲಿ ಪೆಟ್ಟಿಗೆಗಳನ್ನು ಇಳಿಸಲು, ಮಹಾರಾಜರು ಹೊರಗೆ ಬಂದು ತಮ್ಮ ಗಡ್ಡ-ಮೀಸೆಗಳನ್ನೆಲ್ಲ ತೆಗೆಯಿಸಿ, ಬೈರಾಗಿಯ ವೇಷವನ್ನು ಧಾರಣ ಮಾಡಿದರು ಸಂಭಾಜಿಗೂ, ತಾನಾಜಿಯೇ ಮೊದಲಾದ ನಂಬಿಗೆಯ ಸೇವಕರಿಗೂ ಬೈರಾಗಿಯ ವೇಷವು ಕೊಡಲ್ಪಟ್ಟಿತು. ನಂತರ ಅವರೆಲ್ಲರೂ ದಕ್ಷಿಣದ ಹಾದಿಯನ್ನು ಹಿಡಿದು ೭-೮ ತಿಂಗಳ ವರೆಗೆ ತೀರ್ಥ ಯಾತ್ರೆಗಳನ್ನು ಕುರಿತು ತಿರುಗುತ್ತ, ಶ್ರೀ ಅಂಬ ಮಾತೆಯ ಕೃಪೆಯಿಂದ ರಾಜಗಡಕ್ಕೆ ಬಂದರು; ಆಗ ಮರಾಟಾಸಾಮ್ರಾಜ್ಯ ಕ್ಕಾದ ಆನಂದವನ್ನು ಬಣ್ಣಿಸಲಾಸಲ್ಲ! ಜೀಜಾಬಾಯಿಯವರಿಗಂತೂ ಮಗನ ಪುನಃ ಹುಟ್ಟಿಬಂದಂತಾಗಿ ಅವರ ಅಂತಃಕರಣವು ಬಿಗಿದು ಬಂದಿತು!! ಎಲ್ಲ ಕ ಗೂ ಆನಂದೋತ್ಸವಗಳು ನಡೆದವು.

ಸಂಪೂರ್ಣವಾದುದು.

